# ಬಸರೂರಿನ ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು

ಕೆ.ಕಿಶೋರ ಕುಮಾರ ಶೆಟ್ಟಿ

ಮಾರ್ಗದರ್ಶಕರು

ಡಾ. ಎ. ಸುಬ್ಬಣ್ಣ ರೈ
ಪ್ರಾಧ್ಯಾಪಕರು



ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬
೨೦೧೧

# ಬಸರೂರಿನ ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು

**ಕೆ.ಕಿಶೋರ ಕುಮಾರ ಶೆಟ್ಟಿ**

ಮಾರ್ಗದರ್ಶಕರು

**ಡಾ. ಎ. ಸುಬ್ಬಣ್ಣ ರೈ**

ಪ್ರಾಧ್ಯಾಪಕರು






ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

೨೦೧೧

# ಸಂಶೋಧಕರ ಪ್ರಮಾಣ ಪತ್ರ

ಬಸರೂರಿನ ಸಾಂಸ್ಕೃತಿಕ ಅಧ್ಯಯನ ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ ಪದವಿಗಾಗಿ ಡಾ.ಎ.ಸುಬ್ಬಣ್ಣ ರೈಯವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸುತ್ತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.



ಸ್ಥಳ : ವಿದ್ಯಾರಣ್ಯ
ದಿನಾಂಕ : ೧೫-೧೨-೨೦೧೧

(ಕೆ.ಕಿಶೊರ ಕುಮಾರ ಶೆಟ್ಟಿ)
ಪಿಎಚ್.ಡಿ ಸಂಶೋಧನಾ ವಿದ್ಯಾರ್ಥಿ
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

# ಮಾರ್ಗದರ್ಶಕರ ದೃಢೀಕರಣ ಪತ್ರ

ಕೆ. ಕಿಶೋರ ಕುಮಾರ ಶೆಟ್ಟಿಯವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಬಸರೂರಿನ ಸಾಂಸ್ಕೃತಿಕ ಅಧ್ಯಯನ ಎಂಬ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸುತ್ತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೫-೧೨-೨೦೧೧

(ಡಾ. ಎ. ಸುಬ್ಬಣ್ಣ ರೈ)
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

# ಪರಿವಿಡಿ


| ಅಧ್ಯಾಯ | ವಿವರ | ಪುಟ |
| --- | --- | --- |
| ಒಂದು | **ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸಮೀಕ್ಷೆ** | ೧–೯ |
| | ೧.೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ | |
| | ೧.೨. ಇದುವರೆಗಿನ ಅಧ್ಯಯನಗಳ ಸಮೀಕ್ಷೆ | |
| ಎರಡು | **ಪ್ರಸ್ತಾವನೆ–ವಿಷಯ ಪ್ರವೇಶ** | ೧೦–೪೩ |
| | ೨.೧. ಸಾಂಸ್ಕೃತಿಕ ಅಧ್ಯಯನ–ತಾತ್ವಿಕ ಚರ್ಚೆ | |
| | ೨.೨. ಭೌಗೋಳಿಕ ಹಿನ್ನೆಲೆ | |
| | ೨.೩. ಸ್ಥಳನಾಮ ವಿವೇಚನೆ | |
| | ೨.೪. ಐತಿಹಾಸಿಕ ಹಿನ್ನೆಲೆ | |
| | ೨.೫. ಜನಸಮುದಾಯ ಮತ್ತು ಭಾಷೆ | |
| ಮೂರು | **ಶಾಸನಗಳಲ್ಲಿ ಸಂಸ್ಕೃತಿ** | ೪೪–೬೨ |
| ನಾಲ್ಕು | **ಸಾಹಿತ್ಯ ಮತ್ತು ಸಂಸ್ಕೃತಿ** | ೬೩–೯೪ |
| | ೪.೧. ಮೌಖಿಕ ಸಾಹಿತ್ಯ | |
| | ೪.೨. ಗ್ರಂಥ ಸಾಹಿತ್ಯ | |
| ಐದು | **ಪ್ರದರ್ಶನಕಲೆ ಮತ್ತು ಸಂಸ್ಕೃತಿ** | ೯೫–೧೦೯ |
| ಆರು | **ಗುಡಿಗಾರಿಕೆ–ಕರಕುಶಲಕಲೆ ಮತ್ತು ಜನಪದ ವಾಸ್ತು** | ೧೧೦–೧೩೧ |
| | ೬.೧. ಗುಡಿಗಾರಿಕೆ–ಕರಕುಶಲಕಲೆ | |
| | ೬.೨. ಜನಪದ ವಾಸ್ತು | |

| ಅಧ್ಯಾಯ | ವಿವರ | ಪುಟ |
| --- | --- | --- |
| ಏಳು | ವಾರ್ಷಿಕಾವರ್ತನದ ಆಚರಣೆಗಳು | ೧೩೨-೧೮೧ |
| | ೭.೧. ಕೃಷಿ ಸಂಬಂಧಿ ಆಚರಣೆ | |
| | ೭.೨. ದೈವಸ್ಥಾನ ಸಂಬಂಧಿ ಆಚರಣೆ | |
| | ೭.೩. ದೇವಾಲಯ ಸಂಬಂಧಿ ಆಚರಣೆ | |
| ಎಂಟು | ಜೀವನಾವರ್ತನದ ಆಚರಣೆಗಳು | ೧೮೨-೧೯೮ |
| ಒಂಬತ್ತು | ಸಮಾಪನ | ೧೯೯-೨೦೯ |
| | ಅನುಬಂಧ | ೨೧೦-೨೬೩ |
| | ೧. ವಕ್ತೃ ವಿವರ | |
| | ೨. ಮಾದರಿ ಪ್ರಶ್ನಾವಳಿ | |
| | ೩. ಪರಾಮರ್ಶನ ಸಾಹಿತ್ಯ | |
| | ೪. ಮೌಖಿಕ ಸಾಹಿತ್ಯ-ಆಯ್ದ ಪಠ್ಯಗಳು | |
| | ೫. ಛಾಯಾಚಿತ್ರಗಳು | |

# ಬಸರೂರಿನ ಭೌಗೋಳಿಕ ನಕ್ಷೆ



# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ – ವ್ಯಾಪ್ತಿ ಮತ್ತು ಸಮೀಕ್ಷೆ

## ೧.೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ದಕ್ಷಿಣ ಭಾರತದ ಸಾಂಸ್ಕೃತಿಕ ಪರಂಪರೆಗೆ ಕರ್ನಾಟಕದ ಸಾಂಸ್ಕೃತಿಕ ಕೊಡುಗೆ ಅಪಾರವಾದದು. ಕರಾವಳಿ ಕರ್ನಾಟಕದ ಮಧ್ಯಭಾಗದಲ್ಲಿರುವ ಉಡುಪಿ ಜಿಲ್ಲೆಯ ಉತ್ತರಕ್ಕೆ ಪಂಚಗಂಗಾವಳಿಯ ಹಿನ್ನೀರ ಪ್ರದೇಶದ ಐತಿಹಾಸಿಕ ನಗರವೇ ಬಸರೂರು. ಆಲೂಪರಿಂದ ಕೆಳದಿಯ ನಾಯಕರ ಕಾಲದವರೆಗೂ ಐತಿಹಾಸಿಕ ಪಟ್ಟಣವಾಗಿದ್ದ ಬಸರೂರು ತುಳುನಾಡಿನ ವ್ಯಾಪಾರ ವ್ಯವಹಾರಗಳ ಹೆಬ್ಬಾಗಿಲಾಗಿತ್ತು. ಈಗ ಒಂದು ಸಾಮಾನ್ಯ ಪಂಚಾಯತ ಪ್ರದೇಶವಾಗಿದೆ.

ಸ್ವಾತಂತ್ರ್ಯೋತ್ತರದಲ್ಲಿ ಆಧುನಿಕತೆ ಮತ್ತು ನಗರೀಕರಣದ ಪ್ರಭಾವಕ್ಕೆ ಅನೇಕ ಪಟ್ಟಣಗಳು ಒಳಗಾಗಿದೆ. ಬಸರೂರು ಮಾತ್ರ ಪ್ರತ್ಯೇಕವಾಗಿ ಇವೆಲ್ಲವುಗಳಿಂದ ಮುಕ್ತವಾಗಿದ್ದು ಇಂದಿಗೂ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಕಾಪಾಡಿಕೊಂಡು ಬಂದಿದೆ. ಬಸರೂರಿನ ಮಾಗಣೆಗಳಲ್ಲಿ ಸಂಸ್ಕೃತಿಯ ಹೊನಲು ಹರಿಯುತ್ತಿದೆ. ಪಂಚಗಂಗಾವಳಿಯಲ್ಲಿ೧ ಒಂದಾಗಿರುವ ವಾರಾಹಿ ನದಿ ಬಸರೂರಿನ ನಡುವನ್ನು ಸೀಳಿಕೊಂಡು ಹರಿಯುತ್ತಿದೆ. ಪ್ರಕೃತಿದತ್ತವಾದ ನೈಸರ್ಗಿಕ ಸಂಪತ್ತು ಮತ್ತು ಸೌಂದರ್ಯ ಬಸರೂರಿಗಿದೆ. ನದಿಗಳು, ಪರ್ವತಗಳು, ಹಸಿರಿನಿಂದ ಕೂಡಿದ ದ್ವೀಪಗಳು, ಹೊಲಗದ್ದೆಗಳು ಬಸರೂರಿಗೆ ಭೌಗೋಳಿಕ ಹಿನ್ನೆಲೆಯಾಗಿ ಬಸರೂರಿನ ಇತಿಹಾಸಕ್ಕೆ ಸಾಕ್ಷಿಯಾಗಿ ನಿಂತಿವೆ. ಈ ಹಿನ್ನೆಲೆಯೇ ಬಸರೂರಿನ ಕೀರ್ತಿಗೆ, ಸಂಸ್ಕೃತಿಗೆ ಪ್ರೇರಣೆ. ಬಸರೂರು ಪಟ್ಟಣದೊಳಗಿನ ಭೌಗೋಳಿಕ ವೈವಿಧ್ಯ ಬಸರೂರಿನ ಇತಿಹಾಸದ ಪೂರ್ವಸ್ಮೃತಿಗಳಾಗಿವೆ.

ಶಾಸನ ಉಲ್ಲೇಖಿತ ಬಸರೂರು ಮಾಗಣೆಯ ಗ್ರಾಮಗಳಾದ ಬಸರೂರು, ಕಂದಾವರ, ಆನಗಳ್ಳಿ, ಜಪ್ತಿ, ಬಳ್ಕೂರು ಒಂದು ಮಂಡಲದ ಉಪಾಧಿಯಲ್ಲಿದ್ದು ವಾರಾಹಿ ನದಿಯ

ತೀರವನ್ನು ಆಕ್ರಮಿಸಿಕೊಂಡಿದೆ. ಈ ಎಲ್ಲಾ ಪ್ರದೇಶಗಳ ನಡುವೆ ಭಾಷಿಕವಾಗಿ ಏಕರೂಪತೆ ಇದ್ದರೂ ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ ವೈವಿಧ್ಯತೆ ಇದೆ. ಆದುದರಿಂದ ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ ಅಧ್ಯಯನಕ್ಕೆ ಪೂರಕ ನೆಲೆಯಾಗಿವೆ.

ಬಸರೂರಿನ ಪ್ರಾಚೀನತೆ ಪ್ರಾಗೈತಿಹಾಸಿಕ[೨] ಕಾಲದವರೆಗೂ ಹಿಮ್ಮಡಿ ಇಡುತ್ತದೆ. ಇಲ್ಲಿ ದೊರಕಿದ ಪ್ರಾಚೀನ ಅವಶೇಷಗಳು ಇತಿಹಾಸ ಪೂರ್ವ ಕಾಲದಲ್ಲಿ ಬಸರೂರಿನಲ್ಲಿ ಮಾನವನು ವಾಸವಾಗಿರಬಹುದೆಂಬ ಸಾಧ್ಯತೆಗಳನ್ನು ಸೃಷ್ಟಿಸುತ್ತದೆ.

ಬಸರೂರು ದೇವಾಲಯಗಳ ನಗರವಾಗಿದೆ. ಬಸರೂರಿನಲ್ಲಿ ಧಾರ್ಮಿಕ ಮತ್ತು ಸಾಂಸ್ಕೃತಿಕ ಶ್ರೀಮಂತಿಕೆಯ ಸಂಕೇತವಾದ ಇಪ್ಪತ್ತೇಳು ದೇವಾಲಯಗಳು, ನಲವತ್ತಕ್ಕು ಮಿಕ್ಕಿ ದೈವಸ್ಥಾನಗಳು, ನಾಲ್ಕು ಗರಡಿಗಳು, ಎರಡು ಮಸೀದಿ, ಎರಡು ಕ್ರೈಸ್ತ ಪ್ರಾರ್ಥನಾ ಮಂದಿರಗಳು, ಎರಡು ಮಠಗಳು, ಎರಡು ಅಗ್ರಹಾರಗಳಿವೆ. ಬಸರೂರು ಹಳ್ಳಿ ಮತ್ತು ನಗರದ ಸಂಸ್ಕೃತಿಯನ್ನು ಹೊಂದಿದ ಒಂದು ವಿಶಿಷ್ಟ ಪ್ರದೇಶವಾಗಿದೆ. ಬಸರೂರನ್ನು ಸುತ್ತುವರಿದಿರುವ ಪಂಚಗ್ರಾಮಗಳಲ್ಲಿ ಪ್ರಾಕೃತಿಕವಾಗಿ ಏಕರೂಪತೆ ಇದೆ. ಆದರೆ ಇವೆಲ್ಲವುಗಳಿಗೆ ಕೇಂದ್ರವಾಗಿರುವ ಬಸರೂರಿನ ಅಂತರ್‌ಪ್ರಾಕೃತಿಕ ಸನ್ನಿವೇಶದಲ್ಲಿ ವೈವಿಧ್ಯತೆಯಿದೆ. ಈ ವೈವಿಧ್ಯತೆ ವಿವಿಧ ಬಗೆಯ ದೇವರು, ದೈವ, ಆಚರಣೆಗಳ ಹುಟ್ಟಿಗೆ ಕಾರಣವಾಗಿದೆ.

ಬಸರೂರು ತುಳುರಾಜ್ಯದ ಹೆಬ್ಬಾಗಿಲು ಎನಿಸಿಕೊಂಡಿದೆ. ವಿವಿಧ ದೇಶದ ಜನರು ತುಳುನಾಡಿಗೆ ಬಸರೂರಿನ ಮೂಲಕ ಪ್ರವೇಶಿಸುತ್ತಿದ್ದರು. ಬಸರೂರಿನ ವ್ಯಾಪಾರ ವಹಿವಾಟಿನ ಮೇಲೆ ಹಿಡಿತ ಸಾಧಿಸಲು ಪೋರ್ಚುಗೀಸರು, ಬ್ರಿಟೀಷರು, ವಿಜಯನಗರದವರು, ಕೆಳದಿಯವರು, ಶಿವಾಜಿ ಹೈದರಾಲಿ ಮತ್ತು ಟಿಪ್ಪು ಸಂಘರ್ಷಕ್ಕೆ ಇಳಿದರು. ಬಸರೂರು ಪದೇಪದೇ ರಾಜಕೀಯ ದಾಳಿಗೆ ಒಳಗಾಗಿತ್ತು ಎನ್ನುವುದು ಇತಿಹಾಸ. ಬಸರೂರು ರಾಜಕೀಯ ಸಂಘರ್ಷದ ಕೇಂದ್ರವಾಗಿದ್ದಂತೆ, ಧಾರ್ಮಿಕ ಚಟುವಟಿಕೆಗಳ ಕೇಂದ್ರವು ಆಗಿದ್ದಿತ್ತು. ಇಲ್ಲಿ ವ್ಯಾಪಾರ, ರಾಜಿಕೀಯ ಮತ್ತು ಧಾರ್ಮಿಕತೆಗಳು ಪರಸ್ಪರ ಸಮಾನಾಂತರವಾಗಿದೆ. ೧೨ನೇ ಶತಮಾನದಿಂದ ೧೭ನೇ ಶತಮಾನದವರೆಗೆ ಬೇರೆ ಬೇರೆ ಅರಸರುಗಳ, ರಾಜ್ಯಪಾಲರ ಆಡಳಿತಕ್ಕೆ ಒಳಪಟ್ಟ ಬಸರೂರು ಕ್ರಿಶ ೧೭೯೯ ರವರೆಗೂ ರಾಜಕೀಯವಾಗಿ ತುಳುನಾಡಿನ ಭಾಗವಾಗಿದ್ದಿತ್ತು. ಬಸರೂರು ನಂತರ ಕೆನರಾ ಜಿಲ್ಲೆಯಲ್ಲಿ ಸೇರಿ ಮದ್ರಾಸ ಪ್ರೆಸಿಡೆನ್ಸಿಯ ಸುಪರ್ದಿಗೆ ಬಂತು. ಕ್ರಿಶ ೧೯೯೫ ರಿಂದ ಬಸರೂರು ಉಡುಪಿ ಜಿಲ್ಲೆಗೆ ಸೇರಿದ ಕುಂದಾಪುರ ತಾಲೂಕಿನ ಗ್ರಾಮ ಪಂಚಾಯತ್‌ನ ಕೇಂದ್ರವಾಗಿ ರಾಜಕೀಯವಾಗಿ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದೆ.

ಬಸರೂರಿನ ಸಾಂಸ್ಕೃತಿಕ ಅಧ್ಯಯನವು ಕೇವಲ ಬಸರೂರಿನ ಅಧ್ಯಯನವಲ್ಲ. ಬಸರೂರನ್ನು ಮುಖ್ಯ ಸಾಂಸ್ಕೃತಿಕ ಮಂಡಲವಾಗಿರಿಸಿಕೊಂಡು ಶಾಸನ ಉಲ್ಲೇಖಿತ ಅಧೀನ ಗ್ರಾಮಗಳಾದ ಕಂದಾವರ, ಜಪ್ತಿ, ಬಳ್ಕೂರು, ಆನಗಳ್ಳಿಗಳೆನ್ನುವ ಸಾಂಸ್ಕೃತಿಕ ಉಪಘಟಕಗಳ ಅಧ್ಯಯನವಾಗಿವೆ. ಈ ಐದು ಪ್ರದೇಶಗಳು ಒಂದೇ ಭೌಗೋಳಿಕ ಸನ್ನಿವೇಶದಲ್ಲಿದ್ದು ಮಂಡಲದ ಉಪಾಧಿಯಲ್ಲಿದೆ. ಒಂದೊಂದು ಉಪ ಘಟಕದಲ್ಲಿನ ಸಾಂಸ್ಕೃತಿಕ ವೈವಿಧ್ಯ ಪ್ರಧಾನ ಘಟಕವಾಗಿರುವ ಬಸರೂರಿನಲ್ಲಿ ಕಂಡು ಬರುವುದರಿಂದ ಮತ್ತು ಈ ಎಲ್ಲಾ ನಾಲ್ಕು ಗ್ರಾಮಗಳು ರಾಜಕೀಯವಾಗಿಯೂ, ಧಾರ್ಮಿಕವಾಗಿಯೂ, ಸಾಂಸ್ಕೃತಿಕವಾಗಿಯೂ ಬಸರೂರಿಗೆ ಅಧೀನವಾಗಿರುವುದರಿಂದ ಬಸರೂರಿನ ಸಾಂಸ್ಕೃತಿಕ ಅಧ್ಯಯನ ಎಂಬ ಶೀರ್ಷಿಕೆಯಲ್ಲಿ ಈ ಪ್ರದೇಶವನ್ನು ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ.

ಬಸರೂರು ದೇವಾಲಯಗಳ ಪಟ್ಟಣವಾಗಿದೆ. ಧರ್ಮಪಟ್ಟಣ ಬಸುರೆಪುರ ಎಂಬ ಉಲ್ಲೇಖ ಶಾಸನದಲ್ಲಿದೆ (ವಾದಿರಾಜಭಟ್ ಕನರಾಡಿ;೧೯೯೭;ಪುಟ:೨೨೭).ಬಸರೂರಿನಲ್ಲಿ ಇಪ್ಪತ್ತೇಳು ದೇವಾಲಯಗಳು, ನಲವತ್ತು ದೈವಸ್ಥಾನಗಳು, ನಾಲ್ಕು ಗರಡಿಗಳಿವೆ. ಇವುಗಳ ನಡುವೆ ಇರುವ ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಂಬಂಧವು ರಾಜಕೀಯ ಘಟಕವನ್ನು ಹೋಲುವ ಶ್ರೇಣಿಕೃತ ವ್ಯವಸ್ಥೆಯ ಕ್ರಮದಲ್ಲಿದೆ. ಸೀಮೆಯ ದೇವರಿಗೆ ಯುಕ್ತ ಗೌರವ ನೀಡಿ ಗ್ರಾಮಗಳ ದೇವರುಗಳು ನಡೆದುಕೊಳ್ಳುತ್ತವೆ. ಈ ಧಾರ್ಮಿಕ ಘಟಕಗಳು ಸಂಸ್ಕೃತಿಯ ವಾಹಕವಾಗಿ, ಪೋಷಕವಾಗಿ ಸಲ್ಲಿಸಿದ ಸೇವೆ ಗಣನೀಯವಾದುದು. ಬಸರೂರಿನ ಸಾಂಸ್ಕೃತಿಕ ಅಧ್ಯಯನ ಈ ಮಾಗಣೆಯಲ್ಲಿನ ಧಾರ್ಮಿಕ ಘಟಕಗಳ ಸಾಂಸ್ಕೃತಿಕ ಸಾರವನ್ನು ಅನಾವರಣಗೊಳಿಸುತ್ತದೆ.

ಬಸರೂರಿನ ಬಾಹ್ಯ ಮತ್ತು ಅಂತರ್ ಪ್ರಾಕೃತಿಕ ವೈವಿಧ್ಯತೆ ಸಾಂಸ್ಕೃತಿಕ ಅಧ್ಯಯನಕ್ಕೆ ಪ್ರೇರಣೆ ನೀಡುವ ಆಕರಗಳಾಗಿವೆ. ಇವುಗಳಿಂದಾಗಿ ವಾರಾಹಿ ನದಿಯ ದಡದಲ್ಲಿರುವ ಬಸರೂರಿನ ಪಂಚ ಗ್ರಾಮಗಳು ವಿಶೇಷವಾದ ಸಂಸ್ಕೃತಿಯನ್ನು ರೂಢಿಸಿ ಕೊಂಡಿರುವ ಸಾಧ್ಯತೆಗಳಿವೆ. ಏಕೆಂದರೆ ನದಿತೀರಗಳು ಸಂಸ್ಕೃತಿ ವಿಕಾಸದ ಮೂಲನೆಲೆಗಳಾಗಿದ್ದವು. ಬಸರೂರಿನ ಪಶ್ಚಿಮಕ್ಕೆ ಕಡಲು, ಪೂರ್ವಕ್ಕೆ ಬೆಟ್ಟಗುಡ್ಡಗಳು, ಹಸಿರಿನಿಂದ ಕಂಗೊಳಿಸುವ ಕುದ್ರುಗಳು, ಸಮತಟ್ಟಾದ ಕೃಷಿ ಬಯಲು ಪ್ರದೇಶ ಬಸರೂರಿಗೊಂದು ವಿಶಿಷ್ಟ ಸಂಸ್ಕೃತಿಯನ್ನು ರೂಪಿಸಿರುವ ಸಾಧ್ಯತೆಗಳನ್ನು ಗಮನದಲ್ಲಿರಿಸಿಕೊಂಡು ಬಸರೂರಿನ ಅಧ್ಯಯನ ಕೈಗೊಳ್ಳಲಾಗಿದೆ. ಇದೊಂದು ಆಯಕಟ್ಟಿನ ಜಾಗವಾಗಿದ್ದು ಕನ್ನಡ ಕರಾವಳಿಯ ಪ್ರವೇಶದ ಹೆದ್ದಾರಿಯಂತೆ ಕಾರ್ಯನಿರ್ವಹಿಸಿತ್ತು.

ಬಸರೂರಿನ ಹೆಸರು ಅಧ್ಯಯನಕ್ಕೆ ಹೊಸ ಹೊಳವುಗಳನ್ನು ಸೃಷ್ಟಿಸುತ್ತದೆ. ಆ ನಿಟ್ಟಿನಲ್ಲಿ ಬಸರೂರು ಪದದ ನಿಷ್ಪತ್ತಿಯ ಹಿನ್ನೆಲೆಯಲ್ಲಿ ಸಾಂಸ್ಕೃತಿಕ, ಧಾರ್ಮಿಕ ಮತ್ತು

ಭೌಗೋಳಿಕ ಅಂಶಗಳಿವೆ. ಬಸರೂರು ಒಂದು ಕಾಲಕ್ಕೆ ಜನವಲಸೆಯ ಪ್ರದೇಶವಾಗಿತ್ತು. ಬೇರೆ ಬೇರೆ ಭಾಗಗಳಿಂದ ಜನರು ಇಲ್ಲಿ ಬಂದು ನೆಲೆಸಿದ್ದರು.ಇವರ ಜೀವನ ವಿಧಾನಗಳು ವಿಭಿನ್ನವಾಗಿದೆ. ಬಸರೂರಿನ ಜನಸಮುದಾಯಗಳ ಸ್ಥೂಲ ವಿವೇಚನೆಯೊಂದಿಗೆ ಬಂಟರ, ಬಳೆಗಾರರ, ಮೇರರ, ಚಪ್ಪೆಕಾರ್‌ಬಂಡಾರಿ ನಾಯಕರ ಜೀವನ ಕ್ರಮಗಳನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ. ಬಸರೂರಿನಲ್ಲಿ ಶ್ರೇಣಿಕೃತ ಸಮಾಜ ವ್ಯವಸ್ಥೆ ಇದೆ. ಜೊತೆಗೆ ಮಾತೃವಂಶೀಯ, ಪಿತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಕಾಣಬಹುದು. ಆವೈದಿಕರ ಜೀವನಾವರ್ತನಗಳಲ್ಲಿ ಸಾಮ್ಯ ಮತ್ತು ವ್ಯತ್ಯಾಸವಿದೆ. ಜೀವನಾವರ್ತನ ಆಚರಣೆಗಳ ತಲಸ್ಪರ್ಶಿ ಅಧ್ಯಯನವು ಶ್ರೇಣಿಕೃತ ಸಮಾಜ ಸಂಸ್ಕೃತಿ, ಸಂಸ್ಕೃತಿಕರಣ ಮತ್ತು ಸಾಂಸ್ಕೃತಿಕ ಕೊಡುಕೊಳುವಿಕೆಯನ್ನು ತಿಳಿದುಕೊಳ್ಳುವಲ್ಲಿ ಸಹಾಯಮಾಡುತ್ತದೆ. ಈ ಉದ್ದೇಶದಿಂದ ಬಸರೂರಿನ ಸಾಂಸ್ಕೃತಿಕ ಅಧ್ಯಯನ ಕೈಗೊಳ್ಳಲಾಗಿದೆ.

ಬಸರೂರಿನ ಸುತ್ತಲಿನ ಮಾಗಣೆಗಳ ಪ್ರದರ್ಶನ ಕಲೆಗಳು ಬಸರೂರಿನ ಜೀವಂತ ಸಂಸ್ಕೃತಿಯ ದ್ಯೋತಕವಾಗಿದೆ. ಹೌಂದ್ರಾಯನ ವಾಲಗ, ಹೂವಿನಕೋಲು, ಚುಣ್ಣನಕುಣಿತ, ಹೋಳಿ(ಗುಮ್ಮಟೆ)ಕುಣಿತ ಮುಂತಾದ ಪ್ರದರ್ಶನ ಕಲೆಗಳು ಇಂದಿಗೂ ಜೀವಂತವಾಗಿದೆ. ಇವುಗಳ ಜೀವಂತಿಕೆಗೆ ಕಾರಣವಾಗಿರುವ ಸಾಂಸ್ಕೃತಿಕ, ಧಾರ್ಮಿಕ ಅಂಶಗಳು ಮತ್ತು ಅವುಗಳ ಪೋಷಣೆಯ ನೆಲೆಯನ್ನು ಗುರುತಿಸುವುದರ ಜೊತೆಗೆ ಪ್ರಾದೇಶಿಕ ಸಂಸ್ಕೃತಿಯೊಂದನ್ನು ಹೊರಜಗತ್ತಿಗೆ ಪರಿಚಯಿಸಲು ಸಾಧ್ಯವಾಗುತ್ತದೆ

ಬಸರೂರಿನ ಕುರಿತಾಗಿರುವ ಮೌಖಿಕ ಸಾಹಿತ್ಯ ಅಪಾರವಾದುದು. ಈ ಪ್ರದೇಶದಲ್ಲಿ ಮೌಖಿಕ ಸಾಹಿತ್ಯದ ಆಕರಗಳಾದ ಕತೆಗಳು, ಐತಿಹ್ಯಗಳು, ಪುರಾಣಗಳು, ಜನಪದ ಗೀತೆಗಳು, ಪಾಡ್ದನಗಳು, ಗಾದೆಗಳು ಹೇರಳವಾಗಿದೆ. ಇವುಗಳಿಂದ ಬಸರೂರಿನ ಸಂಸ್ಕೃತಿಯನ್ನು ತಿಳಿಯಲು ಸಾಧ್ಯವಾಗುತ್ತದೆ. ಬಸರೂರಿನ ಕುರಿತು ಸ್ಕಂದ ಪುರಾಣಾಂತರ್ಗತ ಸಹ್ಯಾದ್ರಿಖಂಡದಲ್ಲಿ ವಿವರಣೆಯಿದೆ. ಪದ್ಮಪುರಾಣದಲ್ಲಿ[೪] ಶುಕ್ತಿಮತಿನದಿಯ ಪ್ರಸ್ತಾಪವಿದೆ. ಕ್ರಿಶ ೨ನೇ ಶತಮಾನದ ಗ್ರೀಕ್ ಪ್ರವಾಸಿ ಟಾಲೆಮಿ ಈ ಪ್ರದೇಶವನ್ನು ಬರಾಸ್ ಎಂದು ಉಲ್ಲೇಖಿಸಿದ್ದಾನೆ. ಈ ಬಗೆಯ ಪುರಾಣ ಮತ್ತು ಚರಿತ್ರೆಯ ಹಿನ್ನೆಲೆ ಬಸರೂರಿಗಿದೆ.

ಬಸರೂರಿನಲ್ಲಿ ಲಭ್ಯವಾಗುವ ಶಾಸನಗಳು ಸಾಂಸ್ಕೃತಿಕ ಇತಿಹಾಸವನ್ನು ಪುನರ್‌ನಿರ್ಮಿಸುವ ವಸ್ತುನಿಷ್ಠ ಆಕರಗಳಾಗಿ ನಿಲ್ಲುತ್ತದೆ. ಬಸರೂರಿನ ಚಾರಿತ್ರಿಕ ಮತ್ತು ಧಾರ್ಮಿಕ ಒಳನೋಟಗಳ ಮೇಲೆ ಬೆಳಕು ಚೆಲ್ಲುತ್ತದೆ. ಜೊತೆಗೆ ವಿಪುಲವಾದ ಸಾಂಸ್ಕೃತಿಕ ವಿಚಾರಗಳು ಶಾಸನಾಧ್ಯಯನದಿಂದ ತಿಳಿದುಕೊಳ್ಳಬಹುದು. ಡಾ। ಚಿದಾನಂದಮೂರ್ತಿಯವರ, 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ 'ಎಂಬ

ಗ್ರಂಥವು(೧೯೬೬) ಬಸರೂರಿನ ಶಾಸನಗಳ ಸಾಂಸ್ಕೃತಿಕ ಅಂಶಗಳ ಮೇಲೆ ಬೆಳಕುಬೀರಿಲ್ಲ. ಬಸರೂರಿನಲ್ಲಿ ಲಭ್ಯವಿರುವ ಐವತ್ತೆಂಟು ಶಾಸನಗಳು ಸಾಂಸ್ಕೃತಿಕ ಅಧ್ಯಯನಕ್ಕೆ ಬೇಕಾದ ವಿಪುಲ ಮಾಹಿತಿಯನ್ನು ಒದಗಿಸಿಕೊಡುತ್ತದೆ. ವಿಜಯನಗರದ ಅರಸರುಗಳ ಆಡಳಿತಾವಧಿಯಲ್ಲಿ ಬಸರೂರಿನ ಮಾಗಣೆಗಳ ದೇವಾಲಯ ಮತ್ತು ದೈವಸ್ಥಾನಗಳಲ್ಲಿ ಧಾರ್ಮಿಕ ಉತ್ಸವಗಳು ಬಹಳ ವಿಜೃಂಭಣೆಯಿಂದ ಜರಗುತ್ತಿದ್ದವು. ಎಲ್ಲಾ ವರ್ಗದ ಜನರು ಇಲ್ಲಿ ಸೇರುತ್ತಿದ್ದರು. ಅನೇಕ ವರ್ಷಗಳ ತನಕ ನಿಂತು ಹೋದ ಆಚರಣೆಗಳು ಪುನಃ ಆರಂಭವಾದ ದಾಖಲೆ ಶಾಸನಗಳಲ್ಲಿವೆ. ಬಸರೂರು ಮಾಗಣೆಯ ದೇವಾಲಯ ಮತ್ತು ದೈವಸ್ಥಾನಗಳಲ್ಲಿ ನಡೆಯುತ್ತಿದ್ದ ಆಚರಣೆಗಳನ್ನು ಶಾಸನಗಳು ತಿಳಿಸಿಕೊಡುತ್ತದೆ. ಇವುಗಳು ಬಸರೂರಿನ ಸಾಂಸ್ಕೃತಿಕ ಅಧ್ಯಯನಕ್ಕೆ ಪ್ರೇರಣೆಯಾಗಿ ನಿಲ್ಲುತ್ತದೆ.

ಬಸರೂರು ಸಂಕೀರ್ಣವಾದ ಸಂಸ್ಕೃತಿಯನ್ನು ಹೊಂದಿದ ಪ್ರದೇಶವಾಗಿದೆ. ಶೈವ ಧರ್ಮದ ತಾಂತ್ರಿಕ ಶಾಖೆಯಾದ ನಾಥರು,ಶಾಕ್ತರು, ವೀರಶೈವರು, ಜೈನರು, ವೈಷ್ಣವರು ಬಸರೂರಿಗೆ ಬಂದು ತಮ್ಮ ಧರ್ಮದ ಪ್ರಭಾವವನ್ನು ಬೀರಿ ದೇವಾಲಯ ಸ್ಥಾಪಿಸಿ, ಮಠವನ್ನು ಕಟ್ಟಿ ಬೆಳೆಸಿದ್ದಾರೆ. ಇವರುಗಳ ನಡುವೆ ವಿರೋಧ, ಸಂಘರ್ಷ ಮತ್ತು ಸಾಮರಸ್ಯಗಳು ಕಂಡುಬಂದಿತ್ತು. ಧಾರ್ಮಿಕ ಮತ್ತು ಸಾಂಸ್ಕೃತಿಕ ಸಂಘರ್ಷಗಳನ್ನು ಅಧ್ಯಯನವು ಒಳಗೊಂಡಿರುತ್ತದೆ.

ಬಸರೂರಿನಲ್ಲಿ ಗುಡಿಗಾರರು, ಕಂಚುಗಾರರು, ಪಟ್ಟೆಕಾರರು, ಕುಂಬಾರರು, ಸೆಟ್ಟಿಕಾರರು, ಕಂಬಾರರು ಬೇರೆ ಬೇರೆ ಪ್ರದೇಶದಿಂದ, ಬೇರೆ ಬೇರೆ ಕಾಲಘಟ್ಟದಲ್ಲಿ ವಲಸೆ ಬಂದು ಇಲ್ಲಿ ನೆಲೆನಿಂತಿದ್ದಾರೆ. ಇವರು ತಯಾರಿಸುತ್ತಿದ್ದ ಕರಕುಶಲ ವಸ್ತುಗಳಿಗೆ ದೇಶ ವಿದೇಶಗಳಲ್ಲಿ ಅಪಾರ ಬೇಡಿಕೆ ಇದ್ದಿತ್ತು. ಗುಡಿಗಾರರು ತಯಾರಿಸುತ್ತಿದ್ದ ಮೂರ್ತಿಗಳು, ಉರುಗಳು, ಬಾಸಿಂಗಗಳು, ಬಣ್ಣದ ಬೊಂಬೆಗಳು, ಕಂಚುಗಾರರ ಕಂಚಿನಪ್ರತಿಮೆಗಳು, ನೀಲಾಂಜನ ಕಂಬಗಳು, ಸುಣ್ಣದಕರಡಿಗೆಗಳು, ಸೆಟ್ಟಿಕಾರರು ತಯಾರಿಸುತಿದ್ದ ಮಿರಾಣಿ ಸೀರೆಗಳು; ಕಂಬಾರರು ತಯಾರಿಸುತ್ತಿದ್ದ ದೋಣಿಗಳು, ಪಟ್ಟೆಕಾರರ ಪಟ್ಟೆನೂಲು ತುಳುನಾಡಿನ ಬೇರೆಬೇರೆ ಭಾಗಗಳಲ್ಲಿ ಮಾರಾಟವಾಗುತ್ತಿದ್ದವು. ಬಸರೂರಿನ ಜನ ಘನೇಗಾ ಎಂಬ ಕಲಾತ್ಮಕ ಅಕ್ಕಿ ಮುಡಿಯನ್ನು ಕಟ್ಟುತ್ತಿದ್ದು, ಅವುಗಳು ವಿದೇಶಕ್ಕೆ ರಫ್ತಾಗುತ್ತಿತ್ತು. ಈ ಬಗೆಯ ಕೌಶಲ್ಯವನ್ನು ಹೊಂದಿದ ಜನಸಮುದಾಯ ಬಸರೂರಿನಲ್ಲಿದ್ದಿತ್ತು.

ಬಸರೂರು ಗ್ರಾಮೀಣ ಮತ್ತು ನಗರ ಪ್ರದೇಶ ಎರಡನ್ನು ಒಳಗೊಂಡಿದೆ. ಕೃಷಿ ಮತ್ತು ವ್ಯಾಪಾರ ಎರಡು ಜೊತೆ ಜೊತೆಗೆ ಸಾಗಿದ್ದು, ಕೃಷಿಕರಿಗೆ ವ್ಯಾಪಾರಿ ವರ್ಗದವರು ಹೆಗಲೆಣೆಯಾಗಿದ್ದರು. ಕೃಷಿ ಸಂಬಂಧಿ ಆಚರಣೆಗಳಿಗೆ ವ್ಯಾಪಾರಿಗಳು ಬೆಂಬಲ ನೀಡುತ್ತಿದ್ದರು. ಬರುಬರುತ್ತ ವ್ಯಾಪಾರಿ ಕೇಂದ್ರವಾಗಿದ್ದ ಬಸರೂರು, ತನ್ನ ನೆಲೆಯನ್ನು ಕಳೆದುಕೊಂಡಿತು.

ಜೊತೆಗೆ ಕೃಷಿಯೂ ಕ್ಷೀಣಿಸಲಾರಂಭಿಸಿತು. ಇದರಿಂದಾಗಿ ಬಸರೂರನ್ನು ನಂಬಿದ ಕುಶಲಕರ್ಮಿಗಳು ನೆಲೆಯನ್ನು ಕಳೆದುಕೊಂಡರು. ನಗರೀಕರಣ, ಜಾಗತೀಕರಣಗಳು ಬಸರೂರನ್ನು ಬಿಟ್ಟಿಲ್ಲ ಹೀಗಾಗಿ ಕೃಷಿಸಂಸ್ಕೃತಿ ಆಚರಣೆಗಳು, ಸಾಂಕೇತಿಕ ಆಚರಣೆಗಳಾಗುತ್ತಿವೆ. ಎಷ್ಟೊ ಆಚರಣೆಗಳು ನೆಲೆಯನ್ನು ಕಳೆದುಕೊಂಡಿದೆ. ಬಸರೂರಿನಂತಹ ಐತಿಹಾಸಿಕ ಹಿನ್ನೆಲೆ ಇರುವ ಪ್ರದೇಶದ ಸಂಸ್ಕೃತಿಯನ್ನು, ಪರಂಪರೆಗಳನ್ನು, ಆಚಾರ, ವಿಚಾರವನ್ನು ದಾಖಲಿಸುವ ಉದ್ದೇಶದಿಂದ ಈ ಬಗೆಯ ಅಧ್ಯಯನ ಕೈಗೊಳ್ಳಲಾಗಿದೆ.

ಬಸರೂರನ್ನು ಮುಖ್ಯವಾದ ಸಾಂಸ್ಕೃತಿಕ ಘಟಕವಾಗಿರಿಸಿಕೊಂಡು ಅದರ ಸುತ್ತಲಿನ ಗ್ರಾಮಗಳನ್ನು ಮಾತ್ರ ದೃಷ್ಟಿಯಲ್ಲಿರಿಸಿಕೊಂಡು ಅಧ್ಯಯನ ನಡೆಸಲಾಗಿದೆ. ಈ ಮೂಲಕ ಸಂಸ್ಕೃತಿಯ ಆಕರಗಳಾದ ಜೀವನಾವರ್ತನ, ವಾರ್ಷಿಕಾವರ್ತನ, ಆಚರಣೆ, ನಂಬಿಕೆ, ಸಾಹಿತ್ಯ, ಕರಕುಶಲಕಲೆ, ಜನಪದ ವಾಸ್ತು ಮುಂತಾದವುಗಳನ್ನು ಒಟ್ಟಾಗಿ ಸಂಸ್ಕೃತಿಯೆಂದು ಪರಿಭಾವಿಸಿಕೊಂಡು ಅಧ್ಯಯನ ನಡೆಸಲಾಗಿದೆ.

ಈ ಅಧ್ಯಯನದ ಉದ್ದೇಶ ಪ್ರಧಾನವಾಗಿ ಸಾಂಸ್ಕೃತಿಕವಾದದು. ಇಲ್ಲಿ ಶಾಸನಗಳು, ವಾಕ್‌ಪರಂಪರೆಯಲ್ಲಿರುವ ಜನಪದ ಸಾಹಿತ್ಯ, ಭೌತಿಕ ಸಂಸ್ಕೃತಿಯ ಪರಿಕರ ಮುಂತಾದ ದಾಖಲೆಗಳನ್ನು ಬಳಸಿಕೊಂಡು ಸಾಂಸ್ಕೃತಿಕ ಮಾನವಶಾಸ್ತ್ರದ ಹಿನ್ನೆಲೆಯಲ್ಲಿ ಈ ಪ್ರದೇಶದ ಸಂಸ್ಕೃತಿಯನ್ನು ಅಧ್ಯಯನ ಮಾಡುವ ಗುರಿ ಮುಖ್ಯವಾಗಿದೆ.

ಬಸರೂರಿನ ಸಾಂಸ್ಕೃತಿಕ ಅಧ್ಯಯನದಲ್ಲಿ ವಿವಿಧ ಅಧ್ಯಯನದ ಶಿಸ್ತನ್ನು ಬಳಸಿಕೊಳ್ಳಲಾಗಿದೆ. ಮುಖ್ಯವಾಗಿ ಸಾಮಾಜಿಕ, ಧಾರ್ಮಿಕ, ಮನಶಾಸ್ತ್ರೀಯವಾಗಿ ಸಾಗುತ್ತದೆ. ಈ ಬಗೆಯ ಅಧ್ಯಯನದಿಂದ ಬಸರೂರಿನ ಸಂಸ್ಕೃತಿಯನ್ನು ಗ್ರಹಿಸಿಕೊಳ್ಳಲು ಸಾಧ್ಯವಾಗುತ್ತದೆ. ಅಂತರ್ ಶಿಸ್ತೀಯ ಅಧ್ಯಯನದ ಮೂಲಕ ಪ್ರಸ್ತುತ ಅಧ್ಯಯನವನ್ನು ವಿಶ್ಲೇಷಿಸಲಾಗಿದೆ.

## ೧.೨ ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

ಬಸರೂರು ಐತಿಹಾಸಿಕ ನಗರವಾಗಿದೆ. ಈವರೆಗಿನ ಅಧ್ಯಯನವು ಬಸರೂರಿನ ರಾಜಕೀಯದ ಏಳು-ಬೀಳುಗಳ ಮೇಲೆ ತನ್ನ ಗಮನವನ್ನು ಕೇಂದ್ರಿಕರಿಸಿದೆ. ಬಸರೂರಿನ ಬಗ್ಗೆ ಉಪಲಬ್ಧವಿರುವ ಕೃತಿಗಳಲ್ಲಿ ಅತ್ಯಂತ ಪ್ರಾಚೀನವಾದುದು ಎಂ. ಗಣಪತಿರಾವ್ ಐಗಳರವರ 'ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ' (೧೯೨೩) ಈ ಕೃತಿಯಲ್ಲಿ ಐಗಳರವರು ಬಸರೂರಿನ ನಡುವನ್ನು ಸೀಳಿಕೊಂಡು ಹರಿಯುತ್ತಿರುವ ಶುಕ್ತಿಮತಿಯನ್ನು ಗಂಗೊಳ್ಳಿ ಹೊಳೆ ಎಂದು ಕರೆದಿದ್ದಾರೆ. ಕೊಲ್ಲೂರು ಅಥವಾ ಕುಟಚಾದ್ರಿ ಪರ್ವತವನ್ನು ಬಾರ್ಸೆಲೂರ ಗುಡ್ಡ ಎಂದು ಹೆಸರಿಸಿರುವುದನ್ನು ಕಾಣಬಹುದು. ಕ್ರೈಸ್ತರು ಗೋವಾದಿಂದ ಬಸರೂರಿಗೆ ಬಂದು ನೆಲೆಸಿ, ಕೃಷಿಯನ್ನು ಆರಂಭಿಸಿದ ವಿಚಾರವನ್ನು ಮತ್ತು ಬಸರೂರಿನಲ್ಲಿ

ಆಸ್ಪತ್ರೆಯನ್ನು ಸ್ಥಾಪಿಸಿದ ವಿಚಾರವನ್ನು ಪ್ರಸ್ತಾಪಿಸಿದೆ. ಬಸರೂರಿನಲ್ಲಿದ್ದ ಕ್ರೈಸ್ತರು ಹೀನ ಸ್ಥಿತಿಯಲ್ಲಿದ್ದರು ಎಂಬ ವಿಚಾರವು ಈ ಗ್ರಂಥದಲ್ಲಿದೆ. ಸೂರಾಲಿನ ತೊಳಹಾರ ಅರಸರು ಬಸರೂರನ್ನು ಆಳಿದ ಉಲ್ಲೇಖ ಮಾಡಿದ್ದಾರೆ. ಬಸರೂರಿನಲ್ಲಿ ನಡೆದ ಯದ್ಧದಲ್ಲಿ ತೊಳಹಾರ ಅರಸರ ಹನ್ನೊಂದು ಸಾವಿರ ಸೈನ್ಯ ಪೋರ್ಚುಗೀಸರಿಗೆ ಸೋತ ವಿಚಾರವನ್ನು ಪ್ರಸ್ತಾಪಿಸಿದ್ದಾರೆ. ರಾಜಮನೆತನಗಳ ಬಗೆಗಿನ ವಿವರವನ್ನು ಮತ್ತು ಬಸರೂರಿನ ರಾಜಕೀಯ ಸ್ಥಿತ್ಯಂತರವನ್ನು ತಿಳಿಸುವುದರ ಮೂಲಕ ಪ್ರಾದೇಶಿಕ ಇತಿಹಾಸದ ಶ್ರೇಷ್ಠತೆಯನ್ನು ಎತ್ತಿ ತೋರಿಸಲು ಪ್ರಯತ್ನಿಸಿದ್ದಾರೆ.

ಗುರುರಾಜ ಭಟ್ಟ ಪಾದೂರರವರ 'ANTIQUTIES OF SOUTH KANNARA ಮತ್ತು TULUVA HISTORY AND CULTURE' (೧೯೭೫) ಗ್ರಂಥದಲ್ಲಿ ಬಸರೂರಿನ ವಾಣಿಜ್ಯ ವ್ಯವಹಾರಗಳನ್ನು ತಿಳಿಸಿದ್ದಾರೆ. ಬಸರೂರಿನ ನಗರಾಡಳಿತ ಮತ್ತು ವ್ಯಾಪಾರ ವ್ಯವಹಾರವನ್ನು ನಿಯಂತ್ರಿಸುತ್ತಿದ್ದ ಹಲರು, ನಖರರು, ಹಂಜಮಾನರ ಬಗ್ಗೆ ವಿವರ ನೀಡಿದ್ದಾರೆ. ಲಿಂಗಣ್ಣ ಕವಿಯ ಕೆಳದಿಯ ನೃಪವಿಜಯವು ಬಸರೂರಿನ ಮಹಾಲಿಂಗೇಶ್ವರ ದೇವಾಲಯದ ಕುರಿತ ಸಂಕ್ಷಿಪ್ತ ಮಾಹಿತಿ ನೀಡುತ್ತದೆ. ಕೆ. ಶಿವರಾಮ ಕಾರಂತರ 'ಮೈಮನಗಳ ಸುಳಿಯಲ್ಲಿ' ಬಸರೂರಿನ ದೇವದಾಸಿಯರ ಜೀವನದ ಕುರಿತ ವಿವರಗಳಿವೆ. ವಾದಿರಾಜ ಭಟ್ಟ ಕನರಾಡಿಯವರ 'ದೇವದಾಸಿಯರ ಹಾಡುಗಳು' (೧೮೯೭) ಪುಸ್ತಕದಲ್ಲಿ ಬಸರೂರಿನ ದೇವದಾಸಿಯರ ಕುಣಿತಕ್ಕೆ ಸಂಬಂಧಿಸಿದ ಹಾಡುಗಳನ್ನು ಸಂಗ್ರಹಿಸಿಕೊಡಲಾಗಿದೆ. ಜಾನಪದ ವಿದ್ವಾಂಸರಾದ ಎ.ವಿ.ನಾವುಡರು ಸಂಪಾದಿಸಿದ 'ಕುಂದದರ್ಶನ'ದ(೧೯೭೭) ಬಿಡಿಲೇಖನಗಳು ಬಸರೂರಿನ ಸ್ಥಳನಾಮದ ಕುರಿತಾದ ದ್ವಂದ್ವವನ್ನು ವಿಶ್ಲೇಷಿಸುತ್ತದೆ. ಗುರುರಾಜ ಭಟ್ ಪಾದೂರುರವರ 'ತುಳುನಾಡು'(೨೦೦೯)ಕೃತಿಯಲ್ಲಿ ಬಸರೂರನ್ನು ಹೊಸಪಟ್ಟಣ ಬಸುರೆಪುರ ಎಂದು ಕರೆದಿರುವುದನ್ನು ಪ್ರಸ್ತಾಪಿಸಿದ್ದಾರೆ. ಎ. ಸುಬ್ಬಣ್ಣ ರೈಯವರ 'ದಕ್ಷಿಣಕನ್ನಡ ಜಿಲ್ಲೆಯ ಐತಿಹ್ಯಗಳು'(೧೯೯೪)ಬಸರೂರಿನ ಕೆಲವು ಐತಿಹ್ಯಗಳನ್ನು ಸಂಗ್ರಹಿಸಿ ವಿಶ್ಲೇಷಣೆ ಮಾಡಿದೆ. ನರಸಿಂಹಮೂರ್ತಿ ಪಿ.ಎನ್ ರವರ 'ಕುಂದನಾಡಿನ ಶಾಸನಗಳು'(೨೦೦೭) ಎಂಬ ಗ್ರಂಥದಲ್ಲಿ ಬಸರೂರಿಗೆ ಸಂಬಂಧಿಸಿದ ಕವಿ ಆಳುಪೇಂದ್ರ, ಅಳುಪ ಕುಲಶೇಖರ, ಇಮ್ಮಡಿ ದೇವರಾಯ ಮತ್ತು ಸದಾಶಿವರಾಯನ ಶಾಸನ ಪಾಠವನ್ನು ಪ್ರಕಟಿಸಿದ್ದಾರೆ. ಶ್ರೀಶಾರದ ಕಾಲೇಜು ಬಸರೂರಿನ ಸ್ಮರಣ ಸಂಚಿಕೆ 'ಹೆಸರಾದ ಪಟ್ಟಣ ಬಸರೂರು ಒಂದು ಅಧ್ಯಯನ' (೧೯೯೭) ಬಸರೂರಿನ ರೇವು, ದೇವಸ್ಥಾನ, ಕೆರೆಗಳು, ಕೇರಿಗಳ ಬಗ್ಗೆ ವಿವರ ನೀಡುತ್ತದೆ. 'ಕುಂದಾಪುರ ತಾಲೂಕು ಅಧ್ಯಯನ'(೧೯೯೪) ಕೃತಿ ಕುಂದಾಪುರ ತಾಲೂಕಿನ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಬೆಳವಣಿಗೆಯನ್ನು ಸಂಕ್ಷಿಪ್ತವಾಗಿ ತಿಳಿಸಿಕೊಡುತ್ತದೆ. ವಾದಿರಾಜ ಭಟ್ಟ ಕನರಾಡಿಯವರ 'ಕುಂದಾಪುರ ತಾಲೂಕು ದರ್ಶನ'(೧೯೮೬) ಕುಂದಾಪುರ ತಾಲೂಕಿನ ಬಗ್ಗೆ ಮಾಹಿತಿ

ನೀಡುತ್ತದೆ. ವಸಂತ ಕುಮಾರ ಪುತ್ತಿಯವರ ಎಂ.ಫಿಲ್ ಪ್ರಬಂಧ ಬಸರೂರಿನ ದೇವದಾಸಿಯರ ಕುರಿತದ್ದಾಗಿದೆ. ಆದರೆ ಅವರು ಬಸರೂರಿನ ದೇವದಾಸಿಯರನ್ನು ಜನಸಮುದಾಯವೆಂದು ಪರಿಭಾವಿಸಿಕೊಂಡು ಅವರ ಜೀವನಾವರ್ತಗಳ ಅಧ್ಯಯನ ನಡೆಸಿದ್ದಾರೆ. ಈ ಮೇಲಿನ ಎಲ್ಲಾ ಆಕರ ಕೃತಿಗಳು ಬಸರೂರಿನ ರಾಜಕೀಯ ಧಾರ್ಮಿಕ ಸಂಗತಿಗಳ ಮೇಲೆ ಬೆಳಕು ಚೆಲ್ಲುತ್ತದೆ. ಆದರೆ ಈ ಕೃತಿಗಳು ಕೇವಲ ಬಸರೂರನ್ನು ಮಾತ್ರ ದೃಷ್ಟಿಯಲ್ಲಿರಿಸಿಕೊಂಡು ಬರೆದ ಕೃತಿಗಳಲ್ಲ. ಬೇರೆ ಬೇರೆ ಸಂದರ್ಭಗಳಲ್ಲಿ ಬರೆದುದಾಗಿದೆ.

ಈ ಮೇಲಿನ ಗ್ರಂಥಗಳಲ್ಲದೆ ಕೆಲವು ವಿಶೇಷ ಸಂದರ್ಭಗಳಲ್ಲಿ ಪ್ರಕಟವಾದ ವಾರ್ಷಿಕ ವಿಶೇಷಾಂಕಗಳು ಮತ್ತು ಸ್ಮರಣ ಸಂಚಿಕೆಗಳಲ್ಲಿ ಬಸರೂರಿನ ಬಗ್ಗೆ ಪ್ರಸ್ತಾಪವಿದೆ. ಬಸರೂರಿನ ಶ್ರೀ ಶಾರದಾ ಕಾಲೇಜಿನ ವಾರ್ಷಿಕಾಂಕ 'ಶಾರದಾವಾಣಿ' (೧೯೯೩,೧೯೯೪) ಬಸರೂರಿನ ಸಂಸ್ಕೃತಿಯ ಪ್ರಾಥಮಿಕ ಪರಿಚಯ ಮಾಡಿಕೊಡುತ್ತದೆ. ಭಂಡಾರ್‌ಕಾರ್ಸ್ ಕಾಲೇಜಿನ ವಾರ್ಷಿಕಾಂಕ 'ದರ್ಶನ'(೨೦೦೫,೨೦೦೬) ಮತ್ತು ಬೆಳ್ಳಿ ಹಬ್ಬದ ಸ್ಮರಣ ಸಂಚಿಕೆ 'ಬೆಳ್ಳಿ ಮಿನುಗು'(೧೯೮೮) ಬಸರೂರಿನ ಬಗ್ಗೆ ಮಾಹಿತಿಯನ್ನು ನೀಡುತ್ತದೆ. ಇಷ್ಟೆಲ್ಲಾ ಆಕರಗಳು ಬಸರೂರಿಗೆ ಇದ್ದಿರಬೇಕಾದರೆ ಬಸರೂರು ರಾಜಕೀಯವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಶ್ರೀಮಂತವಾಗಿರಬೇಕು. ಆದರೆ ಈ ಮೇಲಿನ ಎಲ್ಲಾ ಕೃತಿಗಳನ್ನು ಒಟ್ಟಾರೆಯಾಗಿ ಸಮೀಕ್ಷಿಸಿದಾಗ ಇವುಗಳ ಮಿತಿಗಳು ಸ್ಪಷ್ಟವಾಗಿ ತಿಳಿಯುತ್ತದೆ. ಗಣಪತಿರಾವ್ ಐಗಳರವರ,ಗುರುರಾಜ ಭಟ್‌ರ ಬರೆಹಗಳು ಬಸರೂರನ್ನು ಮಾತ್ರ ಕುರಿತು ಬರೆದುದಲ್ಲ. ಒಟ್ಟು ತುಳುನಾಡಿನ ಇತಿಹಾಸ ಮತ್ತು ಜನಸಮುದಾಯದ ಕುರಿತಾಗಿದೆ. ಹೆಸರಾದ ಪಟ್ಟಣ ಬಸರೂರು ಕೃತಿ ಸ್ಮರಣ ಸಂಚಿಕೆಯಾಗಿದ್ದರೂ, ಯಾವುದೇ ಅಧ್ಯಯನದ ಶಿಸ್ತಿಗೆ ಒಳಗಾಗದೆ ಇದ್ದರೂ ಬಸರೂರಿನ ಸಾಮಾಜಿಕ, ಧಾರ್ಮಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಅಧ್ಯಯನಕ್ಕೆ ಪ್ರಾಥಮಿಕ ಆಕರವಾಗಿದೆ. ಈ ಕೃತಿಯಲ್ಲಿರುವ ಲೇಖನಗಳು ಬಸರೂರಿನ ಅಧ್ಯಯನಕ್ಕೆ ಮಾರ್ಗದರ್ಶಕವಾಗಿದೆ.

ಪ್ರಸ್ತುತ ಅಧ್ಯಯನವು ಈ ಮೇಲಿನ ಕೃತಿಗಳ ಅಧ್ಯಯನಕ್ಕಿಂತ ಭಿನ್ನವಾಗಿದೆ. ಬಸರೂರನ್ನು ಮುಖ್ಯವಾದ ಸಾಂಸ್ಕೃತಿಕ ಘಟಕವಾಗಿರಿಸಿಕೊಂಡು ಅದರ ಸುತ್ತಲಿನ ಮಾಗಣೆಗಳನ್ನು ಮಾತ್ರ ದೃಷ್ಟಿಯಲ್ಲಿರಿಸಿಕೊಂಡು ಸಂಶೋಧನೆ ನಡೆಸಲಾಗಿದೆ. ಈ ಮುಖೇನ ಸಾಂಸ್ಕೃತಿಕ ಆಕರಗಳಾದ ಜೀವನಾವರ್ತನ, ವಾರ್ಷಿಕಾವರ್ತನ, ಆಚರಣೆ, ನಂಬಿಕೆ, ಸಾಹಿತ್ಯ, ಕರಕುಶಲಕಲೆ, ಜನಪದವಾಸ್ತು ಮುಂತಾದವುಗಳನ್ನು ಸೂಕ್ಷ್ಮವಾಗಿ ಅಭ್ಯಸಿಸಲಾಗಿದೆ. ಬಸರೂರಿನ ಸಾಂಸ್ಕೃತಿಕ ಅಧ್ಯಯನದಲ್ಲಿ ವಿವಿಧ ಅಧ್ಯಯನದ ಶಿಸ್ತನ್ನು ಬಳಸಿಕೊಳ್ಳಲಾಗಿದೆ. ಮುಖ್ಯವಾಗಿ ಸಾಮಾಜಿಕ, ಧಾರ್ಮಿಕ, ಮನಶಾಸ್ತ್ರೀಯವಾಗಿ ಸಾಗುತ್ತದೆ. ಈ ಬಗೆಯ

ಅಧ್ಯಯನದಿಂದ ಬಸರೂರಿನ ಸಂಸ್ಕೃತಿಯನ್ನು ಗ್ರಹಿಸಿಕೊಳ್ಳಲು ಸಾಧ್ಯವಾಗುತ್ತದೆ .ಈ ಅಧ್ಯಯನವು ಗುಣಾತ್ಮಕ ಮತ್ತು ವಿಶ್ಲೇಷಣಾತ್ಮಕ ಮಾದರಿಯ ಅಧ್ಯಯನವಾಗಿದೆ. ಇದರೊಂದಿಗೆ ಅಂತರ್‌ಶಿಸ್ತೀಯ ಅಧ್ಯಯನ ಮಾದರಿಯಲ್ಲಿ ಪ್ರಸ್ತುತ ಅಧ್ಯಯನವು ಸಾಗಿರುವುದನ್ನು ಗಮನಿಸಬಹುದು.

**ಕೊನೆ ಟಿಪ್ಪಣಿ**

೧. ವಾರಾಹಿ, ಚಕ್ರ, ಕುಬ್ಜಾ, ಖೇಟಾ, ಸೌಪರ್ಣಿಕ ಈ ಐದು ಉಪನದಿಗಳನ್ನು ಪಂಚಗಂಗಾವಳಿಯೆಂದು ಕರೆಯಲಾಗಿದೆ.

೨. ಬಂಗ್ಲೆ ಗುಡ್ಡೆಯ ಬದಿಯಲ್ಲಿ ಬಂಡೆಕಲ್ಲುಗಳ ಮೇಲೆ ಕಂಡು ಬರುವ ಚೆನ್ನೆಮಣಿಯಂತಹ ರಚನೆಯಿದೆ. ಕುದುರೆಯ ಮೇಲೆ ಬಲಗೈಯಲ್ಲಿ ಆಯುಧ ಹಿಡಿದು ನಿಂತಿರುವ ವ್ಯಕ್ತಿಯ ಚಿತ್ರವಿದೆ.

೩. ಈಗ ಕೆಲವು ಗ್ರಾಮಗಳು ಬಸರೂರಿಗೆ ಸೇರಿಲ್ಲ. ಬೇರೆ ಬೇರೆ ಗ್ರಾಮಪಂಚಾಯತ್‌ಗಳಲ್ಲಿ ಹಂಚಿ ಹೋಗಿದೆ.

೪. ಉಪ್ಪಿನ ಕುದ್ರು ನಾರಾಯಣ ಹೊಳ್ಳರ ಮನೆಯಲ್ಲಿ ದೊರಕಿದ ಸಂಸ್ಕೃತ ಭಾಷೆಯ ತಾಳೆಗರಿ ಗ್ರಂಥ.

★★★

## ಅಧ್ಯಾಯ ಎರಡು

# ಪ್ರಸ್ತಾವನೆ – ವಿಷಯ ಪ್ರವೇಶ

---

೨.೧. ಸಾಂಸ್ಕೃತಿಕ ಅಧ್ಯಯನ–ತಾತ್ವಿಕ ಚರ್ಚೆ

೨.೨. ಭೌಗೋಳಿಕ ಹಿನ್ನೆಲೆ

೨.೩. ಸ್ಥಳನಾಮ ವಿವೇಚನೆ

೨.೪. ಐತಿಹಾಸಿಕ ಹಿನ್ನೆಲೆ

೨.೫. ಜನಸಮುದಾಯ ಮತ್ತು ಭಾಷೆ

# ಅಧ್ಯಾಯ ಎರಡು

# ಪ್ರಸ್ತಾವನೆ-ವಿಷಯ ಪ್ರವೇಶ

**ಪ್ರವೇಶಿಕೆ**

ಒಂದು ಪ್ರದೇಶದ ಸಾಂಸ್ಕೃತಿಕ ಅಧ್ಯಯನಕ್ಕೆ ಆ ಪ್ರದೇಶದ ಜನ ಸಮುದಾಯ, ಭಾಷೆ, ಸಂಸ್ಕೃತಿ, ನಂಬಿಕೆ, ಆಚರಣೆ, ಸಂಪ್ರದಾಯ, ಕಲೆ ಇವೆಲ್ಲವನ್ನು ಒಟ್ಟಾಗಿ ಅಧ್ಯಯನ ಮಾಡುವ ಅಗತ್ಯವಿದೆ. ವರ್ತಮಾನದ ಜಾಗತೀಕರಣ, ಆಧುನೀಕರಣ ಮತ್ತು ಸಾಂಸ್ಕೃತಿಕ ಪಲ್ಲಟದ ನಡುವೆ ಜನಸಮುದಾಯದ ಸಾಂಸ್ಕೃತಿಕ ಚಹರೆಗಳು ಬದಲಾಗುತ್ತಿವೆ. ಗ್ರಾಮೀಣ ಮತ್ತು ನಗರದ ಬದಲಾದ ಜೀವನ ಪದ್ಧತಿಗಳಲ್ಲಿ ಸಂಸ್ಕೃತಿಯನ್ನು ಅಧ್ಯಯನ ಮಾಡುವಾಗ ಸಂಸ್ಕೃತಿಯ ನಿರ್ವಚನವನ್ನು ಹೊಸ ಬಗೆಯಲ್ಲಿ ನಿರೂಪಿಸ ಬೇಕಾಗಿದೆ. ಈ ನಿರ್ವಚನವೇ ಅಧ್ಯಯನದ ತಾತ್ವಿಕತೆಯಾಗಿದೆ.

ಇಡೀ ಪ್ರದೇಶವನ್ನು ಸಮಗ್ರವಾಗಿ ಅಧ್ಯಯನ ಮಾಡಿದಾಗ ವಸ್ತುಸ್ಥಿತಿಯ ಪೂರ್ಣ ಚಿತ್ರಣವನ್ನು ಪಡೆಯಲು ಸಾಧ್ಯವಾಗುತ್ತದೆ. ಇಲ್ಲವೆಂದಾದಲ್ಲಿ ಈ ಅಧ್ಯಯನಗಳು ಸೀಮಿತ ಚೌಕಟ್ಟಿನಲ್ಲಿ ಉಳಿಯಬಹುದು. ಅಲ್ಲದೆ ಇಂತಹ ಹಲವಾರು ಅಧ್ಯಯನಗಳು ಸಮಾಜದ ಒಂದು ಭಾಗವನ್ನು ಕೇಂದ್ರಿಕರಿಸುತ್ತವೆಯೆ ಹೊರತು ಇಡಿ ಪ್ರದೇಶದ ಒಟ್ಟಾರೆ ಚಿತ್ರಣವನ್ನು ನೀಡುವಲ್ಲಿ ವಿಫಲಗೊಳ್ಳುವ ಸಾಧ್ಯತೆಯಿದೆ. ಹಾಗಾಗಿ ಈ ಬಗೆಯ ಅಧ್ಯಯನಗಳ ಮಿತಿಯನ್ನು ಗುರುತಿಸಿಕೊಂಡು ಅವುಗಳನ್ನು ಮೀರುವ ಪ್ರಯತ್ನವಾಗಿ ಪ್ರಸ್ತುತ ಅಧ್ಯಯನದ ತಾತ್ವಿಕತೆಯನ್ನು ರೂಪಿಸಿಕೊಳ್ಳಲಾಗಿದೆ. ಈ ಅಧ್ಯಯನವು ಬಸರೂರಿನ ಸಂಸ್ಕೃತಿಯ ಸಮಗ್ರ ಚಿತ್ರಣವನ್ನು ನೀಡುವಲ್ಲಿ ಪ್ರಯತ್ನಿಸಿದೆ. ಪ್ರಮುಖವಾಗಿ ಈ ಸಂಶೋಧನಾ ಪ್ರಬಂಧದಲ್ಲಿ ಭೌಗೋಳಿಕ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಅಂಶಗಳನ್ನು ಸಂಸ್ಕೃತಿ ಎಂದು ನಿರ್ವಚಿಸಿಕೊಂಡು ಅಧ್ಯಯನ ಮಾಡಲಾಗಿದೆ.

## ೨.೧. ಸಾಂಸ್ಕೃತಿಕ ಅಧ್ಯಯನ–ತಾತ್ವಿಕ ಚರ್ಚೆ

ಸಂಸ್ಕೃತಿ ಎಂಬ ಶಬ್ದವು ಇಂಗ್ಲಿಷ್‌ನ 'ಕಲ್ಚರ್' ಎಂಬುದಕ್ಕೆ ಸಂವಾದಿಯಾಗಿ ಉಪಯೋಗವಾಗುತ್ತಿದೆ. 'ಕಲ್ಚರ್' ಎಂಬುದರ ಮೂಲ ಪದ 'ಕಲ್ಟ್' ಅಥವಾ 'ಕಲ್ಟ್ಸ್' ಎಂಬುದು. ಗೌರವಿಸು, ಆರಾಧಿಸು, ಸೇವೆ ಮಾಡು ಮೊದಲಾದ ಅರ್ಥವನ್ನು ಇದು ಕೊಡುತ್ತದೆ. ದೈವಶಕ್ತಿ ಎನ್ನುವ ಅರ್ಥವನ್ನು ಒಂದು ಕಡೆ ಪಡೆದರೆ, ಇನ್ನೊಂದು ಕಡೆ ಭೂದೇವಿಯ ಆರಾಧನೆ ಅಂದರೆ ಕೃಷಿ ಎಂಬ ಅರ್ಥವನ್ನು ಪಡೆದುಕೊಂಡಿತು. ಈ ಎರಡನೇಯ ಅರ್ಥದಿಂದ ಬಂದುದು 'ಎಗ್ರಿಕಲ್ಚರ್' ಎಂಬ ಶಬ್ದ. 'ಕಲ್ಚರ್'ಎಂಬುದು ಒಂದು ಬಗೆಯ ವ್ಯವಸಾಯ. ಭೂಮಿಯನ್ನು ಉತ್ತು ಬಿತ್ತಿ ನೀರು ಗೊಬ್ಬರ ಹಾಕಿ ಹಸನು ಮಾಡುವಂತೆ ಮನುಷ್ಯನಲ್ಲಿರುವ ವಿಶೇಷವಾದ ಶಕ್ತಿಗಳು ಮೊಳಕೆವೊಡೆದು ಬೆಳೆಯುವುದಕ್ಕಾಗಿ ಮಾಡಬೇಕಾದ ಅಂತರಂಗದ ವ್ಯವಸಾಯ ಸಂಸ್ಕೃತಿ"(ತಿಪ್ಪೆರುದ್ರಸ್ವಾಮಿ ಎಚ್;೨೦೧೦;ಪುಟ:೬)

ಈಗ ಸಂಸ್ಕೃತಿ ಪದದ ಅರ್ಥವು ಬಹು ವ್ಯಾಪಕವಾಗಿ ಬೆಳೆಯುತ್ತಾ ಹೋಗಿದೆ. ಅದರೊಂದಿಗೆ ಹೊಸ ಹೊಸ ಅರ್ಥಗಳು ಹುಟ್ಟಿಕೊಂಡಿದೆ. ಸಮಷ್ಟಿ ಜೀವನದ ಅಂತರಂಗದ ಸಾಧನೆಗೆ ಸಹಕಾರಿಯಾದ ಸಾಮಗ್ರಿಗಳು ಎಂಬ ಅರ್ಥದಿಂದ ಹಿಡಿದು,ವ್ಯಷ್ಟಿ ಜೀವನದ ವಿಕಾಸಕ್ಕೆ ಕಾರಣವಾದ ಸಾಮರಸ್ಯದ ಸಂಸ್ಕಾರ ಎಂಬುವವರೆಗೆ 'ಕಲ್ಚರ್' ಪದದ ಅರ್ಥ ಬೆಳೆದಿದೆ. ಕೆಲವು ವೇಳೆ ಸಂಸ್ಕೃತಿಯ ಅರ್ಥವನ್ನು ದೇಶವಾಚಕವಾಗಿಯೂ ಭಾಷಾವಾಚಿಯಾಗಿಯೂ ಬಳಸಲಾಗುತ್ತಿದೆ.

'ಸಂಸ್ಕೃತಿ' ಎಂದರೆ ಒಂದು ಜನಸಮುದಾಯದ ಜೀವನ ವಿಧಾನಗಳ ಮೊತ್ತ ಎಂಬ ವ್ಯಾಖ್ಯೆಯೊಂದು ಸದ್ಯಕ್ಕೆ ಪ್ರಚಲಿತದಲ್ಲಿದೆ. ಈ ವ್ಯಾಖ್ಯೆ ಒಂದು ಪ್ರದೇಶದ ಜನರ ಜೀವನ ವಿಧಾನ, ಉಡುಪು ಆಹಾರ ಪದ್ಧತಿ, ಭಾಷೆ, ಆಚರಣೆ, ನಂಬಿಕೆ ಮುಂತಾದವುಗಳನ್ನು ಒಳಗೊಂಡಿದೆ ಎಂದು ಸರಳವಾಗಿ ವ್ಯಾಖ್ಯಾನಿಸಿಬಹುದು. ಆದರೆ ಈ ವ್ಯಾಖ್ಯಾನ ಎಲ್ಲಾ ಪ್ರದೇಶಗಳಿಗೂ ಏಕರೂಪಿಯಾಗಿರುವುದಿಲ್ಲ. ಏಕೆಂದರೆ ಪ್ರದೇಶದಿಂದ ಪ್ರದೇಶಕ್ಕೆ ಜನರ ಜೀವನ ವಿಧಾನದಲ್ಲಿ ಸಾಕಷ್ಟು ವ್ಯತ್ಯಾಸಗಳಿರುತ್ತವೆ.

'ಸಂಸ್ಕೃತಿ'ಯ ಅರ್ಥ ಬಾಹ್ಯ ಜೀವನ ವಿಧಾನಕ್ಕೆ ಮಾತ್ರ ಸೀಮಿತವಾಗದೆ ಅಂತರಂಗದ ಪರಿಪಾಕಕ್ಕೆ ಒಳಪಡುತ್ತದೆ. ಬಾಹ್ಯ ಮತ್ತು ಅಂತರಂಗದ ಹದವಾದ ಪಾಕದಿಂದ ಒಂದು ದೇಶದ ಸಂಸ್ಕೃತಿ ರೂಪುಗೊಳ್ಳುತ್ತಿರುತ್ತದೆ. ಆಧುನಿಕ ಕಾಲದಲ್ಲಿ ಸೃಷ್ಟಿಯಾದ ಈ ಶಬ್ಧದ ಅರ್ಥ ಏಕಾರ್ಥದಲ್ಲಿ ಬಳಕೆಯಾಗಿಲ್ಲ. ಇಪ್ಪತ್ತನೆಯ ಶತಮಾನದ ಉದ್ದಕ್ಕೂ ಆಯಾ ಕಾಲದ ಸಾಮಾಜಿಕ ಬೆಳವಣಿಗೆಗಳಿಗೆ ತಕ್ಕಂತೆ ವಿಭಿನ್ನ ಅರ್ಥಗಳನ್ನು ಪಡೆದುಕೊಂಡು ಚಾಲ್ತಿಯಲ್ಲಿದೆ. ಇದರ ಅರ್ಥಾಂತರ ಕ್ರಿಯೆ ಇನ್ನೂ ನಿಂತಿಲ್ಲ. ಈ ಎಲ್ಲ

ಸಂಗತಿಗಳು 'ಸಂಸ್ಕೃತಿ' ಎಂಬ ಒಂದು ರಚನೆ ಬೌದ್ಧಿಕವಾಗಿ ರೂಪಿಸಿಕೊಂಡ ಒಂದು ಪರಿಕಲ್ಪನೆ ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಸಂಸ್ಕೃತಿಯ ಕುರಿತಾಗಿ, ಟಿ.ಎಸ್.ಎಲಿಯಟ್ "ಒಂದು ಪ್ರದೇಶದಲ್ಲಿ ವಾಸಿಸುತ್ತಿರುವ ಒಂದು ಜನಾಂಗದ ಜೀವನ ವಿಧಾನವೇ ಸಂಸ್ಕೃತಿ. ಈ ಸಂಸ್ಕೃತಿಯು ಅವರ ಕಲೆಗಳಲ್ಲಿ, ಸಾಮಾಜಿಕ ವ್ಯವಸ್ಥೆಯಲ್ಲಿ, ಅವರ ಆಚಾರ ವಿಚಾರಗಳಲ್ಲಿ, ಧರ್ಮದಲ್ಲಿ ವ್ಯಕ್ತವಾಗುತ್ತದೆ. ಆದರೆ ಇವೆಲ್ಲವನ್ನು ಒಟ್ಟಿಗೆ ಸೇರಿಸಿದರೂ ಅದು ಸಂಸ್ಕೃತಿ ಆಗಲಾರದು. ಮನುಷ್ಯನ ದೇಹವನ್ನು ಹೇಗೋ ಹಾಗೇ ಸಂಸ್ಕೃತಿಯನ್ನು ಈ ವಿಭಾಗಳಾಗಿ ವಿಭಜಿಸಬಹುದು. ದೇಹದ ಅಂಗಗಳ ಮೊತ್ತ ಹೇಗೆ ಮನುಷ್ಯ ಅಲ್ಲವೊ ಹಾಗೆ ಆ ಜನಾಂಗದ ಕಲೆಗಳು, ಸಂಪ್ರದಾಯಗಳ, ಧಾರ್ಮಿಕ ಶ್ರದ್ಧೆಗಳ ಮೊತ್ತವೆ ಸಂಸ್ಕೃತಿ ಆಗಲಾರದು. ಇವು ಒಂದರ ಮೇಲೊಂದು ಪ್ರಭಾವವನ್ನು ಬೀರುತ್ತವೆ. ಒಂದನ್ನು ಅರಿಯಲು ಎಲ್ಲವನ್ನು ಅರಿಯಬೇಕು. ಶ್ರೇಷ್ಠ ಸಂಸ್ಕೃತಿಗಳಿರುವಂತೆ ಶ್ರೇಷ್ಠವಲ್ಲದ ಸಂಸ್ಕೃತಿಗಳೂ ಉಂಟು. ಒಂದು ಸಮಾಜದಲ್ಲಿ ಶ್ರೇಷ್ಠ ಸಂಸ್ಕೃತಿಗೆ ಮತ್ತು ಶ್ರೇಷ್ಠವಲ್ಲದ ಸಂಸ್ಕೃತಿಗೆ ಸೇರಿದವರನ್ನು ಗುರುತಿಸಬಹುದು. ಹಾಗೇಯೇ ಅತ್ಯಂತ ಸುಸಂಸ್ಕೃತ ವ್ಯಕ್ತಿಗಳಿವರೆಂದು ಹೇಳಬಹುದು. ಒಬ್ಬ ಕಲಾವಿದನ/ ತಂತ್ರಜ್ಞನ ಸಂಸ್ಕೃತಿಯೂ ಗಣಿಕೆಲಸದವನ ಅಥವಾ ರೈತನ ಸಂಸ್ಕೃತಿಗಿಂತ ಭಿನ್ನ. ಆದರೆ ಒಂದು ಆರೋಗ್ಯಕರವಾದ ಸಮಾಜದಲ್ಲಿ ಇವೆಲ್ಲವೂ ಒಂದೆ ಸಂಸ್ಕೃತಿಯ ಅಂಗಗಳು. ಬೇರೆ ದೇಶಗಳಲ್ಲಿ ಅದೇ ವೃತ್ತಿಯನ್ನು ಕೈಗೊಂಡಿರುವ ಜನರ ಸಂಸ್ಕೃತಿಯೂ ಈ ಸಂಸ್ಕೃತಿಯೂ ಒಂದೇ ಆಗಿರುವುದಿಲ್ಲ"(ಚಿದಾನಂದಮೂರ್ತಿ ಎಂ;೨೦೦೮;ಪುಟ:೬)

ಸಂಸ್ಕೃತಿಯ ಅಧ್ಯಯನಕ್ಕೆ ಭದ್ರವಾದ ತಳಹದಿಯನ್ನು ಹಾಕಿದ ಇ.ಬಿ.ಟೈಲರ್‌ನು ತನ್ನ 'ಪ್ರಿಮೈಟಿವ್ ಕಲ್ಚರ್' (Primitive culture) ನಲ್ಲಿ "ಸಮಾಜದ ಒಬ್ಬ ಸದಸ್ಯನಾಗಿ ಮಾನವನು ತಾನು ಗಳಿಸಿಕೊಂಡ ಪರಂಪರೆಯ ಜ್ಞಾನ, ನಂಬಿಕೆ, ಕಲೆ, ನೀತಿ, ನಿಯಮ, ಆಚರಣೆ, ಸ್ವಭಾವ, ನಡೆ ನುಡಿಗಳು, ಆಚಾರ ವಿಚಾರಗಳನ್ನು ಒಳಗೊಳ್ಳುವ ಒಂದು ಸಂಕೀರ್ಣ ಮೊತ್ತವೇ ಸಂಸ್ಕೃತಿ" (ರಾಮಕೃಷ್ಣ ಆರ್;೧೯೯೨;ಪುಟ:೭) ಎಂದು ಅಭಿಪ್ರಾಯಪಡುತ್ತಾನೆ.

ಮಾನವ ಶಾಸ್ತ್ರಜ್ಞ ಲಿಂಟನ್‌ನ ಅಭಿಪ್ರಾಯದಲ್ಲಿ "ಒಂದು ನಿರ್ದಿಷ್ಟ ಸಮಾಜದ ಸದಸ್ಯರು ಹಂಚಿಕೊಳ್ಳುವ, ಪ್ರಸಾರ ಮಾಡುವ ಜ್ಞಾನ ಮತ್ತು ಸಾಂಪ್ರದಾಯಿಕ ನಡವಳಿಕೆಯ ನಮೂನೆಗಳ ಒಟ್ಟು ಮೊತ್ತವೇ ಸಂಸ್ಕೃತಿಯಾಗಿದೆ" (ರಾಮಕೃಷ್ಣ ಆರ್;೧೯೯೨;ಪುಟ:೭). ಅಂದರೆ ಒಂದು ಸಮಾಜದ ಸಂಸ್ಕೃತಿಯ ಪ್ರಕ್ರಿಯೆ ವ್ಯಕ್ತಿಯಿಂದ ಸಮೂಹದ ಕಲ್ಪನೆಯ ಕಡೆಗೆ ತನ್ನ ದೃಷ್ಟಿಯನ್ನು ತಿರುಗಿಸಿದೆ ಎಂದು ಲಿಂಟನ್‌ನ ಮಾತಿನ ಅರ್ಥ.

ಮ್ಯಾಥ್ಯೂ ಅರ್ನಾಲ್ಡ್ ರ ದೃಷ್ಟಿಯಲ್ಲಿ ಮಾನವನು ಜೀವನದಲ್ಲಿ ಪೂರ್ಣತೆಯನ್ನು

ಸಾಧಿಸಲು ಮಾಡುವ ಪ್ರಯತ್ನದ ಫಲವೇ ಸಂಸ್ಕೃತಿಯಾಗಿದೆ. ಹರ್‌ಸ್ಕೋವಿಟ್ಸ್‌ನು ಪೂರ್ಣ ಪರಸರದಲ್ಲಿ ಮನುಷ್ಯ ನಿರ್ಮಿತ ಭಾಗವೇ ಸಂಸ್ಕೃತಿ ಎಂದಿದ್ದಾನೆ (ರಾಮಕೃಷ್ಣ ಆರ್;೧೯೯೨;ಪುಟ:೭)

ಪಾಶ್ಚಾತ್ಯ ಸಂಸ್ಕೃತಿ ಚಿಂತಕರು ಸಂಸ್ಕೃತಿ ಎಂಬುದು (Constract) ಬೌದ್ಧಿಕವಾಗಿ ರೂಪಿಸಿಕೊಂಡ ಒಂದು ಪರಿಕಲ್ಪನೆ. ಪರೋಕ್ಷವಾಗಿ ಮತ್ತು ಪ್ರತ್ಯಕ್ಷವಾಗಿ ಮಾನವ ಸಮಾಜವನ್ನು ನಿಯಂತ್ರಣ ಮಾಡುತ್ತ ಮಾನವ ಸಮಾಜದ ಪ್ರತಿಯೊಂದು ಹಂತದಲ್ಲಿಯೂ ಕೊಂಡಿಯಾಗಿ ನಿರ್ವಹಿಸುತ್ತಿರುವ 'ಸಂಸ್ಕೃತಿ' ಎಂಬ ಪದವನ್ನು Inhabit, Cultivate, Protect, Honour with Worship–ಎಂದು ವ್ಯಾಖ್ಯಾನ ನೀಡಿದ್ದಾರೆ.

ಶಂ.ಬಾ.ಜೋಶಿಯವರು ಭೌಗೋಳಿಕ ವ್ಯಾಪ್ತಿಯ ನೆಲೆಗಳು, ಜನಾಂಗೀಯ ಅಧ್ಯಯನದ ನೆಲೆಗಳು, ಭಾಷಿಕ ಅಂತಃ ಪ್ರಮಾಣದ ನೆಲೆಗಳು, ಆಚರಣಾ ಮೂಲದ ನೆಲೆಗಳು, ದೈವತ್ವ ಕಥೆಗಳು, ಸಾಂಕೇತಿಕ ಆಕೃತಿಗಳ ನೆಲೆಗಳು, ಸ್ಥಳನಾಮಗಳ ಅಧ್ಯಯನ ಎಂಬ ನೆಲೆಯಲ್ಲಿ ಸಂಸ್ಕೃತಿ ಚಿಂತನೆ ಮಾಡಿರುವುದನ್ನು ಗಮನಿಸಬಹುದು.

ದೇವುಡು ಅವರು "ಜೀವನವನ್ನು ನಯವಾಗಿ ಸಾಗಿಸಿಕೊಂಡು ಹೋಗುವುದನ್ನೇ ಸಂಸ್ಕೃತಿ" ಎಂದಿದ್ದಾರೆ. ಡಿವಿಜಿಯವರು "ನಮ್ಮ ಜೀವನವನ್ನು ಸಾಧುವನ್ನಾಗಿ ಮಾಡಿಕೊಳ್ಳುವ ವಿಧಾನವೇ ಸಂಸ್ಕೃತಿ"ಎಂದಿದ್ದಾರೆ. ಹುಟ್ಟಿನಿಂದ ಹಿಡಿದು ಸಾಯುವವರೆಗೂ ನಡೆಯುವ ಎಲ್ಲ ಬಗೆಯ ಜೀವನಾನುಭವ ಸಂಸ್ಕೃತಿಯೆನಿಸಿಕೊಳ್ಳುತ್ತದೆ. ಅದು ಧರ್ಮದ ಆಚರಣೆ, ಆಚರಣೆಯ ನೆಪದಲ್ಲಿ ಹುಟ್ಟಿಕೊಂಡ ಕಲೆ, ಸಾಹಿತ್ಯ, ಸಂಗೀತ, ವಿಧಿ, ಐತಿಹ್ಯ, ದೈವ ಹೀಗೆ ಏನು ಬೇಕಾದರೂ ಆಗಿರಬಹುದು. ಒಟ್ಟಾರೆ ಸಂಸ್ಕೃತಿ ಎಂಬುದು ಸೂತ್ರ ರೂಪದಲ್ಲಿ ಹಿಡಿದಿಡಲಾಗದ ವಿರಾಟ್ ಶಕ್ತಿ ಎಂಬುದನ್ನು ನಾವು ಈ ಎಲ್ಲ ಹೇಳಿಕೆಗಳಿಂದ ಕಂಡುಕೊಳ್ಳಬಹುದು.

ಮಾನವ ಶಾಸ್ತ್ರೀಯ ಸಾಂಸ್ಕೃತಿಕ ಚಿಂತಕರು ಒಂದು ಪ್ರದೇಶದ ಜನರ ವರ್ತನೆ, ಆಲೋಚನಾ ಕ್ರಮಗಳನ್ನು ಆಯಾ ಪ್ರದೇಶದ ಜನಸಮುದಾಯದ ಜೀವನ ಪದ್ಧತಿಗಳ ಮೂಲಕವೇ ಅರಿಯಲು ಮುಂದಾದರು. ಹೀಗಾಗಿ ಅವರು ಮಾನವಶಾಸ್ತ್ರ ಎಂಬ ಶಾಸ್ತ್ರವನ್ನು ರೂಪಿಸಿ ಜನಸಮುದಾಯಗಳ ಮಾಹಿತಿ ಸಂಗ್ರಹಿಸಲಾರಂಭಿಸಿದರು. ಆಗಲೇ ಸಮುದಾಯಗಳ ಕಲೆ, ನಂಬಿಕೆ, ಆಚರಣೆಗಳನ್ನು ಸಂಸ್ಕೃತಿ ಕಕ್ಷೆಗೆ ತಂದು ಅದನ್ನೇ ಸಾಂಸ್ಕೃತಿಕ ಮಾನವಶಾಸ್ತ್ರ ಎಂದು ಕರೆದರು. ಮಾನವ ಶಾಸ್ತ್ರದ ವ್ಯಾಖ್ಯೆಯ ಪ್ರಕಾರ ಸಂಸ್ಕೃತಿಯಲ್ಲಿ ಉನ್ನತ ಅಥವಾ ಕೀಳು ಎಂಬ ತಾರತಮ್ಯವಿಲ್ಲ. ಅವು ಆಯಾ ವರ್ಗಗಳ ಮೌಲ್ಯ ಕಲ್ಪನೆಯ ತೀರ್ಮಾನಗಳಾಗಿದ್ದು, ಸಮುದಾಯಗಳ ಜೀವನ ವಿಧಾನದಲ್ಲಿ ಬರುವ ಎಲ್ಲ ನಂಬಿಕೆ ಆಚರಣಾ ಸಾಧನಗಳು ಸಂಸ್ಕೃತಿಯಾಗುತ್ತದೆ.

ಬಸರೂರಿನ ಸಾಂಸ್ಕೃತಿಕ ಅಧ್ಯಯನ ಎಂಬ ಶೀರ್ಷಿಕೆಯ ಸಾಂಸ್ಕೃತಿಕ ಎಂಬ ವಿಶೇಷಣಕ್ಕೆ ಈ ಸಂದರ್ಭದಲ್ಲಿ ವಿವರಣೆ ಅಗತ್ಯವಿದೆ. ಸಂಸ್ಕೃತಿ ಎಂಬ ಪದವು ಇಂಗಿಷ್ಲಿನ 'ಕಲ್ಚರ್' ಎಂಬ ಪದಕ್ಕೆ ಸಮನಾರ್ಥಕವಾಗಿ ಹುಟ್ಟಿಕೊಂಡಿದೆ. ಮೂಲತಃ ಪಶ್ಚಿಮದಲ್ಲಿ ಅದು ಸಾಕುವಿಕೆ ಅಥವಾ ಕೃಷಿ ಅರ್ಥವನ್ನು ನೀಡುತ್ತಿತ್ತು. ಮೊದಲು ಸಂಸ್ಕೃತಿ ನೈತಿಕ ಮತ್ತು ಆದರ್ಶದ ನೆಲೆಯ ಅರ್ಥದಲ್ಲಿತ್ತು. ಆನಂತರದಲ್ಲಿ ಕಲಾಕೇಂದ್ರಿತ ಚಟುವಟಿಕೆಗಳ ಅರ್ಥವನ್ನು ಪಡೆದುಕೊಂಡಿತು. ಸಾಹಿತ್ಯ, ಸಂಗೀತ, ಚಿತ್ರಕಲೆ, ಶಿಲ್ಪ ಮೊದಲಾದವು ಸಾಂಸ್ಕೃತಿಕ ಅಂಶಗಳನ್ನು ಒಳಗೊಳ್ಳುತ್ತಿದ್ದವು. ಅನಂತರದಲ್ಲಿ ಹಿಂದುಳಿದ, ಬುಡಕಟ್ಟು ಜನಾಂಗದ ಜೀವನ ವಿವರಗಳ ದಾಖಲೆ ಎನ್ನುವ ಅರ್ಥದಲ್ಲಿ ಪ್ರಯೋಗವಾಯಿತು. ಇತ್ತೀಚಿನ ದಿನಗಳಲ್ಲಿ ಸಂಸ್ಕೃತಿ ಎನ್ನುವುದು ಸಾಮಾಜಿಕ ಎನ್ನುವ ಅರ್ಥದಲ್ಲಿ ಬಳಕೆಯಾಯಿತು.

ಈ ಮೇಲಿನ ಸಂಸ್ಕೃತಿಯ ಹೇಳಿಕೆಗಳನ್ನು ಗಮನಿಸಿದರೆ ಒಂದು ಪ್ರದೇಶದ ಜನಸಮುದಾಯದ ಜೀವನ ಸಂಸ್ಕೃತಿಯ ಒಟ್ಟು ಅಧ್ಯಯನವು ಸಾಂಸ್ಕೃತಿಕ ಅಧ್ಯಯನ ಎನಿಸಿಕೊಳ್ಳುವುದು. ಇಲ್ಲಿ ಆ ಪ್ರದೇಶದ ಭೌಗೋಳಿಕ ವಿವರ, ಸ್ಥಳನಾಮಗಳು, ಐತಿಹಾಸಿಕ ವಿವರ, ಜನಸಮುದಾಯದ ಜೀವನಪದ್ಧತಿ, ಆಹಾರಕ್ರಮ, ಆಚರಣೆ, ನಂಬಿಕೆ, ಭಾಷೆ, ಮುಂತಾದವುಗಳನ್ನು ಸಂಸ್ಕೃತಿಯ ನೆಲೆಯಲ್ಲಿ ವಿವೇಚನೆ ಮಾಡಲಾಗಿದೆ.

ಬಸರೂರಿನ ಸಾಂಸ್ಕೃತಿಕ ಅಧ್ಯಯನದಲ್ಲಿ ಸಾಂಸ್ಕೃತಿಕ ಮಾನವಶಾಸ್ತ್ರೀಯ ಮಾದರಿಯನ್ನು ಅನುಸರಿಸಲಾಗಿದೆ. ಇಲ್ಲಿ ಸಂಸ್ಕೃತಿಯನ್ನು ಮೇಲು, ಕೀಳು ಎಂದು ಪರಿಭಾವಿಸದೆ ಒಂದು ಪ್ರದೇಶದ ಜನರ ಆಚರಣೆ, ಆರಾಧನೆ, ನಂಬಿಕೆಗಳನ್ನು ಸಮಪಾತಾಳಿಯಲ್ಲಿ ನೋಡಲಾಗಿದೆ.

## ೨.೨ ಬಸರೂರಿನ ಭೌಗೋಳಿಕ ಹಿನ್ನೆಲೆ

ಒಂದು ಪ್ರದೇಶದ ಭೌಗೋಳಿಕ ವಿವರಗಳಿಗೂ ಅಲ್ಲಿನ ಸಂಸ್ಕೃತಿಗೂ ಅವಿನಾಭಾವ ಸಂಬಂಧವಿರುತ್ತದೆ. ಹಾಗಾಗಿ ಒಂದು ಪ್ರದೇಶದ ಸಾಂಸ್ಕೃತಿಕ ಆಕೃತಿಯನ್ನು ಅರ್ಥಮಾಡಿಕೊಳ್ಳಲು ಅಲ್ಲಿನ ಭೌಗೋಳಿಕ ಸನ್ನಿವೇಶಗಳನ್ನು ಅರ್ಥಮಾಡಿಕೊಳ್ಳುವ ಅಗತ್ಯವಿದೆ. ಎಷ್ಟೋಬಾರಿ ಒಂದು ದೇಶದ, ರಾಜ್ಯದ, ಜಿಲ್ಲೆಯ, ಪ್ರದೇಶದ ಭೌಗೋಳಿಕ ವಿವರಗಳು ಅಲ್ಲಿನ ಧಾರ್ಮಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ನಿರ್ಧರಿಸುತ್ತದೆ ಮತ್ತು ನಿಯಂತ್ರಿಸುತ್ತದೆ. ಈ ಕಾರಣದಿಂದ ಭೌಗೋಳಿಕ ವಿವರಗಳನ್ನು ಸೂಕ್ಷ್ಮವಾಗಿ ಗ್ರಹಿಸದೆ, ವಿವರಿಸಿಕೊಳ್ಳದೆ ಅಲ್ಲಿನ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವುದು ತುಸು ಕಷ್ಟವೆ.

ಒಂದು ಪ್ರದೇಶದ ಸಾಂಸ್ಕೃತಿಕ ಅಧ್ಯಯನಕ್ಕೆ ಅಲ್ಲಿನ ಭೌಗೋಳಿಕ ವಿವರಗಳೇ

ಆಧಾರ. ಕೆಲವೊಮ್ಮೆ ಭೌಗೋಳಿಕ ವಿವರಗಳಿಗೂ ಸಂಸ್ಕೃತಿಗೂ ಹೊಂದಾಣಿಕೆಯನ್ನು ಬೆಸೆಯದೆ ಬೇರೆ ಬೇರೆಯಾಗಿಯೆ ನೋಡುವುದಿದೆ. ಹೀಗೆ ಭಿನ್ನವಾಗಿ ನೋಡಿದರೆ ಆ ಮಟ್ಟಿಗೆ ಸಂಸ್ಕೃತಿಯೊಂದನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಮುಖ್ಯವಾಗಿ ಈ ಅಧ್ಯಾಯದಲ್ಲಿ ಸ್ಥಳನಾಮ ಪರಿಚಯ, ಭೌಗೋಳಿಕ ಹಿನ್ನೆಲೆ, ಚಾರಿತ್ರಿಕ ಹಿನ್ನೆಲೆ ಹಾಗೂ ಜನಸಮುದಾಯದ ಹಿನ್ನೆಲೆ ಎಂಬ ಉಪಶೀರ್ಷಿಕೆಯಡಿಯಲ್ಲಿ ಬಸರೂರಿನ ಸಾಂಸ್ಕೃತಿಕ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದೆ.

ಬಸರೂರಿನ ಸಾಂಸ್ಕೃತಿಕ ಅಧ್ಯಯನಕ್ಕೆ ಪೂರ್ವಭಾವಿಯಾಗಿ ಆ ಪ್ರದೇಶದ ಭೌಗೋಳಿಕ ಹಿನ್ನೆಲೆಯನ್ನು ತಿಳಿದುಕೊಳ್ಳಬೇಕು. ಬಸರೂರಿನ ಸಾಂಸ್ಕೃತಿಕ ಸಂರಚನೆಯಲ್ಲಿ ಭೌಗೋಳಿಕ ಅಂಶಗಳು ಬೀರಿದ ಪ್ರಭಾವವನ್ನು ಅರ್ಥೈಸಿಕೊಳ್ಳಲು ಮತ್ತು ಅವುಗಳೊಂದಿಗೆ ಬಸರೂರಿನ ಐತಿಹಾಸಿಕ, ಧಾರ್ಮಿಕ ಹಾಗೂ ಸಾಮಾಜಿಕ ಅಂಶಗಳು ಬೆರೆತುಕೊಂಡಿರುವುದನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಬಸರೂರಿನ ಒಟ್ಟು ಸಂಸ್ಕೃತಿಯನ್ನು ರೂಪಿಸುವಲ್ಲಿ ಈ ಭೌಗೋಳಿಕ ಅಂಶಗಳ ಪಾತ್ರವೇನು ಎಂಬುದು ತಿಳಿಯುತ್ತದೆ. ನಮ್ಮ ಸಂಸ್ಕೃತಿಯ ಬೆಳವಣಿಗೆಯ ಬಗೆಗೆ ಹಲವಾರು ವಿದ್ವಾಂಸರು ತಮ್ಮದೆ ಆದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಪ್ರತಿಯೊಂದು ಸಂಸ್ಕೃತಿಯು ತನ್ನದೆ ಆದ ಮಹತ್ವ ಮತ್ತು ವಿಶಾಲತೆಯನ್ನು ಪಡೆದುಕೊಂಡಿರುತ್ತದೆ. ಆಯಾ ಸಮುದಾಯಗಳು ತಮ್ಮ ಮೂಲ ಅನನ್ಯತೆಯೊಂದಿಗೆ ತಮ್ಮದೆ ಆದ ವಿಶಿಷ್ಟ ರೀತಿಯಲ್ಲಿ ತಮಗೆ ಬೇಕಾದ ಹಾಗೆ ಸಂಸ್ಕೃತಿಯನ್ನು ರೂಢಿಸಿಕೊಂಡಿರುತ್ತವೆ. ಈ ಸಂಸ್ಕೃತಿಯಲ್ಲಿ ಜೀವನ ವಿಧಾನ, ಆಚಾರ ವಿಚಾರ, ಪೂಜೆ ಪುನಸ್ಕಾರ, ನಂಬಿಕೆ, ಸಂಪ್ರದಾಯ, ಆಚರಣೆ ವಿಧಿ ವಿಧಾನಗಳಿಗೆ ಅಲ್ಲಿನ ಭೌಗೋಳಿಕ ಹಿನ್ನೆಲೆಯ ಪ್ರಭಾವವೇ ಕಾರಣವಾಗಿರುತ್ತದೆ.

ಬಸರೂರನ್ನು ಒಂದು ಪ್ರಾದೇಶಿಕ ಘಟಕವನ್ನಾಗಿ ಪರಿಗಣಿಸಿದಾಗ ಈ ಘಟಕವು ಅನೇಕ ಸಾಂಸ್ಕೃತಿಕ ನೆಲೆಗಳನ್ನುಳ್ಳ ಸಂಕೀರ್ಣ ರೂಪದ್ದಾಗಿದೆ. ಆದುದರಿಂದ ಈ ಅಧ್ಯಾಯದಲ್ಲಿ ಭೌಗೋಳಿಕ ಹಿನ್ನೆಲೆ ಎಂಬ ನೆಲೆಯಲ್ಲಿ ಬಸರೂರಿನ ಒಳಗಿನ ಭೌಗೋಳಿಕ ಅಂಶಗಳನ್ನು ಬಹುಮುಖ್ಯವಾಗಿ ಗಮನಿಸಲಾಗಿದೆ. ಬಸರೂರಿನ ಆರ್ಥಿಕ, ರಾಜಕೀಯ ಬೆಳವಣಿಗೆ ಬಸರೂರಿನ ಬಾಹ್ಯಭೌಗೋಳಿಕ ಅಂಶಗಳಾದ ನದಿಗಳು, ಪರ್ವತಗಳು, ಬೆಳೆಗಳು ಕಾರಣವಾಗಿರುವಂತೆ ಬಸರೂರಿನ ಅಂತರ್‌ಭೌಗೋಳಿಕತೆ ಇಲ್ಲಿನ ಕೃಷಿ ಮತ್ತು ಕೃಷಿಗೆ ಸಂಬಂಧಿಸಿದ ಆಚರಣೆ, ದೈವಸ್ಥಾನ ಮತು ದೇವಾಲಯಕ್ಕೆ ಸಂಬಂಧಿಸಿದ ಆಚರಣೆಗಳ ಮೇಲೆ ಸಾಕಷ್ಟು ಪ್ರಭಾವ ಬೀರಿದನ್ನು ಗಮನಿಸಬಹುದು. ಪ್ರಕೃತಿ, ಭೌಗೋಳಿಕ ಸನ್ನಿವೇಶದೊಡನೆ ಮನುಷ್ಯನ ಸಂಘರ್ಷ ಮತ್ತು ಹೊಂದಾಣಿಕೆ ನಿರಂತರವಾಗಿರುತ್ತದೆ.

ಪ್ರಾಗ್ಐತಿಹಾಸಿಕ ಮಾನವನ ಕಾಲದಿಂದ ಹಿಡಿದು ಇಲ್ಲಿಯವರೆಗೆ ಬಸರೂರಿನ

ಸಾಂಸ್ಕೃತಿಕ ಪರಂಪರೆಯನ್ನು ಗುರುತಿಸಬಹುದು. ಜಾಗತೀಕರಣದ ಹಿನ್ನೆಲೆಯಲ್ಲಿ ಒಂದು ಪ್ರದೇಶದ ಸಾಂಸ್ಕೃತಿಕ ವಿವರಗಳು ಮತ್ತು ಭೌಗೋಳಿಕ ಸಂಗತಿಗಳು ಅಗತ್ಯವೆನಿಸಿದರೂ ಅವುಗಳ ದಾಖಲೀಕರಣ ಈ ಸಂದರ್ಭದಲ್ಲಿ ಬಹಳ ಮಹತ್ವದ್ದಾಗಿ ಕಂಡುಬರುತ್ತದೆ. ಏಕೆಂದರೆ ಒಂದು ಪ್ರದೇಶದ ಸಾಂಸ್ಕೃತಿಕ ಅಂಶಗಳನ್ನು ಮತ್ತು ಅದರ ಬಹುಮುಖಿ ಆಯಾಮಗಳನ್ನು ಸರಿಯಾದ ದಿಸೆಯಲ್ಲಿ ಅರ್ಥಮಾಡಿಕೊಂಡಾಗ ಮಾತ್ರ ಪ್ರಾದೇಶಿಕ ಅಧ್ಯಯನವು ತನ್ನ ಅರ್ಥವನ್ನು ಕಂಡುಕೊಳ್ಳುತ್ತದೆ.

ಬಸರೂರು ಕುಂದಾಪುರ ತಾಲೂಕಿನ ಒಂದು ಊರು. ಪ್ರಾಚೀನ ಕರ್ನಾಟಕದ ರೇವು ಪಟ್ಟಣಗಳಲ್ಲಿ ಒಂದು. ಈ ಊರು ನಗರ ಸಂಸ್ಕೃತಿಯನ್ನು ಅಂಟಿಕೊಳ್ಳದೆ, ಗ್ರಾಮೀಣ ಸಂಸ್ಕೃತಿಯನ್ನು ಬಿಟ್ಟುಕೊಡದೇ ನಗರ ಮತ್ತು ಗ್ರಾಮೀಣ ಸಂಸ್ಕೃತಿಯ ಆಡಂಬೋಲವಾಗಿದೆ. ಬಸರೂರಿನ ಪೂರ್ವಕ್ಕೆ ಬಳ್ಕೂರು, ಜಪ್ತಿ, ದಕ್ಷಿಣಕ್ಕೆ ಕಂದಾವರ, ಪಶ್ಚಿಮಕ್ಕೆ ಆನಗಳ್ಳಿ, ಉತ್ತರಕ್ಕೆ ಹಟ್ಟಿಕುದ್ರು, ಇವೆಲ್ಲವುಗಳಿಗೆ ಸಾಕ್ಷಿಯಾಗಿ ನಿಂತಿರುವ ವಾರಾಹಿ ನದಿ ಬಸರೂರಿಗೊಂದು ಸುಂದರ ಪ್ರಾಕೃತಿಕ ಸೌಂದರ್ಯವನ್ನು ನೀಡಿದೆ. ಈ ಬಗೆಯ ಪ್ರಾಕೃತಿಕ ವೈವಿಧ್ಯತೆ ಬಸರೂರಿಗೊಂದು ವಿಶಿಷ್ಟ ಸಂಸ್ಕೃತಿಯನ್ನು ರೂಪಿಸಿದೆ. "ನದಿ, ತೋಡು, ಎತ್ತರವಾದ ಗುಡ್ಡ, ಭೌಗೋಳಿಕಸ್ಥಿತಿ, ವಿಶಿಷ್ಟ ಆರಾಧನಪದ್ಧತಿ ಮತ್ತು ಸಂಸ್ಕೃತಿ ಹುಟ್ಟಿ ಬೆಳೆಯಲು ಸಾಧನವಾಗುತ್ತದೆ" (ಚಿನ್ನಪ್ಪಗೌಡ ಕೆ;೧೯೮೮;ಪುಟ:೨೧).

ಬಸರೂರಿನ ಪಶ್ಚಿಮಕ್ಕೆ ಅರಬ್ಬಿ ಸಮುದ್ರವಿದೆ. ಪೂರ್ವದಲ್ಲಿ ಪಶ್ಚಿಮ ಘಟ್ಟದ ಸಾಲು, ಉತ್ತರಕ್ಕೆ ವಾರಾಹಿನದಿ. ಇವುಗಳ ನಡುವೆ ನದಿ ಪಾತ್ರಕ್ಕೆ ಅಂಟಿಕೊಂಡಿರುವ ಫಲವತ್ತಾದ ಭೂಪ್ರದೇಶ. ಬಸರೂರು ಒಂದು ಕಾಲಕ್ಕೆ ಫಲವತ್ತಾದ ಕೃಷಿ ಭೂಮಿಯನ್ನು ಹೊಂದಿದೆ. ಇಲ್ಲಿಂದ ಫನೇಗಾ[೧] ಎಂಬ ಅಕ್ಕಿಯ ಮುಡಿ ವಿದೇಶಗಳಿಗೆ ರಫ್ತಾಗುತ್ತಿತ್ತು. ಈಗಲೂ ಕೂಡಾ ಭತ್ತ ಮತ್ತು ಕಬ್ಬನ್ನು ಬೆಳೆಯುವ ಫಲವತ್ತಾದ ಪ್ರದೇಶವಾಗಿದೆ. ಸುಮಾರು ೫೨೪ ಎಕ್ರೆ ಭತ್ತ ಬೆಳೆಯುವ ಭೂಮಿ, ಸುಮಾರು ೩೦ ಎಕ್ರೆ ಕಬ್ಬು ಬೆಳೆಯುವ ಭೂಮಿ,೩೦೦ ಎಕ್ರೆ ತೆಂಗು ಬೆಳೆಯುವ ಪ್ರದೇಶವನ್ನು ಹೊಂದಿದೆ. ಬಸರೂರು ದೊಡ್ಡ ನೀರಾವರಿ ಸೌಲಭ್ಯವನ್ನು ಹೊಂದಿರುವ ಪ್ರದೇಶವಾಗಿದ್ದು, ಕೆರೆಗಳು ಬಸರೂರಿನ ಕೃಷಿಕರ ಜೀವನಾಡಿಯಂತೆ ಕಾರ್ಯನಿರ್ವಹಿಸುತ್ತಿವೆ.

ಬಸರೂರಿನ ಒಳಗಡೆ ಏಳು ಕೆರೆಗಳು ಬಸರೂರಿನ ಧಾರ್ಮಿಕ ಮತ್ತು ಸಾಮಾಜಿಕ ಬದುಕಿಗೆ ಆಸರೆಯಾದರೆ, ಬಸರೂರಿನ ಹೊರಭಾಗದಲ್ಲಿರುವ ಹೆರೀಕೆರೆ, ಗುತ್ತಿಕೆರೆ, ಕೋಳ್‌ಕೆರೆಗಳು ನೀರಾವರಿಗೆ ಯೋಗ್ಯವಾಗಿದೆ. ಈ ಕೆರೆಯ ನೀರಾವರಿಯಿಂದ ಬಸರೂರಿನಲ್ಲಿ ಸುಗ್ಗಿ ಬೆಳೆಯನ್ನು ಬೆಳೆಯುತ್ತಾರೆ. ಕೆಲವರು ಉದ್ದು, ನೆಲಗಡಲೆ, ತರಕಾರಿ ಮೊದಲಾದ ವಾಣಿಜ್ಯ ಬೆಳೆಯನ್ನು ಬೆಳೆಯುತ್ತಾರೆ.

ಬಸರೂರಿನ ಸಾಂಸ್ಕೃತಿಕ ಉಪವಿಭಾಗಗಳಾದ ಆನಗಳ್ಳಿ, ಜಪ್ತಿ, ಬಳ್ಕೂರು, ಕಂದಾವರಗಳು ಬಸರೂರನ್ನು ಮಂಡಲದ ರೀತಿಯಲ್ಲಿ ಸುತ್ತುವರಿದಿದೆ. ಬಸರೂರಿನ ಉತ್ತರದಲ್ಲಿ ಹರಿಯುವ ವಾರಾಹಿ ನದಿ ಈ ಐದು ಗ್ರಾಮಗಳನ್ನು ಭೌಗೋಳಿಕವಾಗಿ ಬಂಧಿಸಿದೆ. ಈ ಎಲ್ಲಾ ಐದು ಘಟಕಗಳು ಒಟ್ಟಿಗೆ ಕಾರ್ಯನಿರ್ವಹಿಸುತ್ತವೆ ಮತ್ತು ಅವೆಲ್ಲವೂ ಸಾಂಸ್ಕೃತಿಕವಾಗಿ ಒಂದೇ ಕೇಂದ್ರಕ್ಕೆ ಅಧೀನವಾಗುವಂತೆ ಮಾಡಿದೆ.

ಈ ಪಟ್ಟಣ ಪ್ರಾದುರ್ಭಾವ ಕಾಲದಲ್ಲಿ ಏಳು ಕೇರಿಗಳಾಗಿ ವಿಭಾಗಿಸಲ್ಪಟ್ಟಿದೆ. ಅವುಗಳೆಂದರೆ ಕೋಟೆಯಕೇರಿ, ಚೋಳಿಯಕೇರಿ, ಹೊಸಕೇರಿ, ಸಾಲಿಗರಕೇರಿ, ಮೂಡುಕೇರಿ, (ಮೂರುಕೇರಿ) ಪಡುವಕೇರಿ, ಈಗ ಸ್ಮರಣೆಯಲ್ಲಿ ಬೇರೆ ಹೆಸರುಗಳಿವೆ.[೨] ಬಸರೂರಿನಲ್ಲಿ ಈಗ ಇದ್ದ ಕೆರೆಗಳಿಗೆ ಹಿಂದೆ ಬೇರೆ ಹೆಸರಿದ್ದಿತ್ತು. ದೇವರಕೆರೆ, ಮಾದನಕೆರೆ, ಮೂಡುಕೆರೆ, ಹಲರಕೆರೆ, ಮಾರಣಕೆರೆ, ಪಳ್ಳಿಕೆರೆ, ಗದ್ದೆಮನೆಕೆರೆ, ಮಠದ ಕೆರೆಗಳೆಂದು ಕರೆಯುತ್ತಿದ್ದರು. ಬದಲಾದ ರಾಜಕೀಯ, ಸಾಮಾಜಿಕ ಪರಿಸ್ಥಿತಿಗನುಗುಣವಾಗಿ ಕೆರೆ ಮತ್ತು ಕೇರಿಗಳ ಹೆಸರು ಬದಲಾಗಿದೆ. ಭೌಗೋಳಿಕ ಸ್ಥಿತಿಗತಿಗಳನ್ನು ಚರ್ಚಿಸುವಾಗ ವಾಸ್ತವಿಕತೆಗೆ ಹೆಚ್ಚು ಗಮನ ಕೊಡಬೇಕಾಗುತ್ತದೆ. ಸಾಂಸ್ಕೃತಿಕ ಅಧ್ಯಯನವು ಭೂತದೊಂದಿಗೆ ವರ್ತಮಾನಕ್ಕೂ ಹೆಚ್ಚಿನ ಪ್ರಾಶಸ್ತ್ಯ ನೀಡುತ್ತದೆ.

ಬಸರೂರಿನ ಸಾಂಸ್ಕೃತಿಕ ಪ್ರಸರಣದಲ್ಲಿ ಪಡುವಕೇರಿಯ ಪಾತ್ರ ಪ್ರಧಾನವಾದುದು. ಇಲ್ಲಿ ಮಾಗಣೆಯ ಮುಖ್ಯದೇವರಾದ ಶ್ರೀಮಹಾಲಿಂಗೇಶ್ವರ ದೇವಾಲಯವಿದೆ. ಈ ದೇವಾಲಯವು ಐದು ಗ್ರಾಮಗಳ ಧಾರ್ಮಿಕ ಆಚರಣೆಗಳಿಗೆ ಯಜಮಾನನಾಗಿ, ಬಸರೂರಿನ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಶ್ರೀಮಂತಿಕೆಯನ್ನು, ಬಸರೂರಿನ ಗತ ಇತಿಹಾಸವನ್ನು, ಧಾರ್ಮಿಕ ಉನ್ನತಿಯನ್ನು ನೆನಪಿಸುವ ವರ್ತಮಾನದ ಕೊಂಡಿಯಾಗಿ ಕೆಲಸ ನಿರ್ವಹಿಸುತ್ತದೆ. ಬಸರೂರಿನೊಡನೆ ಉಳಿದ ನಾಲ್ಕು ಗ್ರಾಮಗಳು ಧಾರ್ಮಿಕ ಏಕತೆಯನ್ನು ಸಾಧಿಸಲು ಶ್ರೀಮಹತೋಭಾರ ಮಹಾಲಿಂಗೇಶ್ವರನೇ ಕೇಂದ್ರ ಶಕ್ತಿಯಾಗಿ ನಿಲ್ಲುತ್ತಾನೆ. ಬಸರೂರಿನ ವೈದಿಕ ಮತ್ತು ವೈದಿಕೇತರ ಆಚರಣೆಗಳಿಗೆಲ್ಲ ಈ ದೇವಾಲಯ ಪ್ರಮುಖನೆಲೆ.

ಬಸರೂರಿನ ಶ್ರೀಮಹಾಲಿಂಗೇಶ್ವರ ದೇವಾಲಯದಿಂದ ಉತ್ತರಕ್ಕೆ ಪೇಟೆ ಆಂಜನೇಯ ಸ್ವಾಮಿ ದೇವಾಲಯ. ಅಲ್ಲಿಂದ ಮುಂದೆ ವಿಶಾಲವಾದ ಹಾದಿ ಬೀದಿಯನ್ನು ಹೊಂದಿದ ಕೇರಿಯೇ ಮಂಡಿಕೇರಿ. ವಿಜಯನಗರ, ಕೆಳದಿ, ಹೊನ್ನೆಕಂಬಳಿ ಅರಸರ ಕಾಲದಲ್ಲಿ ಮಂಡಿಕೇರಿ ಪ್ರಮುಖ ವಾಣಿಜ್ಯ ಕೇಂದ್ರವಾಗಿತ್ತು. ಬಸರೂರಿನ ಪ್ರಖ್ಯಾತಿಯಲ್ಲಿ ಮಂಡಿಕೇರಿಯ ಪಾತ್ರ ಪ್ರಧಾನವಾದದು. ಈ ಕೇರಿಯಲ್ಲಿ ವ್ಯಾಪಾರ ನಡೆಸುತ್ತಿದ್ದ ಹಂಜಮಾನರು, ನಖರಸೆಟ್ಟರು ಆರ್ಥಿಕ ವ್ಯವಹಾರದೊಂದಿಗೆ ಬಸರೂರಿನ ಸಾಂಸ್ಕೃತಿಕ ಉನ್ನತಿಯನ್ನು ಸಾಧಿಸಿದ್ದರು. ವಿದೇಶಿ ಪ್ರವಾಸಿಗರ ದಾಖಲೆಯಂತೆ[೩]

ಮೇಲುಬರ್ಸೆಲೋರಿನಲ್ಲಿರುವ ಈ ಕೇರಿ ಹೆಚ್ಚು ಉದ್ದಗಲ ಉಳ್ಳ ನೇರವೂ, ಸುಂದರವೂ ಆದ ಬೀದಿಯಾಗಿದೆ. ಈ ಕೇರಿಯು ಜಾಗತಿಕ ವ್ಯಾಪಾರಿಗಳ[೪] ಕೇರಿಯಾಗಿದೆ. ಹೊಳೆ ಮತ್ತು ಕಡಲ ವಣಿಕರು ಮಂಡಿಕೇರಿಯ ಮೂಲಕ ಬಟ್ಟೆ, ಅಕ್ಕಿ, ಮೆಣಸು, ಬೆಲ್ಲ, ಮರದಕೆತ್ತನೆ, ಲೋಹದ ವಿಗ್ರಹಗಳನ್ನು ವಿದೇಶಗಳಿಗೆ ರಫ್ತು ಮಾಡುತ್ತಿದ್ದರು. ಈ ಕೇರಿಯು ವಾರಾಹಿನದಿಯ ಹಡುಗುಕಟ್ಟೆಯವರೆಗೆ ಮುಂದುವರಿದಿತ್ತು. ಈ ಕೇರಿಯಲ್ಲಿ ವ್ಯಾಪಾರಿಗಳ ಬಂಡಸಾಲೆ[೫] ಮನೆಗಳಿವೆ ಮತ್ತು ಆಹಾರವಸ್ತುವನ್ನು ಸಂಗ್ರಹಿಸಿ ಇಡುತ್ತಿದ್ದ ಪಿಂಗಾಣಿಯ ದೊಡ್ಡದೊಡ್ಡ ಜಾಡಿಗಳಿವೆ. ಮಂಡಿಕೇರಿಯಲ್ಲಿ ಗೋವಾದಿಂದ ಬಸರೂರಿಗೆ ಬಂದು ನೆಲೆಸಿದ ಗೌಡಸಾರಸ್ವತರ ಶ್ರೀಮಹಾಲಸಾ ನಾರಾಯಣಿ ದೇವಾಲಯವಿದೆ. ಅಲ್ಲಿಂದ ಮುಂದಕ್ಕೆ ಇರುವ ಕಟ್ಟೆ, ಮಂಡಿಕೇರಿಕಟ್ಟೆ[೬]. ಈ ಕೇರಿಯ ಕೊನೆಗೆ ಕೊಂಕಣೆ ಖಾರ್ವಿಗಳ ಮನೆಗಳಿವೆ.

ಬಸರೂರು ಪಟ್ಟಣ ಪ್ರವೇಶಕ್ಕೆ ಪ್ರಮುಖವಾಗಿ ನಾಲ್ಕು ಮಾರ್ಗಗಳಿದ್ದವು. ಎರಡು ಜಲಮಾರ್ಗ, ಎರಡು ನೆಲಮಾರ್ಗಗಳು. ಮಂಡಿಬಾಗಿಲು ಪ್ರಮುಖ ಜಲಮಾರ್ಗವಾಗಿದ್ದು ರಾತ್ರಿ ವೇಳೆ ಶತ್ರುಗಳ ಪ್ರವೇಶವನ್ನು ತಡೆಯಲು ಮಂಡಿಬಾಗಿಲನ್ನು ಮುಚ್ಚುತ್ತಿದ್ದರು.

ಶ್ರೀ ಮಹಾಲಿಂಗೇಶ್ವರ ದೇವಾಲಯದಿಂದ ಉತ್ತರಕ್ಕೆ ಮಂಡಿಕೇರಿ. ಮಂಡಿಕೇರಿಯ ಪೂರ್ವಕ್ಕೆ ಸಮಾನಾಂತರವಾಗಿ ವಿಲಾಸಕೇರಿ. ಈ ಕೇರಿಯ ಕೊನೆಯಲ್ಲಿ ಹಡಗುಕಟ್ಟೆ ಇದೆ. ಇದು ಬಸರೂರನ್ನು ಜಲಮಾರ್ಗದಲ್ಲಿ ಪ್ರವೇಶಿಸುವ ಎರಡನೇಯ ಮುಖ್ಯದ್ವಾರ. ವಿಲಾಸಕೇರಿಗಳು ವ್ಯಾಪಾರಿ ಕೇಂದ್ರಗಳ ವಿಲಾಸಿ ತಾಣಗಳು ಆಗಿರುತ್ತಿದ್ದವು. ಬಸರೂರಿಗೆ ಬಂದಿಳಿಯುತ್ತಿದ್ದ ವಣಿಕರು ಮತ್ತು ನಾವಿಕರು ಹಡಗು ಸರಕು ತುಂಬಿಕೊಂಡು ಹೊರಡುವ ತನಕ ವಿಲಾಸಕೇರಿಯಲ್ಲಿ ವಿರಮಿಸುತ್ತಿದ್ದರು. ಈ ವಿಲಾಸ ಕೇರಿ ವಸಾಹತುಶಾಹಿ ನಂತರದಲ್ಲಿ ಕಾಣಿಸಿಕೊಂಡಿದ್ದು ಎನ್ನುವುದು ಸ್ಪಷ್ಟವಾಗುತ್ತದೆ. ವಸಾಹತುಶಾಹಿಯ ಸಂದರ್ಭದಲ್ಲಿ ಬಸರೂರಿಗೆ ಬರುವ ವ್ಯಾಪಾರಿಗಳು ತಮ್ಮ ಅಂತಸ್ತಿಗೆ ಸರಿಯಾಗಿ ವಿಲಾಸಿಗೃಹವನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಕಾರಂತರ ಕಾದಂಬರಿಯಲ್ಲಿ ಬಸರೂರಿನಲ್ಲಿ ವಿಲಾಸವು ಗಣ್ಯರಿಗೆ ಮಾತ್ರ ಮೀಸಲಾಗಿತ್ತು ಎಂದಿದ್ದಾರೆ. ಜನಪದ ಗೀತೆಯೊಂದರಲ್ಲಿ ಬಸರೂರಿನ ವಿಲಾಸಿನಿಯರ ವಿಲಾಸಿ ಜೀವನದ ಪ್ರಸ್ತಾಪವಿದೆ. ಈ ಕೇರಿಯಲ್ಲಿಯೂ ಮಂಡಿಬಾಗಿಲಿನಲ್ಲಿ ಇದ್ದಂತೆ ಪ್ರವೇಶ ದ್ವಾರವಿದ್ದಿತ್ತು. ಈಗ ಬಾಗಿಲುಗುಂದ[೭] ಮಾತ್ರ ಉಳಿದುಕೊಂಡಿದೆ. ಕೆಲವರು ಈ ಕೇರಿಯನ್ನು ವೀರೇಶ ಕೇರಿಯೆಂದು ಕರೆಯುತ್ತಾರೆ. ಇಲ್ಲಿ ವೀರೇಶ ದೇವಾಲಯ ಇದ್ದುದರಿಂದ ವೀರೇಶಕೇರಿಯಾಯಿತ್ತೆಂದು ಕೆಲವರ ಅಭಿಪ್ರಾಯವಾಗಿದೆ. ವೀರೇಶಕೇರಿಯೆ ವಿಲಾಸಕೇರಿಯಾಗಿ ರೂಪಾಂತರಗೊಂಡಿದೆ ಎನ್ನುತ್ತಾರೆ. ಆದರೆ ಶಾಸನದಲ್ಲಾಗಲಿ ದಾಖಲೆಗಳಲ್ಲಾಗಲಿ ವೀರೇಶ ದೇವಾಲಯದ ಪ್ರಸ್ತಾಪವಿಲ್ಲ.

ವಿಲಾಸಕೇರಿಯ ಆರಂಭದಲ್ಲಿರುವ ಕಟ್ಟೆಯನ್ನು ಚಿನಿವಾರಕಟ್ಟೆ ಎಂದು ಕರೆಯುತ್ತಾರೆ. ಚಿನಿವಾರ ಕಟ್ಟೆಗೆ ತಾಗಿಕೊಂಡಂತೆ ಪುರಾತನ ಬಾವಿ ಮತ್ತು ಅಶ್ವಥ ಕಟ್ಟೆಯಿದೆ. ವಿಲಾಸಕೇರಿ ಮತ್ತು ಮಂಡಿಕೇರಿಯ ಮಧ್ಯದಲ್ಲಿರುವ ಚಿನಿವಾರ ಕಟ್ಟೆ ಚಿನ್ನ ವ್ಯಾಪಾರಿಗಳ ಕಟ್ಟೆಯಾಗಿತ್ತೆಂದು ಭಾವಿಸಲಾಗಿದೆ. ಬಸರೂರು ರೇವು ಪಟ್ಟಣವಾಗಿರುವುದರಿಂದ ಎಲ್ಲ ಬಗೆಯ ವ್ಯಾಪಾರಗಳು ನಡೆಯುತ್ತಿತ್ತು. ಬಸರೂರಿನಲ್ಲಿ ಪರಪಳ್ಳಿ ನಾಯಕ (ಹೆಚ್ಚಿನ ವಿವರಗಳಿಗೆ ಜನಪದ ಸಾಹಿತ್ಯಸಂಸ್ಕೃತಿ ಅಧ್ಯಾಯದಲ್ಲಿನ ಪರಪಳ್ಳಿ ನಾಯಕನ ಐತಿಹ್ಯ)ಎನ್ನುವವನು ಚಿನ್ನದ ವ್ಯಾಪಾರ ಮಾಡುತ್ತಿದ್ದ ಬಗ್ಗೆ ಶಾಸನಾಧಾರಗಳಿವೆ.

ಬಸರೂರಿನಲ್ಲಿ ಬಸ್ತಿಕೇರಿ[೮] ಯೊಂದಿದೆ. ಜೈನರು ಬಸರೂರಿನ ಈ ಕೇರಿಯಲ್ಲಿ ನೆಲೆಸಿದ್ದಿರಬೇಕು. ಬಸರೂರಿನ ಸಮೀಪದ ಹಟ್ಟಿಯಂಗಡಿ ಜೈನಧರ್ಮದ ಕೇಂದ್ರವಾಗಿದ್ದಿತ್ತು. "೧೩ನೇ ಶತಮಾನದ ವೇಳೆಗೆ ಕುಂದಾಪುರ ತಾಲೂಕಿಗೆ ಜೈನಧರ್ಮ ಆಗಮವಾಗಿರಬಹುದು" (ಮಂಜುನಾಥ ಎಂ.ಜಿ;೨೦೦೧:ಪುಟ:೧೧೭). ವಾರಾಹಿ ನದಿಯ ಉತ್ತರಕ್ಕೆ ಹಟ್ಟಿಯಂಗಡಿ ದಕ್ಷಿಣದಲ್ಲಿ ಬಸರೂರು. ಜೈನವರ್ತಕರಾದ ನಖರರು, ಹಲರು ಸೆಟ್ಟಿಗಳು ಇಲ್ಲಿನ ಪ್ರಮುಖ ವ್ಯಾಪಾರಿ ಪಂಗಡದವರಾಗಿದ್ದರು. ಇವರ ಕಾಲದಲ್ಲಿ ಜೈನಧರ್ಮ ಬಸರೂರಿನಲ್ಲಿ ನೆಲೆಯನ್ನು ಕಂಡುಕೊಂಡಿರುವ ಸಾಧ್ಯತೆಗಳಿವೆ. 'ಹಟ್ಟಿಯಂಗಡಿ ಸುಟ್ಟು ಹದಿನಾರು ಪಟ್ಟಣವಾಯಿತು' ಎಂಬ ಲೋಕೋಕ್ತಿಯಂತೆ ಹದಿನಾಲ್ಕು ಪಟ್ಟಣದಲ್ಲಿ ಒಂದು ಪಟ್ಟಣ ಬಸರೂರು ಆಗಿದ್ದಿರಬಹುದು. ಬಸರೂರಿನ ಹಲರು ಎಂಬ ವ್ಯಾಪಾರಿ ಗುಂಪು ಜೈನರ ಪ್ರತಿನಿಧಿಗಳಾಗಿದ್ದರು. ಪಡುವಕೇರಿಯ ಶ್ರೀಮಹಾಲಿಂಗೇಶ್ವರ ದೇವಾಲಯದ ಓಕುಳಿ ಮಂಟಪದ ಎದುರಿನ ಬೀದಿಯಿಂದ ಎಡಕ್ಕೆ ತಿರುಗಿದರೆ ಪೂರ್ವಕ್ಕೆ ಬಸದಿಕೇರಿ. ಬಸದಿಬಾಗಿಲಿನ ಎದುರು ಸುಣ್ಣಾರಿಕಟ್ಟೆ[೯]ಇದೆ. ಬಸದಿ ಕೇರಿಯ ಮಧ್ಯದಲ್ಲಿ ದೊಟ್ಟೆಕಾಲುಚಿಕ್ಕು[೧೦] ದೈವಸ್ಥಾನವಿದೆ. ಈಕೆ ಜೈನಚಿಕ್ಕು ಎಂಬುದು ಪಾಡ್ದನಗಳಿಂದ ತಿಳಿಯುತ್ತದೆ.(ಹೆಚ್ಚಿನ ವಿವರಗಳಿಗೆ ಜನಪದ ಸಾಹಿತ್ಯ ಸಂಸ್ಕೃತಿ ಅಧ್ಯಾಯದ ದೊಟ್ಟೆಕಾಲು ಚಿಕ್ಕು ಪಾಡ್ದನ)

ಬಸದಿಕೇರಿಯಲ್ಲಿ ಬಸದಿಯ ಕುರುಹು ಕಾಣಿಸುವುದಿಲ್ಲ. ಬಸದಿಬಾಗಿಲು ಇದ್ದಿತ್ತು ಎಂದು ಹೇಳುವ ಸ್ಥಳದಲ್ಲಿ ವಿಶಾಲವಾದ ಖಾಲಿ ಜಾಗವಿದೆ. ಅಲ್ಲಿ ಜೈನ ಜಟ್ಟಿಗ, ಬಸದಿ ಬಾಗಿಲು ಬಬ್ಬರ್ಯನ ಆರಾಧನ ಸ್ಥಳವಿದೆ. ಈ ಕೇರಿಯ ಇಕ್ಕೆಲಗಳ ಮಾಳಿಗೆ ಮನೆಗಳು ಜೈನರ ಮನೆಯ ವಿನ್ಯಾಸವನ್ನೆ ಹೋಲುತ್ತದೆ. ಪ್ರಾಯಶ: ೮-೯ನೇ ಶತಮಾನದಲ್ಲಿ ಹಟ್ಟಿಯಂಗಡಿ ಜೈನಧರ್ಮದ ಕೇಂದ್ರವಾಗಿದ್ದಿರಬೇಕು. ಆದರೆ "ಕ್ರಿಶ ೧೩೮೮ ರ ಸಮಯದಲ್ಲಿ ವಾಣಿಜ್ಯ ಮತ್ತು ರಾಜಕೀಯ ಕೇಂದ್ರವಾದ ಹಟ್ಟಿಯಂಗಡಿ ಸಾಮಾಜಿಕ ವೈಷ್ಯಮಕ್ಕೆ ಒಳಗಾಗಿ ಸುಟ್ಟು ಹೋಗಿರಬೇಕು. ಅನಂತರದಲ್ಲಿ ಬಸರೂರಿಗೆ ಜೈನ ವ್ಯಾಪಾರಿಗಳು

ಬಂದಿರಬಹುದು" (ನರಸಿಂಹಮೂರ್ತಿ ಪಿ.ಎನ್;೧೯೭೭ ;ಪುಟ:೨೦).

ಬಸರೂರಿನ ರಾವುತ ಕೇರಿಯಿಂದಾಗಿ ಬಸರೂರಿಗೆ ಐತಿಹಾಸಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಮಹತ್ವಬಂದಿದೆ. ಬಸರೂರು ತುಳುನಾಡಿನ ಪ್ರಮುಖ ರೇವು ಪಟ್ಟಣವಾಗಿದ್ದಿತ್ತು. ಕುಂದಾಪುರ ತಾಲೂಕಿನ ಪ್ರದೇಶಗಳು ವಿಜಯನಗರದ ಆಳ್ವಿಕೆಗೆ ಒಳಗಾಗಿದ್ದರೂ ಕೆಲವು ಪ್ರದೇಶಗಳು ಸ್ಥಳಿಯ ಅರಸು ಮನೆತನದ ಆಡಳಿತಕ್ಕೆ ಒಳಪಟ್ಟಿತ್ತು. ತ್ರಾಸಿಯಿಂದ ಉತ್ತರಕ್ಕೆ ಗೇರುಸೊಪ್ಪೆಯ ಸಾಳ್ವ ವಂಶದ ಚೆನ್ನಭೈರಾದೇವಿಯ ಆಳ್ವಿಕೆಗೆ ಸೇರಿತ್ತು, ಹೊಸಂಗಡಿ, ಬಗ್ಗವಾಡಿ, ಕೊಲ್ಲೂರು ಪ್ರದೇಶವನ್ನು ಹೊನ್ನೆಕಂಬಳಿ ಅರಸು ಮನೆತನದವರು, ಸುರಾಲಿನ ತೊಳಾಹರರು ನಲವತ್ತನಾಡು ಹಳಗೇರಿ ಪ್ರದೇಶವನ್ನು ಆಳಿಕೊಂಡಿದ್ದರು. ಪೋರ್ಚುಗೀಸರು ಬಸರೂರಿನ ರೇವಿನಲ್ಲಿ ತಳವೂರಿ ದರೋಡೆ ವ್ಯಾಪಾರದಲ್ಲಿ ನಿರತರಾಗಿದ್ದರು. ದೇಶಿಯ ಮತ್ತು ವಿದೇಶಿ ಶಕ್ತಿಗಳ ನಡುವೆ ಬಸರೂರಿನ ವ್ಯಾಪಾರ ಸ್ವಾಮ್ಯವನ್ನುಗಳಿಸಲು ಪೈಪೋಟಿ ನಡೆಯುತ್ತಿದ್ದಿತ್ತು. ಬಸರೂರು ಮತ್ತು ಕುಂದಾಪುರ ತಾಲೂಕಿನ ಇತರ ಪಟ್ಟಣಗಳು ಸಂಪತ್ಭರಿತವಾಗಿದ್ದವು. ಪರಕೀಯರ ಆಕ್ರಮಣವನ್ನು ತಡೆಯಲು ಮತ್ತು ಕೋಟೆಗಳ ರಕ್ಷಣೆಗೆ ಸೈನಿಕರನ್ನು ನಿಯೋಜಿಸಿದ್ದರು(ವಸಂತಮಾಧವ ಕೆ.ಜಿ;೧೯೭೭;ಪುಟ:೧೫ ).ವಿಜಯನಗರದ ದೊರೆಗಳು ಅರಬ್ ದೇಶದಿಂದ ಕುದುರೆಗಳನ್ನು ಬಸರೂರಿನ ಮೂಲಕ ಆಮದು ಮಾಡಿಕೊಳ್ಳುತ್ತಿದ್ದರು. ಬಸರೂರಿಗೆ ಬಂದಿಳಿದ ಕುದುರೆಗಳನ್ನು ಸಾಗಿಸಲು ಕುದುರೆ ಸವಾರರು ಬೇಕಾಗಿರುತ್ತಿದ್ದರು. ಆ ಕಾರಣದಿಂದ ಬಸರೂರಿನಲ್ಲಿ ರಾವುತಕೇರಿ ಇದ್ದಿತ್ತು. ಅನಂತರದ ಕಾಲದಲ್ಲಿ ದೇವದಾಸಿಯರು ಈ ಕೇರಿಯಲ್ಲಿ ಇದ್ದುದರಿಂದ ಈ ಕೇರಿಗೆ ಸಾಂಸ್ಕೃತಿಕ, ಧಾರ್ಮಿಕ ಮಹತ್ವ ಬಂದಿತ್ತು.

ಪಡುವಕೇರಿಯ ಶ್ರೀಮಹಾಲಿಂಗೇಶ್ವರ ದೇವಾಲಯದ ಎದುರಿನಿಂದ ಒಕುಳಿ ಮಂಟಪ ದಾಟಿ, ಹಲವರಿಕಟ್ಟೆ ದಾಟಿ ಬಲಕ್ಕೆ ವೆಂಕಟರಮಣ ದೇವಾಲಯವರೆಗಿನ ಬೀದಿ ರಾವುತಕೇರಿ. ಈ ಕೇರಿಯ ಆರಂಭದಲ್ಲಿ ಶ್ರೀ ಶಾಂತೇರಿ ಕಾಮಾಕ್ಷಿ ದೇವಾಲಯವಿದೆ. ಅದರ ಎದುರುಗಡೆ ತುಳುವೇಶ್ವರ[೧೧] ದೇವಾಲಯವಿದೆ. ಎಜಯನಗರದ ಇಮ್ಮಡಿ ಹರಿಹರನು ಚಕ್ರವರ್ತಿಯಾಗಿದ್ದಾಗ ಬಸರೂರಿನ ಪಡುಕೇರಿಯಲ್ಲಿ ತುಳುವಕ್ಕ ಹೆಗ್ಗಡತಿಯು ತುಳುವೇಶ್ವರ ದೇವಾಲಯದ ನಂದಾದೀಪಕ್ಕೆ ಉಂಬಳಿಬಿಟ್ಟ ಉಲ್ಲೇಖವಿದೆ. ಈ ದೇವಾಲಯ ವಿಜಯನಗರ ತುಳುವ ಸಂತತಿಯವರಿಂದ ಸ್ಥಾಪನೆಯಾಗಿರಬಹುದು ಎಂದು ಊಹಿಸಬಹುದು. ಆದರೆ ಈ ಅಪೂರ್ವ ಶಿಲ್ಪವು ಬಸರೂರಿನ ಜನರ ಅವಕೃಪೆಗೆ ಒಳಗಾಗಿದೆ. ಶೈವ ಮತ್ತು ವೈಷ್ಣವ ಸಂಘರ್ಷವು ಇಲ್ಲಿ ಎದ್ದು ಕಾಣುತ್ತದೆ. ತುಳುವೇಶ್ವರ ವೈಷ್ಣವ ಪ್ರಭಾವಕ್ಕೆ ಒಳಗಾಗಿ ತುಳುಸೇಶ್ವರನಾಗಿದ್ದಾನೆ. ರಾಹುತಕೇರಿಯ ಮಧ್ಯದಲ್ಲಿ ಶ್ರೀ ದುರ್ಗಾ ದುರ್ಗಾಪರಮೇಶ್ವರಿ ದೇವಸ್ಥಾನವಿದೆ. ಈ ದೇವಸ್ಥಾನವು ಅವೈದಿಕ ಸಂಸ್ಕೃತಿಯ

ಪ್ರತೀಕವೂ, ನಾಥಪಂಥದ ಶ್ರದ್ಧಾ ಕೇಂದ್ರವು ಆಗಿದೆ. ಇಲ್ಲಿ ಹನ್ನೆರಡು ಮತ್ತು ಅರವತ್ತು ವರ್ಷಗಳಿಗೊಮ್ಮೆ ನಡೆಯುವ ಮಾರಿಹಬ್ಬ(ಹೆಚ್ಚಿನ ವಿವರಗಳಿಗೆ ದೈವಸ್ಥಾನದ ವಾರ್ಷಿಕಾವರ್ತನ ಆಚರಣೆ, ಮಾರಿಹಬ್ಬ)ವಿಶೇಷ ಧಾರ್ಮಿಕ ಆಚರಣೆಯಾಗಿದೆ. ರಾವುತಕೇರಿಗೆ ಶ್ರೀ ತಿರುಮಲ ವೆಂಕಟರಮಣ ದೇವಾಲಯ ಮತ್ತು ಶ್ರೀ ಕೋಟೆ ಆಂಜನೇಯ ಸ್ವಾಮಿ ದೇವಾಲಯಗಳೇ ಗಡಿಯಾಗಿದೆ. ರಾಹುತ ಕೇರಿಯ ದಾರಿಯಲ್ಲಿಯೆ ಗಂಗೆಗೌರಿಗಂಟಿಕಲ್ಲು[೧] ಇದೆ. ಶ್ರೀವೆಂಕಟರಮಣ ದೇವಾಲಯದ ಎದುರಿಗಿರುವ ಕಂಚಿನ ನೀಲಾಂಜನಕಂಬ ಬಸರೂರಿನ ಕಂಚುಗಾರರ ಕಲಾವಂತಿಕೆಗೆ ಹಿಡಿದ ಕೈಗನ್ನಡಿಯಾಗಿದೆ. ರಾಹುತಕೇರಿಯ ಪಶ್ಚಿಮದಲ್ಲಿ ದೇವರಕೆರೆ ಬಸರೂರಿನ ಧಾರ್ಮಿಕ ಚಟುವಟಿಕೆಗಳಲ್ಲಿ ಈ ಕೆರೆ ಪ್ರಧಾನ ಪಾತ್ರವಹಿಸುತ್ತದೆ. ಹಿಂದೆ ಕೆರೆಯ ಮಧ್ಯದಲ್ಲಿ ದಶಭುಜಗಣಪತಿಯ ಮಂಟಪ ಇದ್ದಿತ್ತು. ದೇವರಕೆರೆ ದೇವರ ಲೀಲಾ ವಿನೋದಗಳಿಗೆ ಮೀಸಲಿಟ್ಟ ಕೆರೆಯಾಗಿದೆ. ಇದನ್ನು ಚಂದ್ರಪುಷ್ಕರಣಿ ಎಂದು ಕರೆಯುತ್ತಾರೆ. ಬಸರೂರಿನ ಪಡುವಕೇರಿಯ ಮಹಾಲಿಂಗೇಶ್ವರನಿಗೆ ಕಾರ್ತಿಕಮಾಸದ ದೀಪೋತ್ಸವದ ದಿನ ಮತ್ತು ರಥೋತ್ಸವದ ಮರುದಿನ ಕೆರೆಆಯನ[೨] ಮಾಡುತ್ತಾರೆ. ದೇವರ ಕೆರೆಯ ಸುತ್ತಲೂ ಮಾಳಿಗೆಯಿಂದ ಕೂಡಿದ ಅಗ್ರಹಾರ ಬ್ರಾಹ್ಮಣರ ಮನೆಗಳಿವೆ. ಈ ಕೇರಿಗೆ ಕೆಳಅಗ್ರಹಾರವೆಂದು ಹೆಸರು. ಕೆರೆಯ ಪಶ್ಚಿಮದಂಡೆಯಲ್ಲಿ ಜೀರ್ಣಾವಸ್ಥೆಯಲ್ಲಿರುವ ಶ್ರೀಉಮಾಮಹೇಶ್ವರ ದೇವಾಲಯವಿದೆ. ಬಸರೂರಿನ ವಾಸ್ತುಶಿಲ್ಪ ಅಧ್ಯಯನಕ್ಕೆ ಈ ದೇವಾಲಯ ಮುಖ್ಯ ಆಕರಳಾಗುತ್ತದೆ. ಈ ಕೆರೆಯ ಪಶ್ಚಿಮ ದಂಡೆಯಿಂದ ಉತ್ತಾರಾಭಿಮುಖದಲ್ಲಿ ಶ್ರೀಮಹಾಲಿಂಗೇಶ್ವರ ದೇವಾಲಯದ ತೆಂಕುಬಾಗಿಲು ಸಿಗುತ್ತದೆ.

ರಾಹುತಕೇರಿಯಿಂದ ಪೂರ್ವಕ್ಕೆ ಗುಡಿಗಾರರ ಕೇರಿಯಿದೆ. ಈ ಕೇರಿಯಲ್ಲಿ ಗುಡಿಗಾರರ ಮನೆಗಳಿಲ್ಲ, ಗುಡಿಗಾರರಕಟ್ಟೆ ಇದೆ. ಈ ಕಟ್ಟೆಯಲ್ಲಿ ದೀಪೋತ್ಸವ, ರಥೋತ್ಸವದ ಸಂದರ್ಭದಲ್ಲಿ ಕಟ್ಟೆವಸಂತ ನಡೆಯುತ್ತದೆ. ಶ್ರೀ ವೆಂಕಟರಮಣ ದೇವಾಲಯದಿಂದ ದಕ್ಷಿಣಕ್ಕೆ ಮೇಲ್‌ಅಗ್ರಹಾರಇದೆ. ಈ ಅಗ್ರಹಾರದಲ್ಲಿ ಶ್ರೀಪಟ್ಟಾಭಿರಾಮಚಂದ್ರ ಮತ್ತು ಚನ್ನಕೇಶವ ದೇವರ ಗುಡಿಗಳಿವೆ. ಕರಣಿಕರಮನೆ ಕಟ್ಟೆ ಇದೆ. ಅಗ್ರಹಾರದಿಂದ ಪೂರ್ವಕ್ಕೆ ಸಾಲಿಗರಕೇರಿ. ಬಸರೂರಿನ ಸೆಟ್ಟಿಕಾರರು ರಾಜಕೀಯ, ಆರ್ಥಿಕ, ಸಾಮಾಜಿಕವಾಗಿ ಪ್ರಾಮುಖ್ಯತೆಯನ್ನು ಪಡೆದುಕೊಂಡವರು. ಬಸರೂರಿನ ನಗರಾಡಳಿತದಲ್ಲಿ ಸೆಟ್ಟಿಗಾರರು ವಹಿಸಿದ ಪಾತ್ರ ಶಾಸನ ಉಲ್ಲೇಖಿತವಾಗಿದೆ. ಮೇಲ್‌ಅಗ್ರಹಾರದಿಂದ ದಕ್ಷಿಣಕ್ಕೆ ಗುಪ್ಪೆಹಾಡಿ ರಸ್ತೆ. ಗುಪ್ಪೆ ಅಥವಾ ಕುಪ್ಪೆ ಎಂದರೆ ಸಮಾಧಿ ಎಂದರ್ಥ. ಈ ರಸ್ತೆಯ ಎಡಭಾಗದಲ್ಲಿ ಗುಪ್ಪೆಹಾಡಿ ಇದೆ. ಇಲ್ಲಿ ಕೋಟೆಯ ಅವಶೇಷಗಳಿದ್ದು ಗುಪ್ಪೆಸದಾನಂದ ದೇವಾಲಯ ಎಂದು ಹೇಳಲಾಗುವ ದೇವಾಲಯದ ಭಗ್ನವಾಶೇಷವಿದೆ. ಅಲ್ಲಲ್ಲಿ ಕಲ್ಲಿನ ಗುಪ್ಪೆ ಇದೆ. ಅದು ಯೋಗಿಗಳ ಸಮಾಧಿಯಾಗಿರಬೇಕೆಂದು ಇತಿಹಾಸಕಾರರು ಭಾವಿಸುತ್ತಾರೆ.ಇಲ್ಲಿ

ಕಂಡು ಬರುವ ಗುಹೆಗಳು ನಾಥಯೋಗಿಗಳ ತಾಂತ್ರಿಕಾಚರಣೆಯ ಗುಪ್ತ ಸ್ಥಳವಾಗಿದೆ.

ಪೋರ್ಚುಗೀಸರ ದಾಖಲೆಗಳಲ್ಲಿ ಬಸರೂರನ್ನು ಮೇಲುಬರ್ಸೆಲೋರ್[೧೪]ಮತ್ತು ಕೆಳಬರ್ಸೆಲೋರ್[೧೫] ಎಂದು ವಿಭಾಗಿಸಲಾಗಿದೆ. ಮೇಲ್‌ಬಸರೂರಿನಲ್ಲಿ ಕೋಟೆಯ ಒಳಭಾಗದ ಊರು ಮತ್ತು ಕೋಟೆಯ ಹೊರಭಾಗದ ಊರು ಎಂಬ ಎರಡು ವಿಭಾಗಗಳಿದ್ದವು. 'ಕೋಟೆಯ ಹೊರಗಡೆ ಮದುವೆಯಾದ ಪೋರ್ಚುಗಲ್ಲರು ಮನೆಯನ್ನು ಮಾಡಿಕೊಂಡಿದ್ದಾರೆ' ಎಂಬ ವಿದೇಶಿ ಪ್ರವಾಸಿಗರ[೧೬] ದಾಖಲೆಯಿಂದ ಬಸರೂರು ಅವಳಿ ನಗರವಾಗಿತ್ತು ಎನ್ನುವುದು ಸ್ಪಷ್ಟವಾಗುತ್ತದೆ. ಬಸರೂರಿನ ಅವಳಿ ನಗರದದಲ್ಲಿ ಸಮಪ್ರಮಾಣದಲ್ಲಿ ದೇವಾಲಯ ಮತ್ತು ದೇವಸ್ಥಾನಗಳನ್ನು ನಿರ್ಮಿಸಿದ್ದರು. ಕೋಟೆಯ ಪೂರ್ವಕ್ಕಿರುವ ಮೂಡುಕೇರಿಯಲ್ಲಿ ಆದಿನಾಥೇಶ್ವರ ಎಂಬ ಶಿವಾಲಯವಿದ್ದರೆ, ಪಡುವಕೇರಿಯಲ್ಲಿ ಕೋಟೆಯ ಒಳಗಡೆ ಶ್ರೀಮಹಾಲಿಂಗೇಶ್ವರ ಶಿವಾಲಯವಿದೆ. ಮೂಡುಕೇರಿಯಲ್ಲೊಂದು ತಿರುಮಲವೆಂಕಟರಮಣ, ಪಡುವಕೇರಿಯಲ್ಲೊಂದು ತಿರುಮಲವೆಂಕಟರಮಣ, ಮೂಡುಕೇರಿಯಲ್ಲೊಂದು ರಾಮಚಂದ್ರ, ಪಡುಕೇರಿಯಲ್ಲೊಂದು ರಾಮಚಂದ್ರ, ಮೂಡುಕೇರಿಯಲ್ಲೊಂದು ಗರಡಿ, ಪಡುವಕೇರಿಯಲ್ಲೊಂದು ಗರಡಿ, ಮೂಡುಕೇರಿಯಲ್ಲೊಂದು ಅಗ್ರಹಾರ, ಪಡುವಕೇರಿಯಲ್ಲೊಂದು ಅಗ್ರಹಾರ. ಆದರೆ ಕೋಟೆಯ ಹೊರ ಮತ್ತು ಒಳಭಾಗದವರಿಗೂ ಅನುಕೂಲವಾಗುವಂತೆ ಮಧ್ಯದಲ್ಲಿ ಗ್ರಾಮದೇವತೆ ಶ್ರೀದೇವಿಅಮ್ಮನವರ ಗುಡಿಯಿದೆ.

ಕೋಟೆಯ ಹೊರಭಾಗದಲ್ಲಿರುವ ಕದಿರುಕಟ್ಟೆ[೧೭] ಯಿಂದ ಉತ್ತರಕ್ಕೆ ಮೂಡುಕೇರಿಯಿದೆ. ತಿರುಮಲವೆಂಕಟರಮಣ ದೇವಾಲಯ, ಅದಿನಾಥೇಶ್ವರ ದೇವಾಲಯ, ಶ್ರೀರಾಮಚಂದ್ರ ದೇವಾಲಯ ಕ್ರಮವಾಗಿ ಸಿಗುತ್ತದೆ.

ಮೂಡುಕೇರಿಯ ಮಧ್ಯದಲ್ಲಿ ನಾಥಪಂಥದವರ ಕಾಲಭೈರವನ ದೇವಸ್ಥಾನವಿದೆ. ಬೌದ್ಧಸೂಪ್ತ ಮಾದರಿಯ ಈ ದೇವಸ್ಥಾನದಲ್ಲಿ ಭೈರವನ ಶಿಲ್ಪವಿದೆ. ಈ ಗುಡಿಯಿರುವ ಮನೆಗೆ ಮಠದಮನೆ[೧೮]ಯೆಂದು ಹೆಸರು. ಮೂಡುಕೇರಿಯಲ್ಲಿ ಅಗಸ್ತ್ಯತೀರ್ಥವೆಂಬ ಕೆರೆಯಿದೆ. ಅಲ್ಲಿಯೇ ತೊಪ್ಪಲುಕಟ್ಟೆ[೧೯]ಯಿದೆ. ಮತ್ತೊಂದು ಅವಭೃತಸ್ನಾನದಕಟ್ಟೆ[೨೦]ಇದೆ. ತೊಪ್ಪಲುಕಟ್ಟೆಯಲ್ಲಿ ನವರಾತ್ರಿಯಲ್ಲಿ ಬನ್ನಿಮರದ ಪೂಜೆ[೨೧]ನಡೆಯುತ್ತದೆ. ಶ್ರೀಮಹಾಲಿಂಗೇಶ್ವರನು ಓಕುಳಿಯ ನಂತರ ಅವಭೃತ ಸ್ನಾನಕ್ಕೆ ಅವಭೃತ ಕಟ್ಟೆಗೆ ಬರುತ್ತಾನೆ. ಮೂಡುಕೇರಿಯಲ್ಲಿ ಮಠದ ಕೆರೆಯಿದೆ. ಕೋಟಿಚೆನ್ನಯ್ಯರ ಗರಡಿಯಲ್ಲಿ ಮೂಡುಕೇರಿ ಕೊನೆಗೊಳ್ಳುತ್ತದೆ.

ಪಡುಕೇರಿಯ ಶ್ರೀಮಹಾಲಿಂಗೇಶ್ವರ ದೇವಾಲಯದ ತೆಂಕುಬಾಗಿಲಿನಿಂದ ದಕ್ಷಿಣಕ್ಕೆ ಇರುವ ಕೇರಿ ಅಗ್ರಹಾರಕೇರಿ. ಅಲ್ಲಿರುವ ಕೆರೆಯೆ ಹಲರಕೆರೆ[೨೨]. ಶ್ರೀಮಹಾಲಿಂಗೇಶ್ವರ

ದೇವರ ರಥೋತ್ಸವದ ಮರುದಿನ ನಡೆಯುವ ಓಕುಳಿ ಆಟಕ್ಕೆ ಈ ಕೆರೆಯ ನೀರನ್ನು ತುಂಬಿಸುತ್ತಿದ್ದರು. ಹಲವರಿಸೆಟ್ಟರು ಓಕುಳಿ ಹೊಂಡಕ್ಕೆ ಈ ಕೆರೆಯ ನೀರನ್ನು ಬಳಸುತ್ತಿದ್ದುದರಿಂದ ಹಲರಕೆರೆ ಎಂಬ ಹೆಸರು ಬಂದಿತ್ತು. ಈ ಕೆರೆಯ ಎದುರುಗಡೆ ಮುಸ್ಲಿಂವಾಸ್ತು ಲಕ್ಷಣವನ್ನು ಹೊಂದಿರುವ ಇಂಡೋ-ಇಸ್ಲಾಮಿಕ್ ಶೈಲಿಯಲ್ಲಿ ನಿರ್ಮಾಣಗೊಂಡಿರುವ ವೀರಭದ್ರನ ಗುಡಿ ಇದೆ. ಸಾಂಸ್ಕೃತಿಕ ಮತ್ತು ಸಾಮಾಜಿಕ ಐಕ್ಯತೆಯ ಸಂಕೇತ ಇದಾಗಿದೆ. ಈ ಕೇರಿಯಲ್ಲಿ ಶ್ರೀ ರಾಮಚಂದ್ರ ದೇವಾಲಯ, ಶ್ರೀಲಕ್ಷ್ಮೀನಾರಾಯಣ ಮತ್ತು ಲಕ್ಷ್ಮೀದಾಮೋದರ ದೇವಾಲಯವಿದೆ. ಪಡುವಕೇರಿಯ ಶ್ರೀಮಹಾಲಿಂಗೇಶ್ವರ ದೇವಾಲಯದ ಹೊರಪೌಳಿಯ ಸುತ್ತಲಿನ ರಸ್ತೆಯೆ ರಥಬೀದಿ. ದೇವಾಲಯದ ಸುತ್ತಲೂ ರಥವನ್ನು ಎಳೆಯುವ ಕ್ರಮ ಬಸರೂರಿನಲ್ಲಿ ರೂಢಿಯಲ್ಲಿದೆ. ರಥಬೀದಿಯ ಪಶ್ಚಿಮಕ್ಕೆ ಹಂಜಮಾನರು[೧೩] ಕಟ್ಟಿದ ಪ್ರಾಚೀನ ಮಸೀದಿಯಿದೆ. ಅದರ ಸಮೀಪದಲ್ಲಿ ಪಳ್ಳಿಕೆರೆ, ಪಳ್ಳಿಕೆರೆಯ ಪಶ್ಚಿಮಕ್ಕೆ ಆನಗಳ್ಳಿ ಇದೆ.

ಬಸರೂರಿನ ದಕ್ಷಿಣ ದಿಕ್ಕಿನಲ್ಲಿ ರೋಮನ್ ಕೆಥೋಲಿಕ ಚರ್ಚಿನ ಸಮೀಪ ಮಾದನಕೆರೆ ಇದೆ. ಇದನ್ನು ಚಿಲುಮೆಕೆರೆ ಎನ್ನುವರು. ಈ ಚಿಲುಮೆಕೆರೆ ವೀರಶೈವರಿಗೆ ಸೇರಿದ್ದಾಗಿದೆ. ಮುಸ್ಲಿಂಮರು ಅಲಾದಿಹಬ್ಬದ[೧೪] ದಿನ ಇದೇ ಕೆರೆಯಲ್ಲಿ ಸ್ನಾನಮಾಡುತ್ತಾರೆ ಮತ್ತು ಬಸರೂರಿನ ಕೆಲವು ಜನಸಮುದಾಯ ಇಲ್ಲಿ ಅಸ್ತಿ[೧೫] ಬಿಡುವ ಅಪರಕರ್ಮ ಮಾಡುತ್ತಾರೆ.

ಈ ಮೇಲಿನ ಅಧ್ಯಾಯದಲ್ಲಿ ಬಸರೂರಿನ ಭೌಗೋಳಿಕ ವಿವರಗಳನ್ನು ದಾಖಲಿಸಲು ಪ್ರಯತ್ನಿಸಲಾಗಿದೆ. ಬಸರೂರು ವಾರಾಹಿ ನದಿಯ ದಡದಲ್ಲಿದ್ದ ಪುಟ್ಟ ಮಾಗಣೆ. ವಾರಾಹಿ, ಖೇಟಾ, ಕುಜ್ಜಾ, ಸೌಪರ್ಣಿಕ, ಚಕ್ರಾ ನದಿಗಳು ಸೇರುವ ಹಿನ್ನೀರಿನ ಪ್ರದೇಶವನ್ನು ಒಳಗೊಂಡ ಬಸರೂರು ಸಂಪತ್ಭರಿತ ಭೂಸಂಪತ್ತಿನೊಂದಿಗೆ ಜಲಸಂಪತ್ತನ್ನು ಹೊಂದಿದೆ. ಬಸರೂರು ನದಿ ಮುಖಜ ಭೂ ಪ್ರದೇಶದೊಂದಿಗೆ ಸಮತಟ್ಟಾದ ಕೃಷಿಗ್ರಾಮಗಳನ್ನು ಹೊಂದಿದೆ. ಈ ಎಲ್ಲಾ ಬಾಹ್ಯಭೌಗೋಳಿಕ ಅಂಶಗಳು ಬಸರೂರಿನ ಸಂಸ್ಕೃತಿಯನ್ನು ಪ್ರಭಾವಿಸಿದೆ. ಅಲ್ಲದೆ ಅಂತರ್‌ಪ್ರಾಕೃತಿಕ ವೈವಿಧ್ಯ ಬಸರೂರಿಗೆ ಮಾತ್ರ ಇದೆ. ಇದು ಮಾನವ ನಿರ್ಮಿತವಾಗಿದ್ದರೂ ಕೂಡಾ ಇವುಗಳ ಹಿಂದೆ ಐತಿಹಾಸಿಕ ಘಟನೆಗಳಿವೆ. ಇವುಗಳ ನಿರ್ಮಾಣದಿಂದಾಗಿ ಅನೇಕ ಧಾರ್ಮಿಕ ಆಚರಣೆಗಳು ಹುಟ್ಟಿಕೊಳ್ಳಲು ಸಾಧ್ಯವಾಗಿದೆ. ಇಲ್ಲಿನ ಕೇರಿಗಳಿಗೆ ಒಂದೊಂದು ಸಾಂಸ್ಕೃತಿಕ ಮತ್ತು ಧಾರ್ಮಿಕ ಮಹತ್ತಿಕೆ ಇದೆ. ಒಂದೊಂದು ಕಟ್ಟೆಯು ಬಸರೂರಿನ ಸಂಸ್ಕೃತಿಯ ಮೇಲೆ ಪ್ರಭಾವ ಬೀರಿರುವ ಸಾಧ್ಯತೆಗಳಿವೆ. ಬಸರೂರಿನ ಒಂದೊಂದು ದಾರಿಯೂ ಬಸರೂರಿನ ಸಾಂಸ್ಕೃತಿಕ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ. ಈ ಎಲ್ಲಾ ಕಾರಣಗಳು ಬಸರೂರಿನ ಅಂತರ ಭೌಗೋಳಿಕ ಅಂಶಗಳ

ಮೇಲೆ ಗಮನ ಕೇಂದ್ರೀಕರಿಸುವಂತೆ ಮಾಡಿದೆ.

## ೨.೩ ಸ್ಥಳನಾಮ ವಿವೇಚನೆ

"ಪ್ರತಿಯೊಂದು ಸ್ಥಳನಾಮವು ಏನಾದರೊಂದು ಅಂಶವನ್ನು ಒಳಗೊಂಡಿರುತ್ತದೆ. ಭಾಷೆ ಹೇಗೆ ಮಾನವನ ಸ್ವಪ್ರಯತ್ನದ ಫಲವೊ ಹಾಗೆಯೆ ಆ ಭಾಷೆಯೊಳಗಿನ ಸ್ಥಳನಾಮ ಕೂಡಾ ಆತ ಬುದ್ಧಿಪೂರ್ವಕವಾಗಿ ನಿರ್ಮಿಸಿಕೊಂಡಿದ್ದು. ಭಾಷೆಯಂತೆ ಇಲ್ಲೂ ಒಂದು ಬಗೆಯ ವ್ಯವಸ್ಥೆಯಿರುತ್ತದೆ. ಆ ವ್ಯವಸ್ಥೆಗೆ ಒಂದು ಅರ್ಥವಿರುತ್ತದೆ. ಆ ಅರ್ಥವನ್ನು ಹುಡುಕ ಹೊರಟರೆ ಈ ನಾಡಿನ ಸಂಸ್ಕೃತಿ ಅರಿವಾಗುತ್ತದೆ"(ಸುಬ್ಬಣ್ಣ ರೈ ಎ;೧೯೯೪;ಪುಟ:೪೨).

ಯಾವುದೇ ಪ್ರದೇಶದ ಸ್ಥಳನಾಮಗಳಲ್ಲಿ ತುಂಬಾ ಅರ್ಥ ಅಡಕವಾಗಿರುತ್ತದೆ. ಸ್ಥಳನಾಮಗಳು ಸಾಮಾನ್ಯವಾಗಿ ಅನ್ವರ್ಥನಾಮಗಳಾಗಿರುತ್ತವೆ. ಕಾರಣವಿಲ್ಲದೆ ಯಾವುದೇ ಹೆಸರುಗಳು ಬರಲಾರವು. "ಹೆಸರಿಡುವುದಕ್ಕೆ ಕಾರಣಗಳು ಅನೇಕವಿರಬಹುದು. ಹೆಚ್ಚಾಗಿ ಆಯಾ ಊರಿನ ಸಾಂಸ್ಕೃತಿಕ ಹಿನ್ನೆಲೆಯನ್ನು ಈ ಊರ ಹೆಸರುಗಳು ಸೂಚಿಸುತ್ತದೆ"(ಗುರುರಾಜ ಭಟ್ ಪಾದೂರು;೨೦೦೯;ಪುಟ:೨೨).

ಒಂದು ಪ್ರದೇಶದ ಸಾಂಸ್ಕೃತಿಕ ಅಧ್ಯಯನ ಮಾಡುವಾಗ ಸ್ಥಳನಾಮಗಳು ಆ ಪ್ರದೇಶದ ಸಾಂಸ್ಕೃತಿಕ ಒಳನೋಟದ ಪ್ರಾಥಮಿಕ ಆಕರಗಳಾಗಿ ಕಾರ್ಯನಿರ್ವಹಿಸುತ್ತವೆ. ಸ್ಥಳನಾಮಗಳು ನೀಡುವ ಮಾಹಿತಿಗಳು ಮೌಖಿಕ ಮತ್ತು ಲಿಖಿತ ಮಾಹಿತಿಗಳಿಗಿಂತ ಹೆಚ್ಚು ವಸ್ತುನಿಷ್ಠವಾಗಿರುತ್ತದೆ. ಕೆಲವೊಮ್ಮೆ ಇಡೀ ಪ್ರದೇಶದ ಸಾಂಸ್ಕೃತಿಕ ಹೂರಣವನ್ನು ಸ್ಥಳನಾಮವು ತನ್ನ ಒಳಮೈಯಲ್ಲಿ ಅಡಗಿಸಿಕೊಂಡಿರುವುದುಂಟು. ಕೆಲವೊಮ್ಮೆ ಇಂಥ ಸ್ಥಳನಾಮಗಳು ಊರು ಹುಟ್ಟಿದ ರೀತಿ, ರಾಜವಂಶಗಳ ಹೋರಾಟ, ದೈವ,ಧರ್ಮ, ಭೌಗೋಳಿಕಪರಿಸರ, ಪರಾಕ್ರಮ, ಆತ್ಮನಿವೇದನೆ ಮುಂತಾದವುಗಳನ್ನು ಶಾಸನಗಳು ತಿಳಿಸುವಷ್ಟೆ ನಿಖರವಾಗಿ ತಿಳಿಸುತ್ತವೆ "ಚರಿತ್ರೆ ಸುಮ್ಮನಾಗುವಲ್ಲಿ ಸ್ಥಳನಾಮ ಉಸುರುತ್ತವೆ" (ಮಯ್ಯ ಪಾ.ನ;೧೯೯೫;ಪುಟ:೧೮)ಎನ್ನುವುದು ಈ ದೃಷ್ಟಿಯಿಂದಲೇ. ಬಸರೂರಿನ ಪಂಚ ಗ್ರಾಮಗಳ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಬೇಕಾದರೆ ಬಸರೂರಿನ ಸ್ಥಳನಾಮದ ನಿಷ್ಪತ್ತಿಯನ್ನು ನಿರ್ಷ್ಕಷಿಸಬೇಕಾಗುತ್ತದೆ. ಬಸರೂರು ಎಂಬ ಹೆಸರಿನ ಹಿಂದಿರುವ ರಹಸ್ಯವನ್ನು ತಿಳಿದುಕೊಳ್ಳುದರಿಂದ ಅತ್ಯಂತ ಕುತೂಹಲಕಾರಿ, ವೈವಿಧ್ಯಮಯ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ ಅಂಶಗಳು ಅನಾವರಣಗೊಳ್ಳುತ್ತದೆ. ಬಸರೂರು ಎಂಬ ಪದ ಉಚ್ಚರಿಸಲು ಸಂಪ್ರದಾಯವಾದಿಗಳಿಗೆ ಸಹ್ಯ ಅನಿಸದಿದ್ದರೂ ಅದರೊಳಗಿನ ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ ಮೌಲ್ಯಗಳು ಆಶ್ಚರ್ಯವನ್ನು ಮನಸ್ಸಿಗೆ ಹೃದ್ಯವನ್ನುಂಟು ಮಾಡುತ್ತದೆ. ಬಸರೂರು ಎಂಬ ಪದವೇ ಬಸರೂರಿನ ಸಂಸ್ಕೃತಿಯ ಪ್ರತಿಬಿಂಬವಾಗಿ ನಿಲ್ಲುವುದು.

(ಅ) ಗ್ರೀಕ ಪ್ರವಾಸಿ ಟಾಲೆಮಿಯ ಬರಾಸೆ

ಬಸರೂರಿಗೆ ೨೦೦೦ ವರ್ಷಗಳ ಇತಿಹಾಸವಿದೆ. ಬಸರೂರು ಪಂಚ ಗ್ರಾಮಗಳಾದ ಆನಗಳ್ಳಿ, ಜಪ್ತಿ, ಬಳ್ಕೂರು, ಕಂದಾವರಗಳನ್ನು ಮಂಡಲಾಕಾರದಲ್ಲಿ ಹೊಂದಿಕೊಂಡಿದೆ. ಬಸರೂರು ಇವುಗಳೊಂದಿಗೆ ಭೌಗೋಳಿಕ ನಂಟನ್ನು ಹೊಂದಿದಂತೆ, ಸಾಂಸ್ಕೃತಿಕ ಹಿರಿತನವನ್ನು, ಧಾರ್ಮಿಕ ಯಜಮಾನ್ಯವನ್ನು ತನ್ನೊಳಗೆ ಇರಿಸಿಕೊಂಡು ಪೋಷಿಸುತ್ತಿದೆ.

ಕ್ರಿ.ಶ ೨ನೇ ಶತಮಾನದ ಗ್ರೀಕ ಪ್ರವಾಸಿ ಟಾಲೆಮಿಯ ಬರವಣಿಗೆಯಲ್ಲಿ ದೊರೆಯುವ 'ಬರಾಸ್' (Barace) ಎನ್ನುವ ಪದ ಬಸರೂರನ್ನೆ ಕುರಿತು ಹೇಳಿದ ಪದ ಆಗಿದ್ದಿರಬೇಕು(ಗುರುರಾಜ ಭಟ್ ಪಾದೂರು;೧೯೯೯;ಪುಟ:೧೩). ಬರಾಸೆ ಮುಂದೆ ಬಸರೂರರಾಗಿ ಮಾರ್ಪಟ್ಟಿರಬೇಕು.ಅದೇ ರೀತಿ ಕ್ರಿಶ ೨೩ ರಲ್ಲಿ ಗ್ರೀಕ್ ಪ್ರವಾಸಿ ಪ್ಲೀನಿಯ ಪ್ರಾಕೃತಿಕ ಚರಿತ್ರೆ ಎಂಬ ಉದ್ಗಂಥದಲ್ಲಿ ಉಲ್ಲೇಖಿಸಲ್ಪಟ್ಟ 'ಬರಸೆ' ಮತ್ತು 'ನಿತ್ರಿಯಾಸ್' ಶಬ್ದ ಕ್ರಮವಾಗಿ  ಬಸರೂರು ಮತ್ತು ನೇತ್ರಾವತಿ ನದಿಯ ಹೆಸರುಗಳೆಂದು ಅಭಿಪ್ರಾಯ ಪಡಲಾಗಿದೆ(ನಾವುಡ ಎ.ವಿ;೧೯೭೭;ಪುಟ:೧೪). ಗ್ರೀಕರು ವ್ಯಾಪಾರಕ್ಕೆ ಬರುವ ಪೂರ್ವದಲ್ಲಿಯೇ ಬಸರೂರು ಪ್ರಾದುರ್ಭಾವಕ್ಕೆ ಬಂದಿರಬೇಕು. ಬಸರೂರು ಪದವನ್ನೇ ಟಾಲೆಮಿ ಬರಾಸ್ ಎಂದು ಬಳಸಿರಬೇಕು. ಪ್ರಮುಖ ರೇವು ಪಟ್ಟಣವಾದ ಬಸರೂರು ಗ್ರೀಕರ ಬಾಯಲ್ಲಿ ಬರಾಸ್(ಸೆ)ಆಗಿರಬೇಕು.

(ಆ) ವಸುಪುರದಿಂದ ಬಸರೂರು ಹುಟ್ಟು

ಬಸರೂರು ವಸುಪುರವೆಂಬ ಪದದಿಂದ ನಿಷ್ಪತ್ತಿಗೊಂಡಿದೆ. "ಪದ್ಮಪುರಾಣದ ಉಲ್ಲೇಖದಂತೆ ಚೇದಿವಂಶದ ದೊರೆ ವಸು ಸೋಮವಂಶೋದ್ಭವನು ಯಯಾತಿಯ ಮಗನಾಗಿದ್ದನು. ದಶಯೋಜನೆ ವಿಸ್ತಾರವಾಗಿದ್ದ ಅವನ ದೇಶವು ಪಾಪನಾಶಿನಿಯಾದ ಶುಕ್ತಿಮತಿ ನದಿಯವರೆಗೆ ವ್ಯಾಪಿಸಿತ್ತು. ಒಂದು ದಿನ ಗಿರಿರಾಜಪುರದ ಕೋಲಾಹಲನೆಂಬ ರಾಜನು ಇವನನ್ನು ಎದುರಿಸಿ ಭಯಂಕರ ಕಾಳಗವೊಂದರಲ್ಲಿ ಸೋಲಿಸಿದನು. ಸೋಲುಂಡು ದೇಶಭ್ರಷ್ಟನಾದ ವಸುಚಕ್ರವರ್ತಿ ತನ್ನ ಕಮಂಡಲದಲ್ಲಿ ಶುಕ್ತಿಮತಿಯ ನೀರನ್ನು ತುಂಬಿಕೊಂಡು ದೇಶಾಂತರವನ್ನು ಸುತ್ತುತ್ತ ಪರಶುರಾಮ ಕ್ಷೇತ್ರದ ವಾರಾಹಿ ನದಿಯ ತೀರದವರೆಗೆ ಬಂದನು. ವಾರಾಹಿ ನದಿಯ ಪಾವಿತ್ರತೆ, ಪ್ರಶಾಂತತೆ, ರಮಣೀಯತೆಯನ್ನು ಕಂಡು ತಾನು ತಂದಿದ್ದ  ಶುಕ್ತಿಮತಿಯ ಪವಿತ್ರ ಜಲವನ್ನು ವಾರಾಹಿ ನದಿಯಲ್ಲಿ ವಿಸರ್ಜಿಸಿ ದ್ವಾಪರ ಯುಗದ  ಕಾರ್ತಿಕಮಾಸದ ಚಂದ್ರವಾರ ತ್ರಯೋದಸಿ ದಿನ ಪ್ರದೋಶ ಕಾಲದಲ್ಲಿ ಮರಳಿನ ಲಿಂಗವೊಂದನ್ನು ಮಾಡಿ ಅರ್ಚಿಸಿದನು. ಶಿವನು ವಸುವಿನ ಭಕ್ತಿಗೆ ಮೆಚ್ಚಿ ಚಕ್ರವರ್ತಿ ಪದವಿಯನ್ನಿತ್ತನು. ಕೋಟೇಶ್ವರದಿಂದ ಒಂದುವರೆ ಯೋಜನೆಯಷ್ಟು ದೂರದ ಮಧುವನ ಎಂಬ ದಿವ್ಯ ಕ್ಷೇತ್ರದಲ್ಲಿ ಮಹಾಲಿಂಗೇಶ್ವರ ದೇವಾಲಯವನ್ನು ಶಿಲೆಯಿಂದ

ನಿರ್ಮಿಸಿ ವೈಭವದಿಂದ ರಾಜ್ಯವಾಳಿದನು. ವಾರಾಹಿ ನದಿ ತಟದಲ್ಲಿ ಬಸರೂರು ಪಟ್ಟಣವಿರುವುದು ಮತ್ತು ವಸುಚಕ್ರವರ್ತಿ ಮರಳಿನ ಲಿಂಗವನ್ನು ಸ್ಥಾಪಿಸಿ ಅರ್ಪಿಸಿದ್ದ ವಿಚಾರವನ್ನು ತಾಳೆ ಮಾಡಿ ನೋಡಿದರೆ ವಸುಚಕ್ರವರ್ತಿಯಿಂದ ಸ್ಥಾಪನೆಯಾದ ಊರೇ ವಸುಪುರ. ವಸುಪುರ ಎಂದು ಕರೆಯುವುದಕ್ಕಿಂತ ಮೊದಲು ಈ ಊರಿನ ಹೆಸರು ಶುಕ್ತಿಮತಿಯೆಂದಿತ್ತು ಅದು ಮುಂದೆ ಬಸರೂರು ಎಂದಾಯಿತು" ಎಂಬುದು ಐತಿಹ್ಯ(ಕಲುಬುರ್ಗಿ ಎಂ.ಎಂ;೧೯೮೪;ಪುಟ:೮೭ )ನಾಗೇಗೌಡ ಎಚ್.ಎಲ್ ರು ಪ್ರವಾಸಿ ಕಂಡ ಇಂಡಿಯಾ ಸಂಪುಟ ಎರಡರಲ್ಲಿ ದಾಖಲಿಸಿದ 'ಮಆರ್ತೆಬಾರ್ಬೋಸಾನ' ಪ್ರವಾಸಿ ಬರೆಹವು ವಸುಪುರವೇ ಬಸರೂರು ಎಂಬ ಮಾಹಿತಿ ನೀಡುತ್ತದೆ[೨೭].

ಮೆಕಂರ್ಝಿಯ ಸಂಪುಟದಲ್ಲಿ ಬಸರೂರಿನ ಹುಟ್ಟಿನ ಬಗ್ಗೆ ಐತಿಹ್ಯವೊಂದಿದೆ. ಕುಂಭಕಾಶಿಯಲ್ಲಿ[೨೮] ಕುಂಭರಾಕ್ಷಸ ರಾಜ್ಯವಾಳುತ್ತಿದ್ದಾಗ ಈತನ ಪ್ರಧಾನಿ ಮಹಾಲಿಂಗನನ್ನು ಪ್ರತಿಷ್ಠೆ ಮಾಡಿದನು. ಆಮೇಲೆ ಅದು ಜೀರ್ಣಗೊಂಡು ಅನೇಕ ಕಾಲದನಂತರ ಚೈದ್ಯದೇಶದ ವಸುರಾಯ ಸಂಚಾರಾರ್ಥವಾಗಿ ದಕ್ಷಿಣ ದೇಶಕ್ಕೆ ಸಂಚಾರ ಮಾಡುತ್ತ 'ವಸುಪುರ'ಎಂಬ ಪಟ್ಟಣವನ್ನು ಕಟ್ಟಿ ಅಲ್ಲಿ ನೆಲೆ ನಿಂತನು. ಅನಂತರದಲ್ಲಿ ಈತನ ಪ್ರಧಾನಿ ಕುಂದಿರಾಯನು ವಸುಪುರಕ್ಕೆ ಪ್ರತಿನಾಮಧೇಯ ಬಸರೂರಿನ ಪಶ್ಚಿಮಕ್ಕೆ ಒಂದು ಕ್ರೋಢದ ಮೇಲಿನ ಮಹಾಲಿಂಗನನ್ನು ಜೀರ್ಣೋದ್ಧಾರ ಮಾಡಿಸಿದನು. ಕುಂದರಾಯನಿಂದ ಕುಂದೇಶ್ವರ[೨೯] ಮುಂದೆ ಕುಂದಾಪುರ ಎಂಬ ಹೆಸರು ಬಂದಿದೆ. ಮೆಕೆಂಜಿ ಸಂಪುಟವು ವಸುಪುರವನ್ನು ವಸುರಾಯನು ಕಟ್ಟಿದನು ಎಂದು ಹೇಳಿದೆ.

(ಇ) ಬಸರಿ ಗಿಡದಿಂದ ಬಸರೂರು

ಬಸರೂರು ಎಂಬ ಪದವು ಸಸ್ಯವಾಚಿಯೆಂದು ಬಸುರೆ[೩೦] ಊರಿನ ಮುಂದೆ ಸೇರಿ ಬಸರೂರು ಆಗಿದೆ. ಕ್ರಿಶ ೧೧೫೪ರ ಕಾಲದ ಕವಿಆಳುಪೇಂದ್ರನ ಶಾಸನದಲ್ಲಿ ಹೊಸಪಟ್ಟಣ ಬಸುರೆಪುರ ಎಂದು ಕರೆದಿದೆ. ಬಸುರೆಪುರ ಎಂಬುದು ಬಸರಿ ಎಂಬ ಹೆಸರಿನ ಗಿಡದಿಂದಲೆ ಬಂದಿದೆ. ಬಸರಿಬೇರು, ಬಸರಿಕಟ್ಟೆ, ಬಸರಿತ್ತಡ್ಕ ಇರುವಂತೆ ಬಸರಿ ಊರು ಕ್ರಮೇಣ ಬಸರೂರು ಆಗಿರಬಹುದು ಎಂಬುದು ರಘುಪತಿ ಭಟ್ ಕೆಮ್ತೂರರ ಅಭಿಪ್ರಾಯವಾಗಿದೆ(ರಘುಪತಿ ಭಟ್ ಕೆಮ್ತೂರು;೧೯೭೯;ಪುಟ:೯೧). ಬಸರೂರು ದಟ್ಟ ಅರಣ್ಯ ಪ್ರದೇಶವಾಗಿದ್ದು, ಬಸರಿ ಮರಗಳು ಇಲ್ಲೆಲ್ಲ ವ್ಯಾಪಿಸಿಕೊಂಡದ್ದರಿಂದ ಬಸರಿ ಗಿಡದಿಂದಾಗಿಯೆ ಈ ಊರಿಗೆ ಬಸರೂರು ಎಂಬ ಹೆಸರು ಬಂತೆಂದು ಹೇಳುತ್ತಾರೆ.

ಬಸರೂರಿನ ಸುತ್ತಮುತ್ತಲಿನ ಮಾಗಣೆಗಳ ಹೆಸರುಗಳು ಸಸ್ಯವಾಚಿಯಾಗಿದೆ."ಊರಿನ ಮುಂದೆ, ಕಟ್ಟೆಯ ಮುಂದೆ ಸಸ್ಯದ ಹೆಸರು ಸೇರಿಕೊಳ್ಳುವುದು ಸರ್ವೆ ಸಾಮಾನ್ಯವಾಗಿದೆ. ಅದೇ ರೀತಿ ನೇರಳೆ ಮರದಿಂದ ನೇರಳಕಟ್ಟೆ, ಮಾವಿನ ಮರದಿಂದ ಮಾವಿನಕಟ್ಟೆ,

ನೆಲ್ಲಿಮರದಿಂದ ನೆಲ್ಲಿಕಟ್ಟೆಯಾದಂತೆ"(ರಘುಪತಿ ಭಟ್ ಕೆಮ್ತೂರು;೧೯೭೯;ಪುಟ:೯೧)ಬಸರಿ ಮರದಿಂದ ಬಸರೂರು ಎಂಬ ಹೆಸರು ಬಂದಿದೆ ಎನ್ನುತ್ತಾರೆ. ಈ ಮೊದಲು ಬಸರಿ ಊರು ಎಂದಿದ್ದದ್ದು ಕಾಲಾಂತರದಲ್ಲಿ ಬಸರೂರು ಆಗಿರಬೇಕು.

(ಈ) ಒಸರಿನಿಂದ ಬಸರೂರು

"ಬಸರೂರು ಸ್ಥಳನಾಮವು ಒಸರು ಎಂಬ ಜಲಸಂಸ್ಕೃತಿಯಿಂದ ನಿಷ್ಪತ್ತಿಯಾಗಿದೆ"(ನರಸಿಂಹಮೂರ್ತಿಪಿ.ಎನ್;೧೯೮೪;ಪುಟ:೨೯). ಬಸರೂರು ಒಸರಿನ ಪ್ರದೇಶವಾದ್ದರಿಂದ ಏಳು ಕೇರಿಗಳಲ್ಲಿ ಏಳು ಕೆರೆಗಳಿವೆ.ಈ ಜಲಸಮೃದ್ಧತೆಯೇ ಬಸರೂರು ಎಂಬ ಹೆಸರಿಗೆ ಕಾರಣವಾಗಿದೆ. ಬಸರೂರಿನ ನೆಲವು ಕೆರೆಗಳನ್ನು ಹೊಂದಿರುವುದರ ಜೊತೆಗೆ ನದಿಪಾತ್ರಕ್ಕೆ ಅಂಟಿಕೊಂಡಿದೆ. ಜನಪದ ತ್ರಿಪದಿವೊಂದರಲ್ಲಿ(ಚಂದ್ರಶೇಖರ ಐತಾಳ ಗುಂಡ್ಮಿ;೧೯೭೩;ಪುಟ:೪)

ಆ ಊರು ಈ ಊರು ಕೋಡಿ ಕುಂದಾಪ್ರ
ತಗ್ಗಿನಲಿದ್ದೂರು ಬಸ್ರೂರು-ಹೆಣ್ಮಕ್ಳ
ಹುಬ್ಬಿನ್ ಮ್ಯಾಲಿತ್ತ್ ಹೊಯ್‌ಮಾಲಿ

ತಗ್ಗಿನ ಊರು ಬಸರೂರು ಎಂದ ಮೇಲೆ ಅದು ನೀರಿನ ಜೌಗಿನಿಂದ ಕೂಡಿದ ಭೂಮಿ ಎಂಬ ಅರ್ಥವನ್ನು ಧ್ವನಿಸುತ್ತದೆ. ಈ ದೃಷ್ಟಿಯಿಂದ ಬಸರೂರು ಎಂಬ ಪದವು ಜಲಸಂಸ್ಕೃತಿಯಿಂದ ಹುಟ್ಟಿದ್ದಾಗಿದೆ. ಒಸರೂರು ಕಾಲಾಂತರದಲ್ಲಿ ಬಸರೂರು ಆಗಿರಬೇಕು.

(ಉ) ಬಸವಿ- ಬಸಿರು - ಬಸರೂರು

ಬಸರೂರಿನ ಸ್ಥಳನಾಮದ ನಿಷ್ಪತ್ತಿಯಲ್ಲಿ ಗಾದೆಗಳನ್ನು ಗುರುತಿಸಬೇಕಾಗುತ್ತದೆ. 'ಬಸರೂರು ದಾಯೆ ಬಂಜಿಗ್ ಬಾರಕೂರುದಾಯೆ ದಂಡಕೊರಿಲೆಕ್ಕೊ' ಅಂದರೆ ಬಸರೂರಿನವ ಮಾಡಿದ ಬಸಿರಿಗೆ ಬಾರ್ಕೂರಿನವ ದಂಡ ತೆತ್ತಹಾಗೆ ಎಂಬ ಗಾದೆಯಿದೆ. ಬಾರಕೂರು ಮತ್ತು ಬಸರೂರು ಎರಡು ಅವಳಿ ಪಟ್ಟಣವಾಗಿದೆ. ಬಸರೂರು ವಿಲಾಸಿ ಜೀವನಕ್ಕೆ, ಭೋಗಕ್ಕೆ ಹೆಸರಾಗಿದೆ. ಪ್ರಪಂಚದ ಬೇರೆ ಬೇರೆ ದೇಶಗಳಿಂದ ವ್ಯಾಪಾರ ಉದ್ದೇಶಗಳಿಗೆ ಜನ ಬರುತ್ತಿದ್ದರು. ಅವರನ್ನು ಸಂತೃಪ್ತಿಗೊಳಿಸುವ ಸರಕುಗಳು ಇಲ್ಲಿ ಸಿಗುತ್ತಿತ್ತು. ಜನ ಇಲ್ಲಿಗೆ ಬಂದು ದೇಹ ಮತ್ತು ಮನಸ್ಸುಗಳನ್ನು ತಣಿಸಿಕೊಂಡು ಹೋಗುತ್ತಿದ್ದರು. ಇದುವೇ ಅನ್ವರ್ಥವಾಗಿ ಬಸವಿಯರ ಊರು ಕಾಲಾಂತರದಲ್ಲಿ ಬಸುರಿಯರ ಊರಾಗಿ ಕೊನೆಗೆ ಬಸರೂರು ಎಂದಾಗಿರಬಹುದು. ಬಸವಿ ಶಬ್ಧದಿಂದಲೇ ಬಸರೂರು ಹುಟ್ಟಿರಬೇಕು.

(ಊ) ಬರ್ಸದಿಂದ–ಬಸರೂರು

ವಾರಾಯಿ ನದಿಯ ದಂಡೆಯಲ್ಲಿನ ಪ್ರಮುಖ ರೇವು ಪಟ್ಟಣ ಬಸರೂರು ಪ್ರಾಗೈತಿಹಾಸಿಕ ಮಾನವನ ವಾಸಸ್ಥಾನ ಆಗಿದೆ. ಪ್ಲಿನಿ(ಕ್ರಿ.ಶ೨೩) ಹೆಸರಿಸಿರುವ ಬಾರ್ಚೆ ಎಂಬ ಪದ ಬಸರೂರು ಎಂದು ಬಿ.ಎ ಸಾಲೆತ್ತೂರರು ಅಭಿಪ್ರಾಯ ಪಡುತ್ತಾರೆ(ನರಸಿಂಹಮೂರ್ತಿ ಪಿ.ಎನ್;೧೯೮೪;ಪುಟ:೨೯). ಈ ಬಾರ್ಚೆ ತುಳುವಿನ ಬರ್ಸ[೩೧] ಆಗಿದೆ.ಈ ಪ್ರದೇಶದಲ್ಲಿ ಮಳೆ ಹೆಚ್ಚಾಗಿ ಬೀಳುವುದರಿಂದ ಈ ಊರಿಗೆ ಬರ್ಸದಊರು ಎಂದಿದ್ದು ಅದು ಬರ್ಸೂರ್ ಆಗಿ ಕೊನೆಗೆ ಬಸರೂರು ಆಗಿರಬಹುದು. ಇದೊಂದು ಜಲಜನ್ಯ ಹೆಸರು ಎಂದು ಅಭಿಪ್ರಾಯ ಪಡುತ್ತಾರೆ.

(ಋ) ಬಸುಪುರ>ಬಸವಪುರ>ವಸುಪುರ>ಬಸರೂರು

ಕರ್ನಾಟಕದಲ್ಲಿ ವೀರಶೈವ ಧರ್ಮದ ಪ್ರಭಾವವು ೧೧ನೇ ಶತಮಾನದ ವೇಳೆಗೆ ಆಗಿತ್ತು. ಸಮುದ್ರ ವ್ಯಾಪಾರಿಗಳ ಮೂಲಕ ವೀರಶೈವವು ತುಳುನಾಡಿನಲ್ಲಿ ಬಿತ್ತರಗೊಂಡಿರಬೇಕು. ಆ ಕಾಲಕಾಲಕ್ಕೆ ಬ್ರಹ್ಮಾದಾಯವನ್ನು, ಬಸವನನ್ನು ದೇವಾಲಯಗಳಿಗೆ ದಾನ ನೀಡಿದ ಉದಾಹರಣೆಯಿದೆ. ಒಂದು ಕಾಲಕ್ಕೆ ಬಸರೂರಿನಲ್ಲಿ ವೀರಶೈವಧರ್ಮ ಪ್ರಾಬಲ್ಯವನ್ನು ಪಡೆದುಕೊಂಡಿರಬೇಕು. ವೀರಶೈವ ಧರ್ಮದಿಂದಾಗಿ ಬಸವಪುರವಾಗಿದ್ದ ಈ ಪ್ರದೇಶ ನಂತರ ಬಸರೂರು ಆಗಿರಬೇಕು(ನಾಗರಾಜ ಎಂ.ಜಿ;೨೦೦೧; ಪುಟ೧೩೭).

ಈ ಮೇಲಿನ ಎಲ್ಲಾ ಐತಿಹ್ಯ, ಸ್ಥಳಪುರಾಣ, ವಿದೇಶಿಬರೆಹ, ಶಾಸನ ಸಂಪತ್ತುಗಳು ತಿಳಿಸುವ ಸ್ಥಳನಾಮ ನಿಷ್ಪತ್ತಿಯೂ ಚರ್ಚೆಗೆ ಗ್ರಾಸವಾದವುಗಳಾಗಿವೆ. ಈ ಎಲ್ಲಾ ಸ್ಥಳನಾಮಗಳು ನೀಡುವ ಮಾಹಿತಿಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಮತ್ತು ಅನೇಕ ಮಗ್ಗುಲುಗಳಿಂದ ಅವಲೋಕಿಸಿದರೆ ಬಸರೂರು ಪದದ ನಿಷ್ಪತ್ತಿಯನ್ನು ಕಟ್ಟಿಕೊಡಲು ಸಾಧ್ಯವಾಗುತ್ತದೆ.

ವಸುಪುರ ಅಥವಾ ವಸುಚಕ್ರವರ್ತಿಯಿಂದ ಅಸ್ತಿತ್ವವನ್ನು ಪಡೆದುಕೊಂಡ ನಂತರ ಬಸರೂರು ನಾಮಧೇಯವಾಯಿತೆಂಬುದನ್ನು ಒಪ್ಪಲು ಆಧಾರಗಳಿಲ್ಲ. ವಸುಚಕ್ರವರ್ತಿ ಅಥವಾ ವಿಭುದವಸು ತುಳುನಾಡನ್ನು ಆಳಿದ ಬಗ್ಗೆ ದಾಖಲೆಗಳು ಸಿಗದಿರುವಾಗ ವಸುಚಕ್ರವರ್ತಿಯಿಂದ ವಸುಪುರ ಹುಟ್ಟಿತು ನಂತರ ಬಸರೂರು ಎಂದಾಯಿತು ಎಂಬ ವಾದ ಸರಿಯಲ್ಲ. ವಸುಚಕ್ರವರ್ತಿಯೇ ಕಾಲ್ಪನಿಕ ವ್ಯಕ್ತಿಯೆಂದ ಮೇಲೆ ಆತನಿಂದ ಬಸರೂರು ಪಟ್ಟಣ ನಿರ್ಮಾಣವಾಗಲು ಸಾಧ್ಯವಿಲ್ಲ.

ಬಸರೂರಿನ ಮಹಾಲಿಂಗೇಶ್ವರ ದೇವಾಲಯುವನ್ನು ವಸುಚಕ್ರವರ್ತಿ ಕಟ್ಟಿಸಿದನೆನ್ನಲಾಗಿದೆ.ಆದರೆ ಕ್ರಿ.ಶ ೧೧೫೪ ರ ಶಾಸನವು ನಖರ ವರ್ತಕರಿಂದ ನಖರೇಶ್ವರ ದೇವಾಲಯ ಅಥವಾ ಮಹಾಲಿಂಗೇಶ್ವರ ದೇವಾಲಯ ನಿರ್ಮಾಣವಾಯಿತೆಂದು ತಿಳಿಸುತ್ತದೆ.

ಹೀಗಿರುವಾಗ ವಸುವಿನಿಂದ ವಸುಪುರವೆಂದು ಮುಂದೆ ವಸುಪುರವೇ ಬಸರೂರು ಆಯಿತೆನ್ನುವ ವಾದದಲ್ಲಿ ಹುರುಳಿಲ್ಲ.

ಬಸರೂರಿನಲ್ಲಿ ಸಿಕ್ಕಿದ ಯಾವುದೇ ಶಾಸನಗಳು ವಸುಪುರ ಎಂದು ಉಲ್ಲೇಖಿಸಿಲ್ಲ. ಆದರೆ ೧೬ನೇ ಶತಮಾನದಿಂದೀಚೆಗೆ ವಸುಪುರ ಎಂಬ ಪದ ಪದೇಪದೇ ಬಳಕೆಯಾಗಿದೆ. ಮುಖ್ಯವಾಗಿ ಕವಿಗಳು, ದೇವಾಲಯದ ಅರ್ಚಕರು, ದೇವಾಲಯದ ಚಾಕರಿ ಮಾಡುವವರು ಮಾತ್ರ ಬಳಸಿದ್ದಾರೆ. ಇದರ ಹಿಂದೆ ವೈದಿಕ ಸಂಸ್ಕೃತಿಯ ಗಾಢಪ್ರಭಾವ ಎದ್ದು ಕಾಣುತ್ತದೆ. ಆಗಮೋಕ್ತ ಆಚರಣೆಗೆ ಕಟಿಬದ್ಧರಾದ ಜನರಿಗೆ ಬಸರೂರು ಪದ ಕೀಳಾಗಿ ಕಂಡಿರಬೇಕು. ಆದುದರಿಂದ ವಸುಪುರ ಎಂದು ಸಂಸ್ಕೃತಿಕರಣಗೊಳಿಸಿದ್ದಾರೆ. ಇದೇ ರೀತಿ ಸಂಸ್ಕೃತಿಕರಣಗೊಂಡ ಪದಗಳು ಈ ಪ್ರದೇಶದಲ್ಲಿದೆ [೨].ಕ್ರಿ.ಶ ೧೬೩೦ ರ ಸುಮಾರಿಗೆ ಬಸರೂರಿಗೆ ಬಂದಿದ್ದ ಪೋರ್ಚುಗೀಸರು ಕೂಡ ಬಾರಸಲೊರೆ[೩] ಎಂದು ಕರೆದಿದ್ದಾರೆ. ಅವರು ಬಾರಸೆಲೊರ್‌ನ್ನು ಮೇಲು ಮತ್ತು ಕೆಳಬಾರಸೆಲೊರ್ ಎಂದು ಕರೆದಿದ್ದಾರೆ. ಹೀಗಿರುವಾಗ ವಸುಪುರದಿಂದ ಬಸರೂರು ಸೃಷ್ಟಿಯಾಯಿತು ಎಂಬ ವಾದಕ್ಕೆ ಹುರುಳಿಲ್ಲ.

ಬಸರೂರಿನ ಸ್ಥಳನಾಮವನ್ನು ಸಸ್ಯವಾಚಿಯೆಂದು ತೀರ್ಮಾನಿಸಲು ಸಾಧ್ಯವಿಲ್ಲ.ಬಸರೂರು ಪದ ಬಸರಿ ಮರೋದ್ಭವವೆಂಬ ವಾದವನ್ನು ತಾತ್ವಿಕವಾಗಿ ಒಪ್ಪಬಹುದಾದರು ಭೌತಿಕಸಾಕ್ಷ್ಯಗಳ ಕೊರತೆ ಇದೆ. ಬಸರೂರಿನ ಸುತ್ತಮುತ್ತಲಿನ ಪ್ರದೇಶದಲ್ಲಿ ಬಸರಿ ಎಂಬ ಹೆಸರಿನ ಮರವಿಲ್ಲ.ಯಾವುದೇ ಬಗೆಯ ಭೌತಿಕ ಸಾಕ್ಷ್ಯಗಳು ಸಿಗದಿರುವಾಗ ಬಸರಿ ಮರದಿಂದ ಬಸರೂರು ಹುಟ್ಟಿತು ಎಂಬ ಹೇಳಿಕೆ ಸರಿಯಲ್ಲ.

ಬರ್ಸದಿಂದ ಬಸರೂರು ಆಗುವ ಸಾಧ್ಯತೆಗಳು ಇಲ್ಲ ಎನ್ನಬೇಕು. ಬಸರೂರು ಮತ್ತು ಬಾರಕೂರು ಆಡಳಿತಾತ್ಮಕವಾಗಿ ತುಳುರಾಜ್ಯವಾಗಿದ್ದರು ಭಾಷಿಕವಾಗಿ ಕನ್ನಡ ಮಾತನಾಡುವ ಪ್ರದೇಶವೇ ಆಗಿದ್ದಿತ್ತು. "ಇಲ್ಲಿನ ಆರಾಧನ ವಿಧಾನಗಳಲ್ಲಿ ಕನ್ನಡವೇ ಪ್ರಧಾನವಾಗಿತ್ತು. ಇದು ಕುಂದಾಪುರ ಕನ್ನಡದ ಹುಟ್ಟೂರು. ಸುವರ್ಣನದಿಯಿಂದ ಉತ್ತರಕ್ಕೆ ಕುಂದಾಪುರ ಕನ್ನಡವೇ ಆಡುಭಾಷೆಯಾಗಿದೆ"(ವಿಶ್ವಂಭರ ಉಪಾಧ್ಯಾಯ;೨೦೦೭;ಪುಟ:೨). ಹೀಗಿರುವಾಗ ತುಳು ಪದ ಬರ್ಸಕ್ಕೆ, ಊರು ಕನ್ನಡ ಪದ ಸೇರಿ, ಬರ್ಸದ+ಊರು ಸಮಾಸವಾಗಿ ಬಸರೂರು ಆಯಿತು ಎನ್ನುವುದನ್ನು ಒಪ್ಪಲು ಸಾಧ್ಯವಿಲ್ಲ.

ಬಸರೂರಿನ ಮೇಲಾದ ವೀರಶೈವದ ಪ್ರಭಾವವನ್ನು ಒಪ್ಪಬಹುದು. ಆದರೆ ಬಸವನ ಆರಾಧನೆಯಿಂದಾಗಿ ಬಸವಪುರವೇ ಬಸರೂರು ಆಯಿತು ಎಂಬುದನ್ನು ಪುಷ್ಟಿಕರಿಸಲು ಬೇರೆ ಆಧಾರಗಳಿಲ್ಲ.

ಒಸರಿನಿಂದ ಬಸರೂರು ನಿಷ್ಪತ್ತಿಯಾಗಿದೆ ಎಂಬ ನರಸಿಂಹಮೂರ್ತಿಯ

ಪಿ.ಎನ್‌ರವರ ವಾದ ಒಪ್ಪುವಂತದ್ದು. ಸುಮಾರು ೨೦೦೦ ವರುಷಗಳ ಇತಿಹಾಸವಿರುವ ಬಸರೂರಿಗೆ ಕ್ರಿಶ ೧-೨ನೇ ಶತಮಾನದಲ್ಲಿಯೇ ಗ್ರೀಕ್‌ಪ್ರವಾಸಿಗಳು, ವ್ಯಾಪಾರಿಗಳು ನಾವೆಗಳಲ್ಲಿ ಬರುತ್ತಿದ್ದರು ಮತ್ತು ಅದಕ್ಕಿಂತಲೂ ಹಿಂದೆ ಬಸರೂರು ಪ್ರಾಗಿತಿಹಾಸ ಕಾಲದ ಮಾನವರ ಆವಾಸ ಸ್ಥಾನವಾಗಿತ್ತು[೩೪]. ಈ ಆಧಾರದ ಮೇಲೆ ಒಸರಿನಿಂದ ಬಸರೂರು ಹುಟ್ಟಿದೆ ಎನ್ನಬಹುದು. ವಾರಾಹಿ ನದಿ ಉಪ್ಪುನೀರಿನ ಹೊಳೆ ಆದುದರಿಂದ ಇಲ್ಲಿನ ಕೃಷಿಕರು ಕೃಷಿ ಮತ್ತು ಇನ್ನಿತರ ಕೆಲಸಗಳಿಗೆ ಕೆರೆಗಳನ್ನು ನಿರ್ಮಾಣ ಮಾಡಿಕೊಳ್ಳುತ್ತಿದ್ದರು. ಈ ಕೆರೆಗಳೇ ೧೨ನೇ ಶತಮಾನದಲ್ಲಿ ಪುನರ್ ನಿರ್ಮಾಣಗೊಂಡಿದೆ. ಬಸರೂರಿನ ಹೃದಯ ಭಾಗದಲ್ಲಿ ಗುರಿನಹೊಂಡ ಎಂಬ ನೀರಿನ ಹೊಂಡವಿದ್ದಿತ್ತು. ಚೈತ್ರ, ವೈಶಾಖದಲ್ಲೂ ಅಲ್ಲಿ ನೀರಿದ್ದು ಎಮ್ಮೆಗಳು ಅಲ್ಲಿ ಮಲಗಿಕೊಳ್ಳುತ್ತಿದ್ದವು. ಅಷ್ಟೊಂದು ನೀರಿನ ಆಸರೆ ಬಸರೂರಿನಲ್ಲಿದೆ ಎಂದು ವಕ್ತೃಗಳು[೩೫] ಹೇಳುತ್ತಾರೆ. ಬಸರೂರಿನ ನೆಲವು ಒಸರಿನಿಂದ ತುಂಬಿದೆ. ಮುಂದೆ ಒಸರೂರು, ಬಸರೂರು ಆಗಿ ಬದಲಾಗಿದೆ. ಒಸರಿನಿಂದಲೇ ಬಸರೂರು ಎನ್ನುವುದಕ್ಕೆ ಏಳುಕೆರೆಗಳೆ[೩೬] ಸಾಕ್ಷಿಯಾಗಿದೆ.

(ಎ) ಬಸರೂರಿನ ಅಧೀನಗ್ರಾಮಗಳ ಸ್ಥಳನಾಮ ವಿವೇಚನೆ

ಬಸರೂರನ್ನು ಮಂಡಲಾಕಾರದಲ್ಲಿ ಸುತ್ತುವರಿದ ನಾಲ್ಕು ಗ್ರಾಮದ ಸ್ಥಳನಾಮವನ್ನು ಅಧ್ಯಯನದ ದೃಷ್ಟಿಯಿಂದ ವಿವೇಚನೆ ಮಾಡಲಾಗಿದೆ. ಏಕೆಂದರೆ ಬಸರೂರಿನ ಸಾಂಸ್ಕೃತಿಕ ಅಧ್ಯಯನದಲ್ಲಿ ಕಂದಾವರ, ಬಳ್ಕೂರು, ಜಪ್ತಿ, ಆನಗಳ್ಳಿ ಈ ಪ್ರದೇಶಗಳು ಬಸರೂರಿನೊಡನೆ ಸಾಂಸ್ಕೃತಿಕ, ಧಾರ್ಮಿಕ ಸಂಬಂಧ ಹೊಂದಿದೆ. ಬಸರೂರಿನ ಅಧ್ಯಯನವೆಂದರೇ ಈ ಗ್ರಾಮಗಳ ಜನಸಂಸ್ಕೃತಿಯ ಅಧ್ಯಯನವಾಗಿದೆ.

೧. ಜಪ್ತಿ :_ ಬಸರೂರು ಮಾಗಣೆಯ ತುದಿಯಲ್ಲಿರುವ ಗ್ರಾಮವೇ ಜಪ್ತಿ. ಈ ಗ್ರಾಮದಲ್ಲಿ ಶ್ರೀಮಹತೋಭಾರ ಮಹಾಲಿಂಗೇಶ್ವರನಿಗೆ ಸೇರಿದ ಭೂಮಿ ಇದ್ದಿತಂತೆ. ಈ ಭೂಮಿಯನ್ನು ಬೇಸಾಯ ಮಾಡುವ ಈ ಪ್ರದೇಶದ ಜನ ದೇವಾಲಯಕ್ಕೆ ಸಲ್ಲಬೇಕಾದ ಆದಾಯವನ್ನು ನೀಡದೆ ಉದಾಸಿನ ತೋರಿದರು. ಇದರಿಂದ ಕೋಪಗೊಂಡ ಆಡಳಿತ ಮಂಡಳಿ ಆ ಊರನ್ನು ಜಪ್ತಿ[೩೭] ಮಾಡಿಸಿದರು. ಈ ಕಾರಣದಿಂದ ಊರಿಗೆ ಜಪ್ತಿ ಎಂದಾಯಿತು.

೨. ಕಂದಾವರ :-ಬಸರೂರು ಮಾಗಣೆಯ ಪ್ರಮುಖ ಆಯಕಟ್ಟಿನ ಜಾಗ ಇದಾಗಿದೆ. ಬಸರೂರು ತುಳುನಾಡಿನ ಪ್ರಮುಖ ರೇವುಪಟ್ಟಣವಾಗಿತ್ತು. ಬಸರೂರಿನ ಮೇಲೆ ಪರಕೀಯರ ಆಕ್ರಮಣ ನಿರಂತರವಾಗಿತ್ತು. ಬಸರೂರಿನಲ್ಲಿ ಹನ್ನೊಂದು ಸಾವಿರ ಸೇನೆ ಯುದ್ಧಮಾಡಿದ ಉಲ್ಲೇಖವಿದೆ. ಈ ಭಾಗದ ರಕ್ಷಣೆಗೆ ಸೈನ್ಯ ನೆಲೆನಿಂತ ಪ್ರದೇಶವೇ ಕಂದಾವರ[೩೮]. "ಪ್ರಾಚೀನ ಬಂದರು ನಗರವಾದ ಬಸರೂರಿನ ರಕ್ಷಣೆಗೆ ಒಂದು ಸೈನಿಕ

ಠಾಣ್ಯ ಕಂದಾವರದಲ್ಲಿತ್ತು. ಸಂಸ್ಕೃತದಲ್ಲಿ ಸ್ಕಂದಾವರ ಎಂದರೆ ಸೈನಿಕ ಠಾಣ್ಯ. ಕನ್ನಡದಲ್ಲಿ ಕಂದಾವರ ಆಗಿದೆ. ಸೈನಿಕ ಠಾಣೆಯ ಅಧಿದೇವತೆ ಸ್ಕಂದ ಹಾಗಾಗಿ ಇಲ್ಲೊಂದು ಸ್ಕಂಧನ ಆಲಯವಿದೆ. ಸಾಮಾನ್ಯವಾಗಿ ಸ್ಕಂಧನಿಗೆ ಪ್ರತ್ಯೇಕ ದೇವಸ್ಥಾನ ಆರಾಧನೆಗಳಿರುವಲ್ಲೆಲ್ಲಾ ಹಿಂದೆ ಅಲ್ಲೊಂದು ಸೈನಿಕ ಠಾಣ್ಯ ಇತ್ತೆಂದು ಊಹಿಸಬಹುದು(ನರಸಿಂಹಮೂರ್ತಿ ಪಿ.ಎನ್;೧೯೯೪;ಪುಟ:೩೦). ಸ್ಕಂಧಾವಾರ ಎಂದರೆ ಸೈನ್ಯ ಅಥವಾ ಸೈನ್ಯದ ತುಕ್ಕಡಿ, ಸೇನೆ ಬೀಡು ಬಿಟ್ಟ ಸ್ಥಳ ಎಂಬ ಅರ್ಥ ನಿಘಂಟುವಿನಲ್ಲಿದೆ(ಸಂಕ್ಷಿಪ್ತ ಕನ್ನಡ ನಿಘಂಟು೨೦೦೧;ಪುಟ:೧೩೪೬). ಇದು ಸ್ಕಂಧ ಆವರಿಸಿದ ಪ್ರದೇಶ ಎಂಬರ್ಥವನ್ನು ಪಡೆದುಕೊಳ್ಳುತ್ತದೆ. ಸ್ಕಂಧ+ಆವರ–ಸ್ಕಂಧಾವಾರ>ಕಂದಾವಾರ. ಇಲ್ಲಿ ಸ್ಕಂಧ ತದ್ಭವವಾಗಿ ಕಂದವಾಗಿದೆ. ಅಷ್ಟೆ ಅಲ್ಲದೆ ದೇವತೆಗಳ ಸೈನ್ಯದ ಒಡೆಯ ಸ್ಕಂಧ ಅಥವಾ ಷಣ್ಮುಖ.

೩. ಆನಗಳ್ಳಿ :– ಬಸರೂರಿನ ಪಶ್ಚಿಮಕ್ಕಿರುವ ನದಿ ಪಾತ್ರದ ಪ್ರದೇಶವಾಗಿದೆ. ಬಸರೂರು ಪ್ರಮುಖ ವ್ಯಾಪಾರಿ ಕೇಂದ್ರವಾಗಿದ್ದು, ಪ್ರಪಂಚದ ಬೇರೆಬೇರೆ ಭಾಗಗಳಿಂದ ವ್ಯಾಪಾರಕ್ಕೆ ವಣಿಕರು ಇಲ್ಲಿಗೆ ಬರುತ್ತಿದ್ದರು. ಇಲ್ಲಿ ಆಡಳಿತ ನಡೆಸುತ್ತಿದ್ದ ಅರಸರು ವ್ಯಾಪಾರಿ ಕೋಟೆಯ ರಕ್ಷಣೆಗೆ ಸೈನ್ಯವನ್ನು ಇರಿಸಿಕೊಂಡಿದ್ದರು. ಅಶ್ವದಳದೊಂದಿಗೆ ಗಜದಳವು ಇದ್ದಿತ್ತು. ಆನೆಗಳನ್ನು ತರಬೇತು ನಡೆಸುವ ಸ್ಥಳವೇ ಆನಗಳ್ಳಿ. ಆನೆಗಳ+ಕಳ(ಳಿ)– ಆನೆಗಳಿ>ಆನಗಳ್ಳಿ ಆಗಿದೆ. ಕಳ ಎಂದರೆ ಅಂಗಣ. ಕಾಳಗದಸ್ಥಳ ಎನ್ನುವ ಅರ್ಥ ನಿಘುಂಟಿನಲ್ಲಿದೆ(ಸಂಕ್ಷಿಪ್ತಕನ್ನಡ ನಿಘುಂಟು;೨೦೦೧; ಪುಟ:೨೪೬). ಕುಂದಾಪುರ ಕನ್ನಡದಲ್ಲಿ 'ಕಳಿ'ಎಂದರೆ ಕೆಸರು ಮತ್ತು ನೀರಿರುವ ಸ್ಥಳ ಎಂದರ್ಥ. ಆನೆಗಳನ್ನು ಪಳಗಿಸಲು ಇದು ಪ್ರಶಸ್ತವಾದ ಸ್ಥಳವಾಗಿರುವುದರಿಂದ ಅದು ಆನಗಳ್ಳಿ ಎಂದು ಹೆಸರು ಪಡೆಯಿತು.

೪. ಬಳ್ಕೂರು :– ಬಸರೂರಿನ ಪೂರ್ವಕ್ಕಿರುವ ಪಂಚಗ್ರಾಮಗಳಲ್ಲಿ ಬಳ್ಕೂರು ಒಂದು. ಈ ಹೆಸರಿನ ಹಿಂದೆ ಹಳ್ಳವಿದೆ. ಒಂದು ಕಾಲದಲ್ಲಿ ಬಳ್ಕೂರು ಎಂಬ ಗ್ರಾಮ ಇರಲಿಲ್ಲ. ಈ ಪ್ರದೇಶವು ವಾರಾಹಿ ನದಿಯ ಪಾತ್ರದೊಡನೆ ಸೇರಿತ್ತು. ಕಾಲಾಂತರದಲ್ಲಿ ವಾರಾಹಿ ನದಿಯ ಪಾತ್ರ ಕಮ್ಮಿಯಾಯಿತು. ನದಿ ಪಾತ್ರದಲ್ಲಿ ಮಣ್ಣು ತುಂಬಿ ಒಂದು ಗ್ರಾಮ ರಚನೆಯಾಯಿತು.

ಬಳ್ಕೂರು ಎಂಬ ಪದವು ಬಳಕುವ+ಊರು–ಬಳ್ಕೂರು ಎಂದಾಗಿದೆ. ಇಲ್ಲಿ ಬಳಕು ಎಂದರೆ ತೊನೆದಾಡು, ಅಲ್ಲಾಡು, ಒಲೆದಾಡು ಎನ್ನುವ ಅರ್ಥ ನಿಘುಂಟಿನಲ್ಲಿದೆ(ಸಂಕ್ಷಿಪ್ತ ಕನ್ನಡ ನಿಘುಂಟು;೨೦೦೧;ಪುಟ:೮೯೬).'ಬಳುವುದು' ಎಂದರೆ ಕುಂದ್ರಾಪ ಕನ್ನಡದಲ್ಲಿ ತೇಲುವುದು ಎಂದರ್ಥವಾಗುವುದು. ಈ ಊರು ನೀರಿನ ಮೇಲೆ ತೇಲುತ್ತಿರುವುದರಿಂದ 'ಬಳ್ಕೂರು' ಎಂದಾಗಿದೆ.

೫. ಹಟ್ಟಿಕುದ್ರು :–ಹಟ್ಟಿ ಎನ್ನುವ ಪದ ಕೊಟ್ಟಿಗೆ ಎನ್ನುವ ಅರ್ಥದಲ್ಲಿ

ಬಳಕೆಯಾಗಿರಬೇಕು. ಹಿಂದೆ ಹಟ್ಟಿಕುದ್ರು ಎನ್ನುವ ಸ್ಥಳದಲ್ಲಿ ನೀಳವಾದ ದಷ್ಟಪುಷ್ಟವಾದ ಹುಲ್ಲುಗಳು ಬೆಳೆವ ಹುಲ್ಲುಗಾವಲಾಗಿತ್ತಂತೆ. ಬಸರೂರಿನ ರಾಜನ ಮತ್ತು ಊರಿನವರ ದನಗಳು ಅಲ್ಲಿಗೆ ಮೇಯಲು ಹೋಗುತ್ತಿದ್ದವು. ಸಂಜೆಯಾದರೂ ವಾಪಾಸ್ಸು ಬರಲು ಇಷ್ಟಪಡುತ್ತಿರಲ್ಲಿಲ್ಲ. ಇದನ್ನು ಗಮನಿಸಿದ ರಾಜನು ದನಗಳಿಗೆ ಅಲ್ಲಿ ಹಟ್ಟಿಕಟ್ಟಿಸಿದನು. ಆದುದರಿಂದ ಅದು ಹಟ್ಟಿಕುದ್ರು ಆಯಿತೆಂದು ಹೇಳುತ್ತಾರೆ.

ಇನ್ನೊಂದು ರೀತಿಯಲ್ಲಿಯೂ ಪಟ್ಟಿ ಎಂದರೆ ವ್ಯಾಪಾರ. ಪಟ್ಟಿಯ ಕುದ್ರು ಮುಂದೆ ಹಟ್ಟಿಕುದ್ರಾಗಿರಬಹುದು. ಇದು ಬಸರೂರು ಮಾಗಣೆಯ ಕಿರುಗ್ರಾಮ. ಪಟ್ಟಿ ಅಥವಾ ಹಟ್ಟಿ ಎಂದರೆ ಒಂದು ಕಿರುಗ್ರಾಮ. ಒಂದು ಗುಂಪಿನವರು ವಾಸಿಸುವ ಸ್ಥಳ, ಮನೆ, ಬೀಡು ಎಂಬ ಅರ್ಥವೂ ಇದೆ.

ಈ ಮೇಲಿನ ಊರುಗಳು, ಪ್ರದೇಶಗಳಲ್ಲದೆ ಇನ್ನು ಕೆಲವು ಜನವಸತಿ ಪ್ರದೇಶಗಳು ಬಸರೂರು ಮಾಗಣೆಯಲ್ಲಿದೆ. ಅವುಗಳಲ್ಲಿ ಮೇರ್ಡಿ, ಮೂಡ್ಲಕಟ್ಟೆಗಳು ಎಂಬ ಹೆಸರುಗಳಿಗೂ ಸಾಂಸ್ಕೃತಿಕ, ಜನಾಂಗೀಯ, ಧಾರ್ಮಿಕ ಮಹತ್ವವಿದೆ. ಮೇರರು ಎಂಬ ಜನಸಮುದಾಯದಿಂದಾಗಿ ಮೇರರಅಡಿ ಎಂಬುದು ಮೇರ್ಡಿಯಾಗಿದೆ. ಬಸರೂರಿನ ಪಶ್ಚಿಮಕ್ಕೆ ಮೂಡಲಕಟ್ಟೆ ಇದ್ದರು ಕೋಟೇಶ್ವರದ ಕೋಟಿಲಿಂಗನಿಗೆ ಪೂರ್ವಕ್ಕಿರುವ ಕೊನೆಯ ಕಟ್ಟೆ ಮೂಡ್ಲಕಟ್ಟೆಯಾಗಿದೆ.

**೨.೪ ಐತಿಹಾಸಿಕ ಹಿನ್ನೆಲೆ**

ಒಂದು ಪ್ರದೇಶವು ಪ್ರತಿಯೊಂದು ಕಾಲಘಟ್ಟದಲ್ಲಿ ಬೇರೆಬೇರೆ ಅರಸರುಗಳ, ರಾಜ್ಯಪಾಲರ, ದಾಳಿಕೋರರ ಪ್ರಭಾವಕ್ಕೆ ಒಳಗಾಗಿರುತ್ತದೆ. ಇವುಗಳನ್ನೇ ಪ್ರದೇಶವೊಂದರ ಐತಿಹಾಸಿಕಹಿನ್ನೆಲೆ ಎಂದು ಕರೆಯುವುದಾಗಿದೆ. ಪ್ರತಿಯೊಂದು ಪ್ರದೇಶಕ್ಕೆ ಒಂದಲ್ಲ ಒಂದು ಬಗೆಯ ಇತಿಹಾಸ ಇರುತ್ತದೆ.ಅದು ರಾಜ್ಯದ ಆಡಳಿತ ಕೇಂದ್ರವಾಗಿದ್ದಿರಬಹುದು. ಯುದ್ಧ ನಡೆದ ಸ್ಥಳವಾಗಿರಬಹುದು. ಒಂದು ರಾಜ್ಯದ ಪ್ರಮುಖ ವ್ಯಾಪಾರ ಕೇಂದ್ರವಾಗಿರಬಹುದು. ದೇವಸ್ಥಾನ, ದೇವಾಲಯ, ಬಸದಿಗಳಿಗೆ ದಾನ ಕೊಟ್ಟ ಭೂಮಿಯಾಗಿರಬಹುದು. ಇವುಗಳೆಲ್ಲಾ ಸಾಂಸ್ಕೃತಿಕ ಅಧ್ಯಯನದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಒಂದು ಪ್ರದೇಶದ ಇತಿಹಾಸವನ್ನು ತಿಳಿದುಕೊಳ್ಳದೇ ಯಾವುದೇ ಅಧ್ಯಯನವು ಅರ್ಥಪೂರ್ಣವಾಗಲಾರದು.

ಕ್ರಿ.ಶ. ೧–೨ ನೆಯ ಶತಮಾನದಿಂದಲೂ ಬಸರೂರಿನ ಪ್ರದೇಶದ ಬಗೆಗೆ ದಾಖಲೆಗಳಿವೆ. ಕ್ರಿ.ಶ. ೨ನೇ ಶತಮಾನದ ಸೀವೆಲನ ANTIQUARIAN REMAINS OF THE PRESIDENCY OF MADRAS ಎಂಬ ಗ್ರಂಥದಲ್ಲಿ ಬಸರೂರನ್ನು ಬಾರ್ಸಲೋರ್

ಎಂದು ಕರೆದಿದ್ದಾನೆ. ಕ್ರಿ.ಶ.೨ನೇ ಶತಮಾನದ ಹೊತ್ತಿಗೆ ಬಸರೂರು, ಅರೇಬಿಯಾ ಮತ್ತು ಐಗುಪ್ತ ದೇಶಗಳೊಡನೆ ಸಂಪರ್ಕವನ್ನು ಹೊಂದಿತ್ತು ಎಂದು ಗುರುರಾಜ ಭಟ್ ಪಾದೂರು ಅಭಿಪ್ರಾಯ ಪಡುತ್ತಾರೆ(ಗುರುರಾಜ ಭಟ್ ಪಾದೂರು;೧೯೭೭;ಪುಟ:೩). ಬಸರೂರಿನ ಪ್ರಾಚೀನತೆಯನ್ನು ಹುಡುಕುತ್ತ ಹೋದರೆ ನಮ್ಮನ್ನು ಪ್ರಾಗಿತಿಹಾಸ ಕಾಲದವರೆಗೂ ತಲುಪಿಸುವ ಅವಶೇಷಗಳು ಸಿಗುತ್ತದೆ ಎಂಬುದು ವಸಂತಶೆಟ್ಟಿ ಬಿ ಅವರ ಅಭಿಪ್ರಾಯವಾಗಿದೆ(ವಸಂತ ಶೆಟ್ಟಿಬಿ;೧೯೭೭;ಪುಟ:೨೧). ಹೀಗೆ ಕರ್ನಾಟಕದ ಇತಿಹಾಸದಲ್ಲಿ ಪ್ರಾಚೀನ ಕಾಲದಿಂದಲೂ ಬಸರೂರು ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದು, ನಾಡಿನ ಸಂಸ್ಕೃತಿಗೆ ಮಹತ್ತರ ಕಾಣಿಕೆಯನ್ನು ನೀಡಿರುವ ಸಂಗತಿ ವಿವಿಧ ರೀತಿಯ ಚಾರಿತ್ರಿಕ ಮಾಹಿತಿಗಳಿಂದ ತಿಳಿದುಬರುತ್ತದೆ.

ಕದಂಬ ವಂಶಸ್ಥಾಪಕ ಮಯೂರಶರ್ಮನು ಅಹಿಚ್ಛತ್ರದ ಬ್ರಾಹ್ಮಣರನ್ನು ತುಳುನಾಡಿನ ೩೨ ಗ್ರಾಮಗಳಲ್ಲಿ ನೆಲೆಸುವಂತೆ ಮಾಡಿದನು. ಈ ೩೨ ಗ್ರಾಮದಲ್ಲಿ ಬಸರೂರು ಮಾಗಣೆಯ ಕಂದಾವರ ಗ್ರಾಮವು ಒಂದು ಎಂದು ಪಾ.ನ.ಮಯ್ಯರು ಅಭಿಪ್ರಾಯ ಪಡುತ್ತಾರೆ (ಪಾ.ನ.ಮಯ್ಯ;೧೯೯೫;ಪುಟ:೫೫). ಕ್ರಿಶ ಆರಂಭದಲ್ಲಿಯೇ ಬಸರೂರು ಆಳುಪರ ಪ್ರಭಾವಕ್ಕೆ ಒಳಗಾಗಿತ್ತು. ಕವಿಆಳುಪೇಂದ್ರನ ಕಾಲದಲ್ಲಿ(ಕ್ರಿ.ಶ.೧೧೫೪) ಬಸರೂರು 'ಹೊಸಪಟ್ಟಣಬಸುರೆಪುರ' ಎಂದು ಕರೆಯಿಸಿಕೊಂಡಿತ್ತು. ಈತನ ನಂತರ ಅಳುಪರಾಜ ವೀರ ಕುಲಶೇಖರನು ಬಸರೂರಿನಲ್ಲಿ ಆಳ್ವಿಕೆ ನಡೆಸಿದನು. ಇವನ ಕಾಲದಲ್ಲಿ ಬಸರೂರಿನ ನಖರೇಶ್ವರ ಮತ್ತು ಆದಿನಾಥೇಶ್ವರನಿಗೆ ದಾನ ಮತ್ತು ದತ್ತಿ ನೀಡಿದ್ದನು. ಆಳೂಪರ ನಂತರ ಅಂದರೆ ಕ್ರಿ.ಶ.೧೨೨೦ ರ ತರುವಾಯ ಶಾಂತರ ವಂಶದ ಕುಂಡಣ, ಅಳುಪರ ೨ನೇ ದತ್ತಾಳುಪೇಂದ್ರ, ವೀರಪಾಂಡ್ಯ ಆಳುಪೇಂದ್ರ, ರಾಣಿ ಮಹಾದೇವಿ ಅವಳ ಮಗ ನಾಗದೇವರಸ ಬಸರೂರನ್ನು ಆಳ್ವಿಕೆ ನಡೆಸಿದ್ದರು. ಆನಂತರದಲ್ಲಿ ಹೊಯ್ಸಳ ಚಕ್ರವರ್ತಿ ೨ನೇ ಬಲ್ಲಾಳನ ಕಾಲದಲ್ಲಿ ಬಸರೂರು ಹೊಯ್ಸಳರ ವಶವಾಯಿತು. ಆ ಕಾಲದಲ್ಲಿ ಬಸರೂರು ಮತ್ತು ಹಟ್ಟಿಯಂಗಡಿ ಜೈನ ಕ್ಷೇತ್ರವಾಯಿತು. ಹೊಯ್ಸಳರ ನಂತರ ವಿಜಯನಗರದವರು ಆಡಳಿತಕ್ಕೆ ಬಂದರು. ಇಡೀ ತುಳುನಾಡು ವಿಜಯನಗರದವರ ವಶವಾಯಿತು. ತುಳುನಾಡು ಮಂಗಳೂರು ಮತ್ತು ಬಾರಕೂರು ಎಂಬ ಎರಡು ರಾಜ್ಯವಾಯಿತು. ಬಸರೂರು, ಬಾರಕೂರು ರಾಜ್ಯದ ರಾಜ್ಯಪಾಲರ ನೇರ ಆಡಳಿತಕ್ಕೆ ಒಳಪಟ್ಟಿತ್ತು.

ವಿಜಯ ನಗರದ ಚಕ್ರವರ್ತಿ ೨ನೇ ಹರಿಹರನ ಕಾಲದಲ್ಲಿ (ಕ್ರಿ.ಶ. ೧೩೭೭-೧೪೦೪)ಬಸರೂರು ಮತ್ತು ಶೃಂಗೇರಿಯ ಸಂಬಂಧವು ಉತ್ತಮವಾಗಿತ್ತು. ಬಸರೂರಿನಲ್ಲಿ ತುಳುವೇಶ್ವರ ದೇವಾಲಯದ ವಿಚಾರವು ತಿಳಿಯುತ್ತದೆ. ಅನಂತರದಲ್ಲಿ ಇಮ್ಮಡಿ

ದೇವರಾಯನು(ಕ್ರಿ.ಶ. ೧೪೨೩–೧೪೪೬)ಬಸರೂರನ್ನು ಆಳಿದ್ದು, ಈ ಅರಸನ ಕಾಲದಲ್ಲಿ ಬಸರೂರಿನ ದೇವಾಲಯಕ್ಕೆ ರುದ್ರಪೂಜೆ, ರಂಗಪೂಜೆ, ದೀಪಾವಳಿ ಹಬ್ಬ ಮುಂತಾದವುಗಳಿಗೆ ದತ್ತಿ ನೀಡಿದ ವಿಚಾರ ಬರುತ್ತದೆ. ಇದೇ ಕಾಲದಲ್ಲಿ ಬಸರೂರನ್ನು ಧರ್ಮಪಟ್ಟಣಎಂದು ಕರೆದಿರುವುದನ್ನು ಕಾಣಬಹುದು. ವಿಜಯನಗರದ ಮಲ್ಲಿಕಾರ್ಜುನ ಮಹಾರಾಯನ (ಕ್ರಿ.ಶ. ೧೪೪೬–೧೪೬೫)ಕಾಲದಲ್ಲಿ ಬಸರೂರಿನ ಮಾರಿಹಬ್ಬದ ತಯಾರಿ ವಿಚಾರವಿದೆ ಮತ್ತು ಇವನ ಕಾಲದ ಶಾಸನದಲ್ಲಿ ನಗರೇಶ್ವರ, ತುಳುವೇಶ್ವರ, ಬಸ್ತಿ, ದೇವಿದೇವಾಲಯಗಳನ್ನು ಹೆಸರಿಸಲಾಗಿದೆ. ಕ್ರಿ.ಶ. ೧೪೬೫–೧೪೮೫ ರವರೆಗೆ ಬಸರೂರನ್ನು ಆಳಿದ ಪ್ರೌಢಇಮ್ಮಡಿ ದೇವರಾಯ ಮತ್ತು ವಿರೂಪಾಕ್ಷ ಮಹಾರಾಯನ ಕಾಲದಲ್ಲಿ ಬಸರೂರಿನಲ್ಲಿ ಕಾಶಿ ವಿಶ್ವನಾಥನ ಲಿಂಗ ತಂದು ಪ್ರತಿಷ್ಠಾಪಿಸಿ ದೇವಾಲಯ ಕಟ್ಟಿದ ವಿಚಾರವಿದೆ. ಕ್ರಿ.ಶ.೧೪೮೫–೧೫೦೫ ರವೆಗೆ ಬಸರೂರನ್ನು ಭುಜಬಲ ನರಸಿಂಗದೇವ ಮಹಾರಾಯ ಆಳ್ವಿಕೆ ನಡೆಸಿದನು. ಇವನ ಕಾಲದ ಶಾಸನದಲ್ಲಿ ಬಸರೂರಿನ ಪಡುವಕೇರಿಯ ತಿರುಮಲದೇವರ ಪ್ರಸ್ತಾಪ ಮತ್ತು ದಿವಳಿಗೆ ಪೂಜೆಯನ್ನು ಹೆಸರಿಸಿದೆ. ಕ್ರಿ.ಶ. ೧೫೦೯–೧೫೨೯ರಿಂದ ವೀರಪ್ರತಾಪ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಶ್ರೀಲಕ್ಷ್ಮೀನಾರಾಯಣ ದೇವರಿಗೆ ಮಠ ಮತ್ತು ಪಡುವಕೇರಿಯ ನಖರೇಶ್ವರ ದೇವಾಲಯದ ಮಠದ ಪ್ರಸ್ತಾಪವಿದೆ. ಕ್ರಿ.ಶ. ೧೫೩೦ರಲ್ಲಿ ಬಸರೂರು ಅಚ್ಯುತರಾಯನ ಆಡಳಿತಕ್ಕೆ ಒಳಪಟ್ಟಿತ್ತು. ಆಕಾಲದಲ್ಲಿ ಗುಪ್ಪೆಸದಾನಂದ ಮಠದ ವಿಚಾರ ತಿಳಿಯುತ್ತದೆ. ಕ್ರಿ.ಶ. ೧೫೪೨ರಲ್ಲಿ ಬಸರೂರಿನ ಆಡಳಿತವನ್ನು ಸದಾಶಿವರಾಯನು ನೋಡಿಕೊಳ್ಳುತ್ತಿದ್ದನು.

ಬಸರೂರಿನಲ್ಲಿ ಸಿಕ್ಕಿದ ಶಾಸನಾಧಾರದಿಂದ ಕೆಳದಿನಾಯಕರ ಆಳ್ವಿಕೆ ಕ್ರಿ.ಶ. ೧೫೫೪ರಲ್ಲಿ ಬಸರೂರಿನಲ್ಲಿ ಆರಂಭವಾಯಿತು. ಇದು ಅಂತ್ಯವಾದದ್ದು ಕ್ರಿ.ಶ. ೧೭೬೩ ರಲ್ಲಿ. ಈ ಅವಧಿಯಲ್ಲಿ ಬಸರೂರಿನ ಅಧ್ಯಯನಕ್ಕೆ ಬೇಕಾದ ಐತಿಹಾಸಿಕ ಆಕರಗಳು, ಶಾಸನಗಳು, ಸ್ಥಳೀಯ ದಾಖಲೆಪತ್ರಗಳು, ವಿದೇಶಿ ದಾಖಲೆಪತ್ರಗಳು, ಅಧಿಕಾರಿಗಳ ದಿನಚರಿಗಳು, ವಿದೇಶಿ ಪ್ರವಾಸಿಗರು ಕಂಡು ವರ್ಣಿಸಿದ ಐತಿಹಾಸಿಕ ಘಟನೆ, ಭೌಗೋಳಿಕ ಪರಿಸರ, ಬಸರೂರಿನ ಬೆಳೆ,ನಗರ ಸೌಂದರ್ಯ ಮುಂತಾದವುಗಳನ್ನು ಕಾಣಬಹುದು.

ಕೆಳದಿನಾಯಕರ ಆಳ್ವಿಕೆಯು ಬಸರೂರು, ಕೋಟೇಶ್ವರ, ಕುಂಭಾಶಿ, ಶಂಕರನಾರಾಯಣ ಮತ್ತು ಕೊಲ್ಲೂರಿನಲ್ಲಿ ಕ್ರಿ.ಶ. ೧೫೫೪ರಲ್ಲಿ ಆರಂಭವಾಯಿತು. ಕೆಳದಿ ಸದಾಶಿವ ನಾಯಕನು ಕ್ರಿ.ಶ. ೧೫೫೪ರಲ್ಲಿ ವಿಜಯನಗರದ ಸದಾಶಿವ ರಾಯನ ನಿರೂಪದಂತೆ ಬಾರಕೂರು ತುಳುರಾಜ್ಯವನ್ನು ತನ್ನದಾಗಿ ಮಾಡಿಕೊಂಡನು. ಕೆಳದಿ ನಾಯಕರು ಕ್ರಿ.ಶ ೧೬೧೦ ವರೆಗೆ ಪರೋಕ್ಷ ಅಧಿಕಾರ ನಡೆಸಿದರು. ಕ್ರಿ.ಶ. ೧೫೯೮ರ ನಂತರ ಕೆಳದಿ ಅರಸರ ರಾಜಕೀಯ ಶಕ್ತಿ ಬಸರೂರಿನಲ್ಲಿ ಬಲಿಷ್ಟವಾಯಿತ್ತಲ್ಲದೆ ಪ್ರತ್ಯಕ್ಷ

ಆಡಳಿತವು ಪ್ರಾರಂಭವಾಯಿತು. ಇದರಿಂದಾಗಿ ಸ್ಥಳೀಯ ಅರಸು ಮನೆತನದವರಾದ ಹೊನ್ನೆಕಂಬಳಿ ಮತ್ತು ಸೂರಾಲಿನ ತೊಳಹಾರರ ರಾಜಕೀಯ ಶಕ್ತಿ ಅಂತ್ಯವಾಯಿತು. ಕ್ರಿಶ. ೧೬೩೦ರಲ್ಲಿ ಕೆಳದಿ ವೆಂಕಟಪ್ಪನ ಆಳ್ವಿಕೆ ಅಂತ್ಯಗೊಂಡಿತು. ಕ್ರಿಶ. ೧೬೫೩ರಲ್ಲಿ ಕೆಳದಿಯ ಶಿವಪ್ಪ ನಾಯಕನು ಬಸರೂರನ್ನು ಪೋರ್ಚುಗೀಸರಿಂದ ವಶಪಡಿಸಿಕೊಂಡನು. ಇವನ ಕಾಲದಲ್ಲಿ ಬಸರೂರು ಸಂಪತ್ಭರಿತವಾಗಿದ್ದಿತ್ತು ಮತ್ತು ದೇವಾಲಯದ ಆಚರಣೆಗಳನ್ನು ವ್ಯವಸ್ಥಿತವಾಗಿ ಸಾಗಲು ಆಜ್ಞೆ ಹೊರಡಿಸಿದ್ದನು. ಕ್ರಿಶ. ೧೬೩೦ರಲ್ಲಿ ಬಸರೂರಿನ ಮೇಲೆ ಶಿವಾಜಿಯ ದಾಳಿಯಾಯಿತು. ಅದೇ ಕಾಲಕ್ಕೆ ಬಸರೂರಿನ ಸಂಪತ್ತು ಕೊಳ್ಳೆಯಾಯಿತು. ಕೆಳದಿ ಅರಸರ ಕಾಲದಲ್ಲಿ ಬಸರೂರಿನಲ್ಲಿ ಬಂಡಸಾಲೆಗಳು ಆರಂಭವಾದವು. ಕೆಳದಿನಾಯಕರ ಕಾಲದಲ್ಲಿ ವೈದಿಕ ಮತ್ತು ವೈದಿಕೇತರ ಸ್ಥಳೀಯ ಧಾರ್ಮಿಕ ಪದ್ಧತಿಗಳಲ್ಲಿ ಹೊಂದಾಣಿಕೆಯಾಯಿತು. ಬಸರೂರು, ಕೊಲ್ಲೂರು, ಶಂಕರನಾರಾಯಣ, ಕೋಟೇಶ್ವರ, ಬಗ್ಗವಾಡಿಗಳು ಧಾರ್ಮಿಕ ಕೇಂದ್ರಗಳಾದವು. ಕೆಳದಿ ನಾಯಕರು ಪೋರ್ಚುಗೀಸರೊಂದಿಗೆ ವ್ಯವಹಾರ ನಡೆಸಿದರ ಪರಿಣಾಮವಾಗಿ ಕುಂದಾಪ್ರಕನ್ನಡಕ್ಕೆ ಗೋಯಿಕೋಡು,[೩೯] ಸೌಕಾರ, ಪರಂಗಿ,[೪೦] ಗೊಯಿಣ್ಣ ಮುಂತಾದ ಪದಗಳು ಸೇರಿಕೊಂಡವು"(ವಸಂತ ಮಾಧವ ಕೆ.ಜಿ;೧೯೯೪;ಪುಟ:೧೭-೧೮).

ಭಾರತದ ಇತಿಹಾಸದ ಸಂದರ್ಭದಲ್ಲಿ ಹಲವಾರು ಪ್ರದೇಶಗಳ ಹಾಗೂ ಜನಸಮುದಾಯದ ಕತೆಗಳು ಆವರಿಸಿಕೊಂಡಿರುವುದನ್ನು ನಾವು ಕಾಣುತ್ತೇವೆ.ಈ ಮಾತಿಗೆ ಬಸರೂರು ಹೊರತಲ್ಲ. ಒಂದು ಪ್ರದೇಶದಲ್ಲಿ ಜನಸಮುದಾಯ, ಜೀವನ ವಿಧಾನ, ವಿಭಿನ್ನವಾದ ಧರ್ಮ, ಧಾರ್ಮಿಕ ಅಚರಣೆ, ಭಾಷೆ ಹೇಗೆ ಬೆಳೆದು ಬಂದಿದೆ ಮತ್ತು ಯಾವ ಹಂತ ತಲುಪಿದೆ ಎನ್ನುವ ಮಹತ್ವದ ಅಂಶವನ್ನು ಅರಿಯಲು ಐತಿಹಾಸಿಕ ಹಿನ್ನೆಲೆ ಪ್ರಯೋಜನಕಾರಿಯಾಗುತ್ತವೆ. ವೈವಿಧ್ಯತೆಯಲ್ಲಿ ಏಕತೆ ಎನ್ನುವ ತತ್ವದ ಮೇಲೆ ರಚಿತವಾದ ನಮ್ಮ ದೇಶದ ಇತಿಹಾಸವು ಪ್ರಾದೇಶಿಕ ಇತಿಹಾಸದ ಬೆಳವಣಿಗೆಗೆ ಹೊಂದಿಕೊಂಡೆ ಬೆಳೆಯಬೇಕಾಗಿದೆ. ಪ್ರಾದೇಶಿಕ ಸಂಸ್ಕೃತಿಯ ಕುರಿತು ಮಾತನಾಡುವ ಸಂದರ್ಭದಲ್ಲಿ ಆಯಾ ಪ್ರದೇಶದ ವೈವಿಧ್ಯಪೂರ್ಣವಾದ ಐತಿಹಾಸಿಕ ಅಥವಾ ಚಾರಿತ್ರಿಕ ಹಿನ್ನೆಲೆಗೆ ಮಹತ್ವ ನೀಡುವುದರಿಂದ ಸಾಂಸ್ಕೃತಿಕ ಅಧ್ಯಯನವು ಹೆಚ್ಚು ಅರ್ಥವತ್ತಾಗುತ್ತದೆ.

### ೨.೫. ಜನಸಮುದಾಯ ಮತ್ತು ಭಾಷೆ

ಸಂಸ್ಕೃತಿ ಎಂಬುದು ವ್ಯಕ್ತಿಗತ ಸಮಾಜದ ಭಾಗವಾಗಿದೆ. ಸಮಾಜ ಸಂಸ್ಕೃತಿಯ ಒಂದು ಘಟಕವಾಗಿದೆ. ಈ ಅಂಶವೇ ಮಾನವ ಇತರ ಜೀವಿಗಳಿಗಿಂತ ಭಿನ್ನವಾಗಿ ಕಾಣುವಂತಾಗಿದೆ. ಮಾನವ ಸಂಘ ಜೀವಿಯಾಗಿದ್ದಾನೆ. ಹೀಗೆ ಮನುಷ್ಯ ಸಮಾಜ ಮತ್ತು ಸಂಸ್ಕೃತಿಗಳೆಲ್ಲವೂ ಒಂದಕ್ಕೊಂದು ಪರಸ್ಪರ ಸಂಬಂಧವನ್ನು ಹೊಂದಿದೆ. ಒಂದು

ಪ್ರದೇಶದ ಸಂಸ್ಕೃತಿಯೆಂದರೆ ಅಲ್ಲಿನ ಜನಸಮುದಾಯದ ಜೀವನ ಕ್ರಮದ ಒಟ್ಟು ಮೊತ್ತವಾಗಿದೆ. ಹರ್ಸ್ಕೋವಿಟ್(Herskovit)ಹೇಳುವಂತೆ, "ಜನರ ಜೀವನ ವಿಧಾನವೇ ಸಂಸ್ಕೃತಿಯಾಗಿದೆ".

ಮನುಷ್ಯ ಎಲ್ಲೆಲ್ಲಿ ಇದ್ದಾನೊ ಅಲ್ಲೆಲ್ಲಾ ಸಮಾಜಗಳಿವೆ ಮತ್ತು ಆ ಸಮಾಜದಲ್ಲಿ ಸಂಸ್ಕೃತಿಯು ಇದೆ. ಮನುಷ್ಯನ ಕ್ರಿಯೆಗಳೆ ಸಂಸ್ಕೃತಿಯ ವಿಕಾಸದ ದಿಕ್ಕನ್ನು ನಿರ್ಧರಿಸುತ್ತದೆ. ಸಂಸ್ಕೃತಿ ಎಂಬ ಪರಿಕಲ್ಪನೆಗೆ ಮೇಲು ಸಂಸ್ಕೃತಿ, ಕೀಳು ಸಂಸ್ಕೃತಿ ಎಂಬ ತಾರತಮ್ಯಗಳಿಲ್ಲ. ಬಸರೂರಿನ ಸಾಂಸ್ಕೃತಿಕ ಅಧ್ಯಯನದಲ್ಲಿ ವಿವಿಧ ಜನಸಮುದಾಯಗಳ ಜೀವನ ಸಂಸ್ಕೃತಿಯನ್ನು ವಿವೇಚನೆ ಮಾಡಲಾಗಿದೆ. ಈ ಜನಸಮುದಾಯಗಳು ಬಸರೂರಿನ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಕ್ಷೇತ್ರಕ್ಕೆ ತಮ್ಮದೆ ಆದ ಪ್ರಭಾವನ್ನು ಬೀರಿದ್ದಾರೆ. ಇಲ್ಲಿನ ಜನಸಮುದಾಯ ಮತ್ತು ಅವರ ಭಾಷೆಯ ಸ್ಥೂಲ ಪರಿಚಯ ಮಾಡಿಕೊಡುವುದು ಅಧ್ಯಯನದ ದೃಷ್ಟಿಯಿಂದ ಮಹತ್ವದ್ದಾಗಿದೆ.

**ಬ್ರಾಹ್ಮಣರು** :–ಬಸರೂರಿನಲ್ಲಿ ಸ್ಥಾನಿಕರು, ಹವಿಕರು, ಐಹಿಚ್ಛತ್ರದ ಬ್ರಾಹ್ಮಣರು[೪೧] ಸಕಲಪುರಿ, ಕರ್ನಾಟಕ, ತೆಲುಗ, ಖರಾಡ, ಚಿತ್ಪಾವನ ವರ್ಗಗಳಿವೆ. ಬಸರೂರಿನಲ್ಲಿರುವ ಕೋಟ ಮತ್ತು ಶಿವಳ್ಳಿ ಬ್ರಾಹ್ಮಣರು ಅಹಿಚ್ಛತ್ರದಿಂದ ಬಂದು ಕೋಟದಲ್ಲಿ ಮತ್ತು ಉಡುಪಿಯ ಶಿವಳ್ಳಿಯಲ್ಲಿ ನೆಲೆಸಿ ಅನಂತರ ಬಸರೂರಿಗೆ ಬಂದರು. ಬಸರೂರಿನಲ್ಲಿರುವ ಹವಿಕರು ಉತ್ತರಕನ್ನಡ ಜಿಲ್ಲೆಯಿಂದ ಬಂದವರು. ಖರಾಡ ಬ್ರಾಹ್ಮಣರು ಸತಾರದ ಸುತ್ತಮುತ್ತಲ ಪ್ರದೇಶದಿಂದ ಬಂದವರು. ಚಿತ್ಪಾವನರು ಮಹಾರಾಷ್ಟ್ರದ ರತ್ನಗಿರಿಯಿಂದ ಬಂದವರು. ಸಕಲಪುರಿ ಎಂಬುದು ಹವಿಕರ ಒಂದು ವಿಭಾಗವಾಗಿದೆ. ಬಸರೂರಿನ ಮೂಡುಕೆರೆ ಕೆರೆಕಟ್ಟೆ, ಪಡುಕೇರಿಅಗ್ರಹಾರ ಮತ್ತು ಕೆಳಅಗ್ರಹಾರಗಳು ಬ್ರಾಹ್ಮಣರು ವಾಸಿಸುವ ಪ್ರದೇಶವಾಗಿದೆ. ಮುಖ್ಯವಾಗಿ ಇವರು ಪೂಜೆ, ಆರಾಧನೆ, ಅಧ್ಯಾಪನ, ಜೋತಿಷ್ಯ ಮುಂತಾದ ಪಾರಂಪರಿಕ ಉದ್ಯೋಗ ಮಾಡುವವರು. ಬಸರೂರಿನಲ್ಲಿ ವಾಸವಾಗಿರುವ ಇವರು ಶಿವ, ವಿಷ್ಣು, ಆಂಜನೇಯ, ಸೂರ್ಯ, ಗಣಪತಿ, ದುರ್ಗಾ, ಜಟ್ಟಿಗ, ಮುಂತಾದ ದೇವರುಗಳನ್ನು ಆರಾಧಿಸುತ್ತಾರೆ. ಇವರೆಲ್ಲಾ ಬಸರೂರಿಗೆ ಬೇರೆಬೇರೆ ಪ್ರದೇಶದಿಂದ ಬಂದವರಾದರು ಕನ್ನಡದ ಉಪಭಾಷೆಯಾದ ಕನ್ನಡವನ್ನು ಮಾತನಾಡುತ್ತಾರೆ.

**ಬಂಟರು** :–ಬಸರೂರಿನ ಇತಿಹಾಸದಲ್ಲಿ ಹಲರು ಎಂಬ ಜನಸಮುದಾಯದ ಉಲ್ಲೇಖವಿದೆ.ಇವರನ್ನು ಹಲರು ಸೆಟ್ಟರು ಅಥವಾ ಬಂಟರು ಎಂದು ಹೇಳಲಾಗಿದೆ. ಬಂಟರ ಬಸರೂರಿನ ನಂಟನ್ನು ಶಾಸನಗಳು ಸ್ಪಷ್ಟಪಡಿಸುತ್ತದೆ. ಇಲ್ಲಿನ ಬಂಟರನ್ನು ನಾಡವರೆಂದು ಕರೆಯುತ್ತಾರೆ. "ಇವರು ಕನ್ನಡನಾಡಿನವರು. ಬೇಲೂರು,ಸಾಗರ ಮುಂತಾದ ಕಡೆಗಳಿಂದ ಬಂದು ಇಲ್ಲಿ ನೆಲೆಸಿದವರೆಂದು ಹೇಳುತ್ತಾರೆ. ಇವರಿಂದಾಗಿ ಈ ಪ್ರದೇಶದಲ್ಲಿ

ಕನ್ನಡಭಾಷೆ ಮನೆಮಾತಾಯಿತು"(ನಾಗೇಗೌಡ ಎಚ್.ಎಲ್;(ಸಂ:೨)೨೦೦೭;ಪುಟ:೨೬೪). ಬಸರೂರಿಗೆ ಸೇರಿದ ಕ್ರಿ.ಶ. ೧೪೪೨ ಮತ್ತು ಕ್ರಿ.ಶ. ೧೪೪೫ರ ಶಾಸನದಲ್ಲಿ ಸನಿಯಮ್ಮ ಸೆಟ್ಟಿಯ ಅಳಿಯ ಕೋಟಿಯಣ್ಣ ಸೆಟ್ಟಿ, ಸಂಕರ ಸೆಟ್ಟಿಯ ಮಗ ನಾರಾಯಣ ಸೆಟ್ಟಿಯ ಉಲ್ಲೇಖವಿದೆ. ಪ್ರಾಯಶಃ ಬಸರೂರಿನಲ್ಲಿ ಬಂಟರು ಇರುವಿಕೆಗೆಯ ಪ್ರಾಚೀನತೆಗೆ ಈ ಶಾಸನ ಆಧಾರವಾಗಿದೆ "ಉಡುಪಿಯಿಂದ ಉತ್ತರಕ್ಕೆ ಕುಂದಾಪುರದವರೆಗೆ ನೆಲೆಸಿರುವ ಬಂಟ/ನಾಡವರನ್ನು ೨೧ನೇಶತಮಾನದ ಹೊತ್ತಿಗೆ ಬಂಟರೆಂದು ಕರೆಯುವುದು ರೂಢಿಯಾಗುತ್ತಿದೆ"(ಇಂದಿರಾ ಹೆಗ್ಡೆ;೨೦೦೯;ಪುಟ:೪೫)ಎಂಬುದು ಇಂದಿರಾ ಹೆಗ್ಡೆಯವರ ಅಭಿಪ್ರಾಯವಾಗಿದೆ.

ಬಸರೂರಿನಲ್ಲಿ ಬಂಟಸಮುದಾಯಕ್ಕೆ ಸೇರಿದ ನಾಲ್ಕು ಮನೆಗಳಿವೆ. ಕೊಳ್ಕೆರೆ ಮನೆ, ಬಸರೂರು ಮನೆ, ಮೇರ್ಡಿಮನೆ, ಪಣ್ತರ ಮನೆ. ಕೊಳ್ಕೆರೆ ಮನೆಯವರು ಬಸರೂರಿನ ಮೊದಲ ಮನೆಯವರು. ಮಹಾಲಿಂಗೇಶ್ವರ ದೇವಾಲಯದಲ್ಲಿ ಮೊದಲನೇಯದಾಗಿ ಪ್ರಸಾದ ಪಡೆಯುವ ಹಕ್ಕು ಅವರಿಗಿದೆ. ಬಸರೂರಿನ ಬಂಟರು ಮೂಲತಃ ಜಮೀನ್ದಾರರು. ಕೆಲವರು ಕೃಷಿಯೊಡನೆ ಬಂಡಸಾಲೆ ಮಾಡಿಕೊಂಡು ವ್ಯಾಪಾರ ನಡೆಸುವವರು. ಇವರು ಕುಂದಾಪ್ರ ಕನ್ನಡವನ್ನು ಮಾತನಾಡುವ ಜನಸಮುದಾಯವಾಗಿದ್ದಾರೆ.

**ಬಿಲ್ಲವರು:**-ಬಸರೂರಿನ ಒಟ್ಟು ಜನಸಂಖ್ಯೆಯ ಶೇಕಡಾ ೨೫ ರಷ್ಟಿರುವ ಬಿಲ್ಲವರು ಬಸರೂರಿನ ನಾಲ್ಕು ಗ್ರಾಮಗಳಲ್ಲಿ ಮತ್ತು ಬಸರೂರಿನ ಒಂದು ಅಂಗವೆಂದು ಭಾವಿಸಲಾದ ಹಟ್ಟಿಕುದ್ರಿನಲ್ಲಿ ಹಂಚಿ ಹೋಗಿದ್ದಾರೆ. ಬಸರೂರಿನಲ್ಲಿ ಬಿಲ್ಲವರು, ಹಳೆಪೈದರು[೪೨] , ಪೂಜಾರರು ಮುಂತಾದ ಹೆಸರಿನಿಂದ ಕರೆಯುತ್ತಾರೆ. ಬಿಲ್ಲು ವಿದ್ಯೆಗಳಲ್ಲಿ ಪರಿಣತರಾದ ಇವರಿಗೆ ಬಿಲ್ಲವರೆಂದು ಹೆಸರು ಬಂತು. ಕೃಷಿಯೊಂದಿಗೆ ತೆಂಗು, ತಾಳೆಮರದಿಂದ ಕಳ್ಳು ತೆಗೆಯುವುದು ಇವರ ಮೂಲಕಸುಬು.

ಬಸರೂರಿನಲ್ಲಿ ಬಿಲ್ಲವರನ್ನು ಪೂಜಾರಿಯೆಂದೆ ಕರೆಯುವುದು ವಾಡಿಕೆ. ಗರಡಿ ಮತು ದೈವಸ್ಥಾನಗಳಲ್ಲಿ ಪೂಜೆಯ ಹಕ್ಕು ಪಡೆದಿರುವುದರಿಂದ ಪೂಜಾರಿಗಳು ಎಂದಾದರು. ಬಸರೂರಿನ ಬಿಲ್ಲವರು ಹೌಂದ್ರಾಯನ ವಾಲಗದ ಮೂಲಕ ಸುತ್ತಮುತ್ತಲಿನ ಮಾಗಣೆಯಲ್ಲಿ ಪ್ರಸಿದ್ಧಿ ಪಡೆದಿದ್ದಾರೆ. ಇವರು ತುಳಸಿಯ ಆರಾಧಕರು. ಬಿಲ್ಲವರು ಮೂಲತಃ ಆಂಧ್ರದಿಂದ ವಲಸೆ ಬಂದಿರಬೇಕೆಂದು ಸದಾಶಿವ ಕಲ್ಲೂರ್ ಕೂರಾಡಿ ಅಭಿಪ್ರಾಯ ಪಡುತ್ತಾರೆ (ಸದಾಶಿವ ಕಲ್ಲೂರ್ ಕೂರಾಡಿ;೨೦೦೭;ಪುಟ:೭೨). ಇವರು ಮಾತೃಭಾಷೆ ಕುಂದಾಪ್ರ ಕನ್ನಡವಾಗಿದೆ.

**ಬಳೆಗಾರಜೋಗಿಗಳು:**-ಬಸರೂರಿನ ಬಳೆಗಾರ ಜೋಗಿಗಳು ನಾಥಪಂಥದವರು. ಬಸರೂರಿನಲ್ಲಿ ನಾಥಪಂಥಕ್ಕೆ ರಾಜರಲ್ಲದೆ ಅಪಾರ ಮಾಂಡಳಿಕರು, ವ್ಯಾಪಾರಿಗಳು ಜಮೀನ್ದಾರರ ಪೋಷಣೆ ದೊರಕಿದೆ. ಕ್ರಿ.ಶ. ೧೫೩೧ಕ್ಕೆ ಸೇರುವ ಶಾಸನದಲ್ಲಿ ಅಂಬಾಲ

ಜೋಗಿಗೆ ಪೂಜೆ ಮಾಡಲು ದಾನಕೊಟ್ಟ ವಿಚಾರ ಒಳಗೊಂಡಿದೆ. ಕುಂದಾಪುರ ಸೀಮೆಯ ಬಸರೂರಿನ ಆಸುಪಾಸಿನಲ್ಲಿ ನಾಥಪಂಥಿಯ ಜೋಗಿಗಳು ೧೫ನೇ ಶತಮಾನದ ಹೊತ್ತಿಗೆ ಪ್ರಭಾವಶಾಲಿಗಳಾಗಿರಬೇಕು. ಬಸರೂರಿನ ಬಳೆಗಾರ ಜೋಗಿಗಳು ಹಲವರಿ ಮಠಕ್ಕೆ ನಡೆದುಕೊಳ್ಳುವವರು. ಇವರು ಬಳೆಗಾರರಾಗಿದ್ದು ಪಾರಂಪರಿಕವಾಗಿ ಬಳೆಯ ಮಾರಾಟಗಾರರು. ಬಸರೂರಿನ ಶ್ರೀದೇವಿಅಮ್ಮನವರ ಮತ್ತು ಭೈರವ ದೇವಸ್ಥಾನದ ಅರ್ಚಕರಿವರು. ಸುಮಾರು ೧೨ನೇ ಶತಮಾನದಿಂದಲೇ ಬಳೆಗಾರ ಜೋಗಿಗಳು ಬಸರೂರಿನಲ್ಲಿ ಇದ್ದ ಬಗ್ಗೆ ಶಾಸನ ಆಧಾರವಿದೆ[೪೩]. ಇವರು ಸ್ಥಳೀಯ ಭಾಷೆಯಾದ ಕುಂದಾಪ್ರಕನ್ನಡವನ್ನೆ ಮಾತನಾಡುತ್ತಾರೆ.

**ಚಪ್ಪೆಕಾರ ಬಂಡಾರಿ ನಾಯಕರು** :–ಮರಾಠ ಪ್ರಾಂತ್ಯದಿಂದ ಬಸರೂರಿಗೆ ವಲಸೆ ಬಂದಿರುವ ಈ ಸಮುದಾಯ ತಮ್ಮನ್ನು ಚಪ್ಪೆಕಾರ ನಾಯಕರೆಂದು ಕರೆದುಕೊಳ್ಳುತ್ತಾರೆ. ಇವರು ಮೊದಲು ಕೃಷಿಕೂಲಿ ಕಾರ್ಮಿಕರಾಗಿದ್ದು, ಅನಂತರದಲ್ಲಿ ಭೂ ಮಸೂದೆ ಕಾನೂನಿನ ಅನ್ವಯ ಕೃಷಿಕರಾದರು. ಇವರು ಮರಾಠಿ ಮಿಶ್ರಿತ ಕೊಂಕಣಿ ಮಾತನಾಡುವವರು, ಆದರೆ ಈಗ ಅವರು ಸ್ಥಳಿಯ ಭಾಷೆಯಾದ ಕುಂದಾಪ್ರ ಕನ್ನಡವನ್ನು ಮಾತನಾಡುತ್ತಾರೆ. ಇವರನ್ನು ಬಂಡಾರಿ ನಾಯಕರು ಎಂದು ಕೂಡಾ ಕರೆಯುತ್ತಾರೆ.

**ಗುಡಿಗಾರರು**:– ಬಸರೂರಿನ ಒಟ್ಟು ಜನಸಂಖ್ಯೆಯ ಶೇಕಡಾ ೫ರಷ್ಟು ಗುಡಿಗಾರರಿದ್ದಾರೆ. ಇವರು ಕುಶಲಕರ್ಮಿಗಳಾಗಿದ್ದು ಒಂದು ಕಾಲಕ್ಕೆ ಬಸರೂರಿನಲ್ಲಿ ಗುಡಿಗಾರರ ಕೇರಿ ಇದ್ದಿತ್ತು. ಮರದಿಂದ ದೈವದ ಉರು ತಯಾರಿಸುವುದು ಮತ್ತು ಬಣ್ಣ ಹಾಕುವುದು ಇವರು ಪರಂಪರಗತವಾಗಿ ಮಾಡಿಕೊಂಡು ಬಂದ ಉದ್ಯೋಗವಾಗಿದೆ. ಬಸರೂರಿನ ಗುಡಿಗಾರರು ಬಾಸಿಂಗ ತಯಾರಿಸುವುದರಲ್ಲಿಯೂ ನೈಪುಣ್ಯತೆಯನ್ನು ಹೊಂದಿದ್ದಾರೆ.ಬಸರೂರಿನ ಗುಡಿಗಾರರು ಕನ್ನಡ ಭಾಷೆಯನ್ನು ಮಾತನಾಡುವವರು.

**ಸೆಟ್ಟಿಕಾರರು** :–ಬಸರೂರಿನ ಶಾಸನಗಲ್ಲಿ ಉಲ್ಲೇಖವಿರುವ ಸೆಟ್ಟಿಕಾರರು ಬಸರೂರಿಗೆ ನೇಕಾರರಾಗಿ ಬಂದವರು. ಪದ್ಮಸಾಲಿಗಳು, ದೇವಾಂಗರು, ಸಾಲಿಯರು ಎಂಬುದಾಗಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಇವರ ಮೂಲವೃತ್ತಿ ನೇಯ್ಗೆ ಆಗಿದೆ. ಶೈವರಾಗಿರುವ ಇವರು ಶಿವನಒಕ್ಕಲು ತಾವೆಂದು ಕರೆಸಿಕೊಳ್ಳಲು ಹೆಮ್ಮೆ ಪಡುತ್ತಾರೆ. ಕ್ರಿ.ಶ. ೧೪೦೦ರ ಬಸರೂರಿನ ಶಾಸನವು ಸೆಟ್ಟಿಕಾರ ಮಾದಣ್ಣ ಸೆಟ್ಟಿಯೆನ್ನುವವನ ಹೆಸರನ್ನು ಪ್ರಸ್ತಾಪಿಸಿದೆ. ಬಸರೂರಿನ ಸೆಟ್ಟಿಕಾರರಿಗೆ ಬ್ರಹ್ಮಾವರದ ಸಾಲಿಕೇರಿಯ ಬ್ರಹ್ಮಲಿಂಗ, ವೀರಭದ್ರ ಮತ್ತು ಶ್ರೀಅಮ್ಮನವರು ಆರಾಧ್ಯ ದೈವವಾಗಿದೆ. ಇವರು ವಲಸಿಗರಾದರು ಕುಂದಾಪುರ ಕನ್ನಡವನ್ನು ಮಾತನಾಡುತ್ತಾರೆ.

**ಮೊಗವೀರರು** :–ಬಸರೂರು ಪ್ರದೇಶದಲ್ಲಿ ಒಟ್ಟು ಜನಸಂಖ್ಯೆಯ ಶೇಕಡಾ ೨೦ರಷ್ಟು

ಮೊಗವೀರರಿದ್ದಾರೆ. ಇವರನ್ನು ಮರಕಾಲರು, ಮೊಗೇರ,[೪೪] ಮುಟ್ಟಿನವರು ಮುಂತಾದ ಪರ್ಯಾಯ ಹೆಸರುಗಳಿಂದ ಕರೆಯುತ್ತಾರೆ. ಮೂಲತಃ ಹೊಳೆಬದಿಗಳಲ್ಲಿ ವಾಸಿಸುವ ಇವರು ಕಳು[೪೫] ದಾಟಿಸುವ ಮತ್ತು ಮೀನು ಹಿಡಿದು ಮಾರುವ ಉದ್ಯೋಗದವರು. ಬಸರೂರಿನಮಹಾಲಿಂಗೇಶ್ವರ ತೇರು ಕಟ್ಟುವವರು ಮೊಗವೀರರು. ಇವರು ಶುದ್ಧ ಕುಂದಾಪ್ರಕನ್ನಡ ಮಾತನಾಡುವವರು.

**ಮೇರರು:**–ಬಸರೂರು ಮಾಗಣೆಯ ಮೇರ್ಡಿ, ಜಪ್ತಿ, ಕೈಲಕೆರೆ, ಸುಬ್ಬನಕೆರೆ ಜಡ್ಡು ಮುಂತಾದ ಕಡೆಗಳಲ್ಲಿ ವಾಸಿಸುವ ಜನಸಮುದಾಯ. ಇವರು ಕನ್ನಡ ಉಪಭಾಷೆಯಾದ ಕುಂದಾಪ್ರಕನ್ನಡವನ್ನು ಮಾತನಾಡುತ್ತಾರೆ. ಮೇರರು ಕೃಷಿಕೂಲಿಕಾರರಾಗಿದ್ದವರು. ಇವರ ಕಾಡ್ಯನಾಟ ಅತ್ಯಂತ ಜನಪ್ರಿಯ ಧಾರ್ಮಿಕ ಆರಾಧನೆಯಾಗಿದೆ.

ಬಸರೂರಿನಲ್ಲಿ ಈ ಮೇಲಿನ ಪ್ರಮುಖ ವರ್ಗಗಳಲ್ಲದೆ ದೇವಾಡಿಗರು, ವಿಶ್ವಕರ್ಮರು, ಶೇರಿಗಾರರು, ಮಡಿವಾಳರು, ಕ್ಷೌರಿಕರು, ಕೊಂಕಣಖಾರ್ವಿಗಳು, ಮುಸಲ್ಮಾನರು, ಕ್ರಿಶ್ಚಿಯನ್ನರು ಬೇರೆ ಬೇರೆ ಪ್ರದೇಶಗಳಲ್ಲಿ ಹರಡಿಕೊಂಡಿದ್ದಾರೆ. ಅಲ್ಲದೆ ಒಂದು ಕಾಲಕ್ಕೆ ಬಸರೂರಿನಲ್ಲಿ ಹಲರು, ಹಂಜಮಾನರು, ನಖರರು ಎಂಬ ಜನಸಮುದಾಯ ಇದ್ದಿತ್ತು. ಈಗ ಆ ಜನಸಮುದಾಯ ಅಲ್ಲಿಲ್ಲ. ಬಸರೂರಿನ ರೇವು ಮಹತ್ವವನ್ನು ಕಳೆದುಕೊಂಡ ಅನಂತರದಲ್ಲಿ ಈ ಜನಸಮುದಾಯಗಳು ನೆಲೆಯನ್ನು ಕಳೆದುಕೊಂಡವು. ಬಸರೂರಿನಲ್ಲಿ ಈಗ ಕೇರಳದವರು ಕೂಡಾ ನೆಲೆಸಿದ್ದಾರೆ.

ಬಸರೂರಿನಲ್ಲಿ ವಾಸವಾಗಿರುವ ವಿವಿಧ ಜಾತಿಗಳಲ್ಲಿ ಶ್ರೇಣಿಕೃತ ವ್ಯವಸ್ಥೆಯಿದೆ. ಎಲ್ಲಾ ಪ್ರದೇಶಗಳಲ್ಲಿ ಇದ್ದಂತೆ ಬ್ರಾಹ್ಮಣರು ಸಾಮಾಜಿಕ ಶ್ರೇಣಿಯ ಮೇಲ್ ಸ್ತರದಲ್ಲಿದ್ದರೆ, ಕೊರಗರು ಕೆಳಸ್ತರದಲ್ಲಿದ್ದಾರೆ. ಈ ಅಧ್ಯಾಯದಲ್ಲಿ ಬಸರೂರಿನ ಜನಸಮುದಾಯ ಮತ್ತು ಭಾಷೆ ಎಂಬ ಉಪಶೀರ್ಷಿಕೆಯಡಿಯಲ್ಲಿ, ಬಸರೂರಿನ ಸಾಂಸ್ಕೃತಿಕ ಅಧ್ಯಯನದಲ್ಲಿ ಪ್ರಮುಖ ಪಾತ್ರವಹಿಸುವ ಜನಸಮುದಾಯಗಳನ್ನು ಸ್ಥೂಲವಾಗಿ ಪರಿಚಯ ಮಾಡಿಕೊಡಲಾಗಿದೆ.

ಈ ಅಧ್ಯಾಯದಲ್ಲಿ ಬಸರೂರು ಎಂಬ ಪದವು ಜಲಜನ್ಯವಾದುದು.ಅದು ಒಸರಿನಿಂದ ಹುಟ್ಟಿದೆ ಎಂಬುದು ಖಚಿತವಾಗುತ್ತದೆ. ಬಸರೂರಿನ ಅಂತರ್ ಭೌಗೋಳಿಕ ಸನ್ನಿವೇಶವು ಬಸರೂರಿನ ಧಾರ್ಮಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಗೆ ಕಾರಣವಾಗಿದೆ. ಬಸರೂರು ಅರಸೊತ್ತಿಗೆಯ ಅವಧಿಯಲ್ಲಿ ಧಾರ್ಮಿಕವಾಗಿ ಉಚ್ಛ್ರಾಯ ಸ್ಥಿತಿಯಲ್ಲಿತ್ತು ಮತ್ತು ಇಲ್ಲಿನ ಜನಸಮುದಾಯ ಬಸರೂರಿನ ಸಂಸ್ಕೃತಿಯನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದರು ಎಂಬುದು ತಿಳಿದು ಬರುತ್ತದೆ.

## ಕೊನೆಟಿಪ್ಪಣಿ

೧. ಭತ್ತವನ್ನು ಕುಟ್ಟಿ ಅಕ್ಕಿ ಮಾಡಿ ಅದು ಕೆಡದಂತೆ ಭತ್ತದ ಹುಲ್ಲಿನಿಂದ ಮಾಡುವ ಕಲಾತ್ಮಕ ಸಂಗ್ರಹ ಕಣಜ. ಇದಕ್ಕೆ ಅಕ್ಕಿಮಾನಿಗೆ ಎಂದು ಹೆಸರು.

೨. ಕೇರಿಗಳು:-ಮಂಡಿಕೇರಿ, ರಾವುತಕೇರಿ, ಬಸದಿಕೇರಿ, ಮೂಡುಕೇರಿ, ಗುಡಿಗಾರಕೇರಿ, ಸಾಲಿಗರಕೇರಿ, ವಿಲಾಸಕೇರಿ.

೩. ಪಿಯೆತ್ರೊ ದೆಲ್ಲಾ ವಲ್ಲೆ-ಮೇಲು ಬರ್ಸೆಲೋರನ್ನು ನಾನು ಒಂದು ಕಡೆಯಿಂದ ಪ್ರವೇಶಿಸಿದೆ. ಹೆಚ್ಚು ಉದ್ದಗಲವುಳ್ಳ ನೇರವು ಸುಂದರವೂ ಆದ ಬೀದಿಯಲ್ಲಿ ನಡೆದೆ. ಎರಡು ಬದಿಗಳಲ್ಲೂ ಲೆಕ್ಕವಿಲ್ಲದಷ್ಟು ತೆಂಗಿನಮರಗಳು ಮತ್ತು ತೋಟಗಳು. ಊರು ಜನಭರಿತವಾಗಿದೆ (ನಾಗೇಗೌಡ ಎಚ್.ಎಲ್;೨೦೦೭; ಪುಟ:೨೪೩).

೪. ಒಮಜ್, ಎಡನ್, ಮಾಲ್ಡೀವ್, ಚೀನ, ಅರಬ್ ರಾಷ್ಟ್ರ.

೫. ಬಣಸಾಲೇ ಆಥವಾ ಬಂಡಸಾಲೇ ಮನೆಗಳ ವಿವರಕ್ಕೆ, ಜನಪದವಾಸ್ತು ಅಧ್ಯಾಯ ನೋಡಿ.

೬ ಮಂಡಿ ಎಂದರೆ ವ್ಯಾಪಾರ ವ್ಯವಹಾರ ನಡೆಯುವ ಸ್ಥಳ.

೭. ಬಾಗಿಲನ್ನು ನಿಲ್ಲಿಸುವ ತಿರುಗಣೆ.

೮. ಬಸ್ತಿಕೇರಿಯೆಂದರೆ ಬಸದಿಕೇರಿ ಎಂದರ್ಥ.

೯. ಈ ಕಟ್ಟೆಯಲ್ಲಿ ಬಸರೂರು ಹಬ್ಬದ ಸಮಯದಲ್ಲಿ ಕಟ್ಟೆ ವಸಂತ ನಡೆಯುತ್ತದೆ.

೧೦. ದೊಟ್ಟೆಕಾಲು ಚಿಕ್ಕು ಬಾವಿಗೆ ಹಾರಿ ಪ್ರಾಣ ಬಿಟ್ಟು ದೈವಗಳಾದವರು. ದೊಟ್ಟೆಯೆಂದರೆ ಬಾವಿಯಿಂದ ನೀರನ್ನು ಮೇಲಕ್ಕೆತ್ತುವ ಸಾಧನ. ದೊಟ್ಟೆಕಾಲು ಎಂಬುದು ಬಾವಿಯನ್ನೆ ಪ್ರತಿನಿಧಿಸುವ ಶಬ್ಧವಾಗಿದೆ.

೧೧. ತುಳುವೇಶ್ವರ ದೇವಾಲಯವನ್ನು ತುಳುವ ವಂಶದ ರಾಜರು ವಿಜಯನಗರದ ಸಿಂಹಾಸನ ರೂಢರಾದಾಗ ಕಟ್ಟಸಿರಬಹುದೆಂಬ ನಂಬಿಕೆಯಿದೆ. ತುಳುಅಕ್ಕ ಹೆಗ್ಗಡತಿ ದಾನ ನೀಡಿದ್ದಾಳೆ. ಈ ತುಳು ಅಕ್ಕ ತುಳುನಾಡಿನವಳು.

೧೨. ಈ ಗಂಗೆ ಗೌರಿ ಗಂಟಿಕಲ್ಲು ಹಸುಗಳಿಗೆ ನೀರುಣಿಸುವ ಮತ್ತು ಮೈಉಜ್ಜುವ ಕಲ್ಲು. ಹಸುಗಳ ಬಾಯಾರಿಕೆ ನೀಗಿಸಲು ವರ್ಷವಿಡಿ ಇಲ್ಲಿ ನೀರು ತುಂಬಿಸುತ್ತಿದ್ದರು.

೧೩. ಕೆರೆಯಲ್ಲಿ ದೋಣಿಯನ್ನು ಸಂಗಡ ಕಟ್ಟಿ ದೇವರನ್ನು ಮೆರವಣಿಗೆ ಮಾಡುವುದು.

೧೪. ಈಗಿನ ಕುಂದಾಪುರ.

೧೫. ಬಸರೂರು ಪ್ರದೇಶ.

೧೬. ಬಾರ್ಬೋಸ.

೧೭. ಬಸರೂರಿನ ಪರ್ತಕಾಳಿ ಗೋಕರ್ಣ ಮಠದ ಸಮೀಪ ಈ ಕದರುಕಟ್ಟೆಯಿದೆ. ಬಸರೂರಿನ ಕದಿರು ಹಬ್ಬದ ದಿನ ದೇವರ ಕದಿರು ಪಡೆಯಲು ಮೇಲಾಟ ನಡೆಯುವ ಸ್ಥಳ.

೧೮. ನಾಥ ಪಂಥದ ಯೋಗಿಗಳು ಈ ಮಠದ ಮನೆಯಲ್ಲಿ ಮೊಕ್ಕಂ ಹೂಡುತ್ತಿದ್ದರು.

೧೯. ಬಸರೂರಿನ ಮಹಾಲಿಂಗೇಶ್ವರನು ಉತ್ಸವದ ಸಂದರ್ಭದಲ್ಲಿ ವಿಶ್ರಾಂತಿ ಪಡೆಯುವ ಸ್ಥಳ.

೨೦. ಬಸರೂರು ಒಕುಳಿ ಮುಗಿದು ರಾತ್ರಿ ನಗರೋತ್ಸವ ನಡೆದು ಕೊನೆಗೆ ಮಹಾಲಿಂಗೇಶ್ವರ ಅಗಸ್ತ್ಯತೀರ್ಥದಲ್ಲಿ ಸ್ನಾನ ಮಾಡುತ್ತಾನೆ. ದೇವರು ಸ್ನಾನ ಮಾಡುವ ಕಟ್ಟೆಯೇ ಅವಭೃತ ಸ್ನಾನದ ಕಟ್ಟೆ.

೨೧. ನವರಾತ್ರಿಯ ಕೊನೆಯ ದಿನ ವಿಜಯದಶಮಿ. ಆ ದಿನ ಮಹಾಲಿಂಗೇಶ್ವರನು ತೊಪ್ಪಲು ಕಟ್ಟೆಗೆ ಹೋಗಿ ತಂಗುತ್ತಾನೆ. ಅಲ್ಲಿ ಬನ್ನಿ ಮರದ ಪೂಜೆ ನಡೆಯುತ್ತದೆ. ಇದು ವಿಜಯ ನಗರದ ಆಡಳಿತದ ಪ್ರಭಾವವನ್ನು ತಿಳಿಸುತ್ತದೆ.

೨೨. ಬಸರೂರಿನ ಶಾಸನದಲ್ಲಿ ಹಲರು ಎಂಬ ಸಮಾಜದ ಉಲ್ಲೇಖವಿದ್ದು ಅವರನ್ನು ಬಂಟರು ಎಂದು ನಂಬಲಾಗಿದೆ. ಬಂಟರು ಮೂಲತಃ ಕೃಷಿಕರಾಗಿದ್ದು ಹಲ ಅಥವಾ ನೇಗಿಲು ಅವರ ಜೀವನಾಧಾರ. ಸಾಂಪ್ರದಾಯಿಕವಾಗಿ ಇವರು ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಹೊಂದಿದ್ದು ಆಸ್ತಿಯ ಹಕ್ಕನ್ನು ಮಹಿಳೆಯೇ ಪಡೆದಿರುತ್ತಾಳೆ. ಇವರು ಪಟ್ಟದ ಸೆಟ್ಟಿ ಎಂಬ ಹೆಸರಿನಿಂದ ಓಕುಳಿ ನಡೆಸಿಕೊಡುತ್ತಾರೆ. ಈಗ ಅವರನ್ನು ಹಲವರಿ ಸೆಟ್ಟಿ ಎಂದು ಕರೆಯುತ್ತಾರೆ. ಗುರುರಾಜ ಭಟ್ಟರು ಹಲರನ್ನು ಜೈನಧರ್ಮದವರು ಎಂದು ಗುರುತಿಸುತ್ತಾರೆ. ಹಲರು ಪದ ಬಸರೂರಿನ ಮಟ್ಟಿಗೆ ನಾಡವರಿಗೆ ಹೆಚ್ಚು ಅನ್ವಯಿಸುತ್ತದೆ.

೨೩. ಮಧ್ಯಯುಗೀನ ತುಳುರಾಜ್ಯದ ಇತಿಹಾಸದಲ್ಲಿ ಹಂಜಮಾನ್ ಎಂಬುದು ವ್ಯಾಪಾರಿ ಗುಂಪು. ಮದ್ರಾಸ್ ಎಫಿಗ್ರಾಫಿ ರಿಪೋರ್ಟ್‌ನಲ್ಲಿ ಬಸರೂರಿನ ಹಂಜಮಾನರನ್ನು ತಮಿಳು ಶಾಸನದಲ್ಲಿ ದೊರಕುವ 'Anjuvannattar' ಎಂಬ ಪದಕ್ಕೆ ಸಾಮಿಪ್ಯ ಕಲ್ಪಿಸಿದ್ದಾರೆ. ಇವರು ತಮಿಳು ಮತ್ತು ತೆಲುಗಿನಲ್ಲಿ ಕಾಣುವ ಪಂಚವರ್ಣದವರು ಕರಕುಶಲ ಕರ್ಮಿಗಳು ಎಂದು ಹೇಳಲಾಗುತ್ತದೆ. ಬಿ.ಎ.ಸಾಲೆತ್ತೂರರ ಅಭಿಪ್ರಾಯದಲ್ಲಿ ಹಂಜಮಾನರು ಪಾರ್ಸಿ ಪಂಗಡವಾಗಿದ್ದು ಇವರು ಪಂಚವರ್ಣದವರೆಂದು ಕರೆಯುವ ವೃತ್ತಿ ಆಧಾರಿತ ಕುಶಲ ಕರ್ಮಿಗಳು. ಮುಖ್ಯವಾಗಿ ಅಕ್ಕಸಾಲಿ, ಕಂಬಾರ, ಬಡಗಿ, ಕಂಚುಗಾರ, ಶಿಲ್ಪಿ.

೨೪. ಅಲಾದಿ ಹಬ್ಬ ಅಥವಾ ಪಳ್ಳಿ ಹಬ್ಬ. ಇದು ಬಸರೂರಿನ ಮುಸ್ಲಿಮರ ಹಬ್ಬವಾಗಿದೆ. ಮಹಾಲಿಂಗೇಶ್ವರ ದೇವಸ್ಥಾನದ ಪಶ್ಚಿಮ ಭಾಗದ ಬೀದಿಯಲ್ಲಿ ಒಂದು ಬೆಂಚಿನ ಮೇಲೆ ದೇವರ ಹಸ್ತವೆಂದು ಹೇಳಲಾಗುವ ಬೆಳ್ಳಿಯ ಹಸ್ತವನ್ನು ಕೋಲಿಗೆ ಕಟ್ಟಿ ಎಂಟು ದಿನಗಳು ಅದರ ಮುಂದೆ ಬೆಂಕಿಹೊಂಡ ಮಾಡಿ ಹುಲಿ, ಕರಡಿ, ಸಿದ್ದಿಬಾಯಿ ಇತ್ಯಾದಿ ವೇಷಗಳನ್ನು ಹಾಕಿಕೊಂಡು ಜಾತಿ ಭೇದ ಮರೆತು ಈ ಹಬ್ಬ ಆಚರಿಸುತ್ತಾರೆ. ಹಬ್ಬಕ್ಕೆ ಬಂದವರಿಗೆ ಸಕ್ಕರೆಯನ್ನು ಪ್ರಸಾದದ ರೂಪದಲ್ಲಿ ನೀಡುತ್ತಿದ್ದರು. ಕೊನೆಗೆ ಮಾದನಕೆರೆಗೆ (ಚಿಲುಮೆಕೆರೆ) ಹೋಗಿ ಸ್ನಾನ ಮಾಡಿ ಹಬ್ಬವನ್ನು ಮುಗಿಸುತ್ತಿದ್ದರು. ಈಗ ಹಬ್ಬ ನಡೆಯುತ್ತಿಲ್ಲ.

೨೫. ವ್ಯಕ್ತಿ ಸತ್ತನಂತರ ಅವನ ಹೆಣವನ್ನು ಸುಡುವ ಕ್ರಮವಿದೆ. ಅನಂತರದಲ್ಲಿ ಅವನ ದೇಹದ ಮೂಳೆಯ ತುಂಡನ್ನು ಸಂಗ್ರಹಿಸಿ ಇಟ್ಟು ನಂತರ ಪವಿತ್ರ ಸ್ಥಳದಲ್ಲಿ ನೀರಿನಲ್ಲಿ ವಿಸರ್ಜಿಸುವುದನ್ನೆ ಅಸ್ತಿ

ಬಿಡುವುದು ಎನ್ನುವುದಾಗಿದೆ.

೨೬. ಸಹ್ಯಾದ್ರಿಯ ಪೂರ್ವಕ್ಕೆ ಪಶ್ಚಿಮದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮೈದಾನವಿದೆ. ಇಲ್ಲಿ ಶುಕ್ತಿಮತಿ (ಗಂಗೊಳ್ಳಿ ಹೊಳೆ)ಸೀತಾನದಿ..........ಮುಂತಾದ ನದಿಗಳು ಬಯಲು ಸೀಮೆಯಿಂದ ಹರಿದು ಬರುತ್ತವೆ (ಗಣಪತಿ ರಾವ್ ಐಗಳ;೨೦೦೪;ಪುಟ:೧).

೨೭. ಮೊದಲು ಈ ಊರಿಗೆ ಶುಕ್ತಿಮತಿಯೆಂಬ ಹೆಸರಿತ್ತು ಎಂದು ಬಸರೂರಿನ ಮಹಾಲಿಂಗೇಶ್ವರದ ಸಂಕಲ್ಪ ಮಂತ್ರದಿಂದ ತಿಳಿಯುತ್ತದೆ. (ನಾಗೇಗೌಡ ಎಚ್.ಎಲ್;೨೦೦೭;ಪುಟ:೨೩೪)
ಬಸಲೋರ ೧೩ನೇ ಶತಮಾನದಲ್ಲಿ ಆಲೂಪವಂಶದ ವಿಭುಧ ವಸು ಎಂಬ ಚಕ್ರವರ್ತಿ ಆಳುತ್ತಿರುವುದರಿಂದ ಇದು ಅವನ ರಾಜಧಾನಿಯಾಗಿದ್ದುದರಿಂದ ಈ ಊರಿಗೆ ವಸುಪುರ. ಕಾಲಕ್ರಮೇಣ ಬಸುಪುರ, ಬಸಲೂರು, ಬಸರೂರು ಆಯಿತೆಂದು ಹೇಳಲಾಗಿದೆ.

೨೮. ಸಪ್ತ ಕ್ಷೇತ್ರಗಳಲ್ಲಿ ಒಂದು. ಇದು ಬಸರೂರಿನ ಸಮೀಪದಲ್ಲಿದೆ.

೨೯. ಕುಂದಾಪುರವು ಕುಂದವರ್ಮ ಎಂಬ ತುಂಡರಸನ ಆಧಿಪತ್ಯಕ್ಕೆ ಸೇರಿತ್ತು. ಕುಂದೇಶ್ವರ ಇವನ ಮನೆದೇವರು. ಕುಂದೇಶ್ವರನಿಂದ ಈ ಊರಿಗೆ ಕುಂದಾಪುರವೆಂದಾಯಿತು.(ನರಸಿಂಹಮೂರ್ತಿಎಚ್.ವಿ; ಶ್ರೀ ಕುಂದೇಶ್ವರ;೨೦೦೯;ಪುಟ:೨)

೩೦. ಬಸರಿ ಮರ ಮಧ್ಯಮ ಪ್ರಮಾಣದ ಪರ್ಣಜಾತಿ ಮರ. ಹರಡಿದ ಹಂದರ ಸಾಕಷ್ಟು ಬಿಳಲು, ಪಟಲದಂತಹ ಎಲೆಗಳು ಒಣದ್ರಾಕ್ಷಿಗಾತ್ರದ ದುಂಡನೆಯ ತೊಟ್ಟಿಲ್ಲದ ಹಣ್ಣು ಒಳತೊಗಟೆ ಗಟ್ಟಿ ಮತ್ತು ನಾರು. ಆನೆಗಳಿಗೆ ಪ್ರಿಯವಾಗಿದೆ.

೩೧. ಬರ್ಸಯೆಂದರೆ ತುಳುವಿನಲ್ಲಿ ಮಳೆ ಎಂದರ್ಥ.

೩೨. ಹಾಡುಹಳ್ಳಿ ಸಂಗೀತಪುರವಾಗಿದೆ. ಹೋರ್ ಬಬ್ಬರ್ಯ ಮಹಿಷ ಬಬ್ಬರ್ಯನಾಗಿದ್ದಾನೆ. ಪಂಜುರ್ಲಿ ವರಾಹಮೂರ್ತಿಯಾಗಿದೆ.

೩೩. ಪೋರ್ಚುಗೀಸ್ ಪ್ರವಾಸಿ ಪಿಯೆತ್ರೊ ದೆಲ್ಲಾವಲ್ಲೆ.

೩೪. ಬಸರೂರಿನ ಬಂಗ್ಲೆಗುಡ್ಡೆಯಲ್ಲಿ ಪ್ರಾಗೈತಿಹಾಸಿಕ ಅವಶೇಷಗಳು ಸಿಕ್ಕಿವೆ.

೩೫. ರಾಜ್ಯ ಪ್ರಶಸ್ತಿ ವಿಜೇತ ಶಿಲ್ಪಿ ಗುಪ್ಪೆ ಗೋಪಾಲ ಆಚಾರ್ಯರ ಹೇಳಿಕೆ.

೩೬. ದೇವರಕೆರೆ (ಚಂದ್ರಪುಷ್ಕರಣಿ), ಮೂಡುಕೆರೆ (ಅಗಸ್ತ್ಯತೀರ್ಥ) ಚಿಲುಮೆಕೆರೆ, ಹಲರಕೆರೆ, ಗದ್ದೆಮನೆಕೆರೆ, ಪಳ್ಳಿಕೆರೆ, ಮಠದ ಕೆರೆ.

೩೭. ಮುಟ್ಟುಗೋಲು ಹಾಕಿಕೊಳ್ಳುವುದು.

೩೮. ಮಯೂರ ಶರ್ಮನು ಅಹಿಚ್ಛತ್ರದಿಂದ ಬ್ರಾಹ್ಮಣರನ್ನು ಅಬ್ರಾಹ್ಮಣ್ಯವಿರುವ ತುಳುನಾಡು ಮತ್ತಿತ್ತರ ಪ್ರದೇಶಗಳಿಗೆ ತಂದು ೩೨ ಗ್ರಾಮಗಳಲ್ಲಿ ನೆಲೆಸುವಂತೆ ಮಾಡಿದನು. ಆ ೩೨ ಗ್ರಾಮಗಳಲ್ಲಿ ಒಂದು ಗ್ರಾಮ ಕಂದಾವರ.

೩೯. ಮೆಣಸಿನ ಕಾಯಿ–ಗೋವಾದ ಮೂಲಕ ಪೋರ್ಚುಗೀಸರು ತಂದ ಕಾರಣದಿಂದ ಗೊಯಿಕೊಡು.

೪೦. ಪೋರ್ಚುಗೀಸರ ಫಿರಂಗಿ ಜೊತೆಗೆ ಈ ಹಣ್ಣು ಬಂದಿರುವುದರಿಂದ ಫರಂಗಿ ಹಣ್ಣು ಎಂದಾಯಿತು. (ಅನಾಸಸು)

೪೧. ಶಿವಳ್ಳಿ ಮತ್ತು ಕೋಟಾ.

೪೨. ಹಳೆಪೈದರು, ಎಂಬ ಪದ ಹಳೆ+ಬೈದ್ಯ–ಹಳೆಪೈದ್ಯ ಎಂದು ಆಗಿರಬಹುದು. ಬೈದ್ಯ ಎಂಬುದು ಬಿಲ್ಲವ ಎಂದರ್ಥ. ಆದರೆ ಪಾ.ನ ಮಯ್ಯರ ಅಭಿಪ್ರಾಯದಲ್ಲಿ ಹಳೇಪಾಯ್ದಳ–ಹಳೇಪೈದ–ಹಳೇಪೈಕ ಎಂದಾಯಿತು. ಪಾಯ್ದಳ ಎಂದರೆ ಕಾಲಾಳು ಎಂದರ್ಥ ಎಂದಿದ್ದಾರೆ.

೪೩. ಕ್ರಿ.ಶ ೧೨ನೇ ಶತಮಾನದಕ್ಕೂ ಮೊದಲೇ ನಾಥಪಂಥವು ಬಸರೂರಿನಲ್ಲಿ ಇದ್ದಿತ್ತು. ಆ ಕಾಲಕ್ಕೆ ಸೇರಿದ ಒಂದು ಶಾಸನ ಮೌನಯೋಗಿ ಎನ್ನುವನನ್ನು ಹೆಸರಿಸಿದೆ. ಮತ್ತೊಂದು ಶಾಸನ ನಂದಿನಾಥ ಮತ್ತು ಭೃಂಗಿನಾಥ ಎನ್ನುವ ವ್ಯಕ್ತಿಗಳನ್ನು ಹೆಸರಿಸಿದೆ.

೪೪. ಮೊಗೇರ ಎಂಬ ರೂಪ ಮೊಗ+ಆರ್–ಮೊಗಾರ್–ಮೊಗೇರ ಎಂದು ಸಾಧಿತವಾಗಿದೆ. ಇಲ್ಲಿ ಆರ್ ಎಂದರೆ ನೀರು ಎಂದರ್ಥ. ನೀರಿಗೆ ಎದುರಾಗಿ ವಾಸಿಸುವವರು. ಇವರು ಮುಟ್ಟಿನವರು ಮದುವೆ ಪಲ್ಲಕ್ಕಿ, ಮಂಚಲು ಹೊರುವವರು, ರಥಕಟ್ಟುವವರು.

೪೫. ಹೊಳೆಯ ಒಂದು ದಡದಿಂದ ಇನ್ನೊಂದು ದಡಕ್ಕೆ ಜನರನ್ನು, ಸಾಮಾನುಗಳನ್ನು ದೋಣಿಯಲ್ಲಿ ಸಾಗಿಸುವವರು. ಬಸರೂರಿನ ಗರಡಿಯಲ್ಲಿ ಕಳಿನ ಚಿಕ್ಕ ಎಂಬ ದೈವವಿದೆ.

★★★

# ಅಧ್ಯಾಯ ಮೂರು

# ಶಾಸನಗಳಲ್ಲಿ ಸಂಸ್ಕೃತಿ

"ಕರ್ನಾಟಕದ ಸಾಂಸ್ಕೃತಿಕ ಇತಿಹಾಸದ ರಚನೆಗೆ ನೆರವಾಗುವ ಆಕರ ಸಾಮಾಗ್ರಿಗಳಲ್ಲಿ ಶಾಸನಗಳು ಮುಖ್ಯವಾದವು. ಇವುಗಳು ನಮ್ಮ ಹಿರಿಯರ ಜೀವನ ಶೈಲಿಗೆ ಸಾಕ್ಷಿಯಾಗಿ ಹಳ್ಳಿ ಹಳ್ಳಿಗಳಲ್ಲಿ ಹೇರಳವಾಗಿ ಸಿಗುತ್ತದೆ" (ಪರಶಿವಮೂರ್ತಿ ಡಿ.ವಿ ;೧೯೯೯;ಪುಟ:೧). ಇತಿಹಾಸದ ಪ್ರಮಾಣಭೂತವಾದ ಪುನರ್‌ನಿರ್ಮಾಣಕ್ಕೆ ಇರುವ ಅತಿ ಪ್ರಮುಖವಾದ ಆಧಾರಗಳೆಂದರೆ ಶಾಸನಗಳು. ಸಾಹಿತ್ಯ, ಕಲಾಕೃತಿ, ನಾಣ್ಯಗಳು, ವಿದೇಶಿ ಪ್ರವಾಸಿಗರ ವರದಿ ಇವೆಲ್ಲವೂ ಸಹಾಯಕವಾದರೂ, ಕರ್ನಾಟಕದ ರಾಜಕೀಯ ಮತ್ತು ಸಾಮಾಜಿಕ[೧] ಪರಂಪರೆ ತಿಳಿಯುವಂತಾದುದು ಮುಖ್ಯವಾಗಿ ಶಾಸನಗಳಿಂದಲೇ (ತಿಪ್ಪೆರುದ್ರಸ್ವಾಮಿ ಎಚ್;೨೦೧೧;ಪುಟ೨೨೦). ಶಾಸನಗಳ ಸಮಗ್ರ ಮತ್ತು ಸೂಕ್ಷ್ಮ ಅಧ್ಯಯನದಿಂದ ಒಂದು ಪ್ರದೇಶದ ಭೌಗೋಳಿಕ, ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ವಿಚಾರಗಳನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಪ್ರಾದೇಶಿಕ ಅಧ್ಯಯನಕ್ಕೆ ಬೇರೆಲ್ಲ ಆಕರ ಸಾಮಾಗ್ರಿಗಳಿಗಿಂತ ಶಾಸನಪಠ್ಯವು ನಿಖರ ಮತ್ತು ವಸ್ತುನಿಷ್ಠ ಮಾಹಿತಿಯನ್ನು ಒದಗಿಸಿಕೊಡುತ್ತದೆ[೨].

ಹಿಂದಿನ ತಲೆಮಾರಿನ ಸಂಶೋಧಕರು ತಮ್ಮ ಅಧ್ಯಯನಗಳಲ್ಲಿ ಶಾಸನಗಳನ್ನು ವಿಪುಲವಾಗಿ ಬಳಸಿಕೊಂಡಿರುವುದನ್ನು ಕಾಣಬಹುದು. ಈ ಮೂಲಕ ಒಂದು ಪ್ರದೇಶದ ರಾಜಕೀಯ ಇತಿಹಾಸವನ್ನು ಕಟ್ಟಿಕೊಟ್ಟಿದ್ದಾರೆ. ಈ ಬಗೆಯ ಅಧ್ಯಯನದಿಂದಾಗಿ ಒಂದು ನಾಡಿನ ಇತಿಹಾಸವೆಂದರೆ ರಾಜಮಹಾರಾಜರ ಕತೆ ಎಂಬ ಪರಿಸ್ಥಿತಿ ನಿರ್ಮಾಣವಾಯಿತು. ನಾಡೆಂದರೆ ರಾಜಮಹಾರಾಜರು ಮಾತ್ರ ಅಲ್ಲ, ಅಲ್ಲಿ ಬಹುಸಂಖ್ಯಾತರು ಸಾಮಾನ್ಯ ಜನಸಮುದಾಯ, ಅವರಿಗೊಂದು ಜೀವನ ಕ್ರಮವಿದೆ, ರಾಜ್ಯದ ಏಳಿಗೆಯಲ್ಲಿ ಅವರ ಪಾತ್ರವಿದೆ ಎಂಬುದನ್ನು ಅನಂತರದ ಸಂಶೋಧಕರು ಕಂಡುಕೊಂಡರು. "ನಾಡೆಂದರೆ

ಅದನ್ನು ಆಳಿದ ರಾಜರು ಅಲ್ಲ. ಅಲ್ಲಿ ಬದುಕಿದ ಜನ. ಹೀಗೆ ಬದುಕಿದ ಜನರ ಗಣನೀಯ ಭಾಗವೇ ಆ ನಾಡನ್ನಾಳುವ ರಾಜಸಮೂಹ. ಒಂದು ದೇಶದ ನಿಜವಾದ ಇತಿಹಾಸವೆಂದರೆ ಜನತೆಯ ಇತಿಹಾಸ" (ಚಿದಾನಂದಮೂರ್ತಿ ಎಂ;೨೦೦೮;ಪುಟ:೧).

ಸುಬ್ಬಣ್ಣರೈಯವರು 'ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು' ಎಂಬ ಪ್ರಬಂಧದಲ್ಲಿ "ಇತಿಹಾಸವನ್ನು ನಾವು ಸಾಂಸ್ಕೃತಿಕ ಇತಿಹಾಸ, ಧಾರ್ಮಿಕ ಇತಿಹಾಸ, ಸಾಮಾಜಿಕ ಇತಿಹಾಸ, ರಾಜಕೀಯ ಇತಿಹಾಸ ಎಂಬುದಾಗಿ ವಿಂಗಡಿಸಿಕೊಳ್ಳಬಹುದು. ಆದರೆ ನಾವಿಂದು ಕಾಣುವ ಇತಿಹಾಸದಲ್ಲಿ ಹಿಂದಿನ ಕಾಲದ ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ, ರಾಜಕೀಯ ಹಾಗೂ ಆರ್ಥಿಕ ವ್ಯವಸ್ಥೆಗಳು ಅಡಕವಾಗಿರುತ್ತದೆ" ಎಂದಿದ್ದಾರೆ (ಸುಬ್ಬಣ್ಣ ರೈ.ಎ;೧೯೯೪;ಪುಟ:೮೩). ಒಂದು ಪ್ರದೇಶದ ಇತಿಹಾಸವೆಂದರೆ ಆ ಪ್ರದೇಶದ ಜನರ ಸಂಸ್ಕೃತಿ ಎಂಬರ್ಥವನ್ನು ಸೂಚಿಸಿದ್ದಾರೆ.

ಶಾಸನಗಳನ್ನು ಸ್ಥೂಲವಾಗಿ ಅಧ್ಯಯನ ಮಾಡುವುದರಿಂದ ಒಂದು ಪ್ರದೇಶದ ರಾಜಕೀಯ ಇತಿಹಾಸವನ್ನು ಮಾತ್ರ ಪರಿಚಯ ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಒಂದು ಪ್ರದೇಶದ ಸಾಂಸ್ಕೃತಿಕ ಇತಿಹಾಸವನ್ನು ತಿಳಿದುಕೊಳ್ಳಲು ಶಾಸನಪಠ್ಯದ ಸೂಕ್ಷ್ಮಾವಲೋಕನ ಅವಶ್ಯಕ. "ಪ್ರದೇಶವೊಂದರ ಸಾಂಸ್ಕೃತಿಕ ಅಧ್ಯಯನಕ್ಕೆ ವೈವಿಧ್ಯಮಯ ಆಕರಗಳು ಲಭ್ಯವಾಗುತ್ತದೆ. ಶಾಸನಗಳು, ನಾಣ್ಯಗಳು, ದೇವಾಲಯದ ವಾಸ್ತುಶಿಲ್ಪ, ಜಾನಪದ ಕಲಾಪ್ರಕಾರ, ಆರಾಧನೆ, ನಂಬಿಕೆ, ಆಚರಣೆ, ಮೌಖಿಕಸಾಹಿತ್ಯ, ವಿದೇಶಿ ಪ್ರವಾಸಿಗರ ಬರೆಹಗಳಿದ್ದರೂ ನಂಬಲಾರ್ಹ ಉತ್ಪ್ರೇಕ್ಷೆರಹಿತವಾದ ಮಾಹಿತಿಯನ್ನು ಒದಗಿಸುವುದು ಶಾಸನಗಳು" (ಶೈಲಾ.ಟಿ.ವರ್ಮಾ:೨೦೦೨;ಪುಟ:೧).

ಕಳೆದ ದಶಕಗಳಿಂದ ಇತಿಹಾಸವನ್ನು ನೋಡುವ ದೃಷ್ಟಿಯಲ್ಲಿ ಗಮನಾರ್ಹವಾದ ಬದಲಾವಣೆಯನ್ನು ಪಡೆಯುತ್ತ ಬಂದಿದೆ. ಇತಿಹಾಸದ ಆಕರವನ್ನು ಹೊಸರೀತಿಯಲ್ಲಿ ನೋಡುವ ದೃಷ್ಟಿ ಬೆಳೆದಿದೆ. ರಾಜಕೀಯ ಚರಿತ್ರೆಯ ಅಧ್ಯಯನ ಮಾರ್ಗವನ್ನು ಬಿಟ್ಟು ಸಾಂಸ್ಕೃತಿಕ ಇತಿಹಾಸದ ಮಾರ್ಗವನ್ನು ಹಿಡಿದಿದ್ದಾರೆ. ಜನರ ದಿನನಿತ್ಯದ ಬದುಕನ್ನು ಅವರ ಸಂಪ್ರದಾಯ, ಆಚರಣೆ, ಆರಾಧನೆ, ಮನೆಯವಿನ್ಯಾಸ ಮುಂತಾದ ವಿಚಾರಗಳನ್ನು ಅಧ್ಯಯನ ಮಾಡತೊಡಗಿದ್ದಾರೆ. ಇದರಿಂದಾಗಿ ಇತಿಹಾಸವು ಜನಾನುಮತವನ್ನು ಪಡೆದುಕೊಳ್ಳಲು ಸಾಧ್ಯವಾಯಿತು. ಈವರೆಗೆ ಐತಿಹಾಸಿಕ ಆಕರಗಳಾಗಿದ್ದ ಶಾಸನಗಳಲ್ಲಿ ಜನಸಂಸ್ಕೃತಿಯನ್ನು ಹುಡುಕತೊಡಗಿದರು. ಈವರೆಗೂ ಪರಿಚಯ ಆಗದ ನಾಡಿನ ಜನಪದರ ನಾಡಿಯಾಗಿದ್ದ ಜನಪದ ಸಂಸ್ಕೃತಿ ಅನಾವರಣಗೊಳ್ಳಲಾರಂಭಿಸಿತು.

ಶಾಸನಗಳನ್ನು ನೆಡುವ ಪದ್ದತಿ ಮಾನವ ಸಂಸ್ಕೃತಿಯ ನೆಲೆಯಲ್ಲಿಯೆ ಮೂಡಿಬಂದಿರುವುದರಿಂದ ಅನೇಕ ಸಾಂಸ್ಕೃತಿಕ ವಿವರಗಳು ಲಭ್ಯವಾಗುತ್ತದೆ. ಜನತೆ

ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದಕಲೆ, ಜೀವನ ಸಮಸ್ಯೆಗಳು, ಜೀವನ ಮೌಲ್ಯಗಳು ಮುಂತಾದ ಸಾಂಸ್ಕೃತಿಕ, ಧಾರ್ಮಿಕ ವಿವರಗಳನ್ನು ತಿಳಿದುಕೊಳ್ಳಲು ಮಾಧ್ಯಮವಾಗುವುದು.

"ಶಾಸನಗಳು ಗತಕಾಲದ ಮಾನವ ರಚಿತ ದಾಖಲೆಗಳು. ಒಂದು ನಿರ್ದಿಷ್ಟ ಘಟನೆಯನ್ನು ದಾಖಲಿಸುವುದಷ್ಟೆ ಅದರ ಗುರಿ. ಮೊದಮೊದಲು ಈ ಉದ್ದೇಶಕ್ಕಷ್ಟೆ ಸೀಮಿತವಾಗಿದ್ದ ಶಾಸನಗಳು ಕ್ರಮೇಣ ಬೆಳೆಯುತ್ತ ನಮ್ಮ ಪೂರ್ವಿಕರ ಒಲವು-ನಿಲುವುಗಳನ್ನು ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ಮುಖಗಳನ್ನು ಪರಿಚಯಿಸತೊಡಗಿತು. ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದ ಪುನಾರಚನೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಲಾರಂಭಿಸಿತು. ಸಾಂಸ್ಕೃತಿಕ ಅಧ್ಯಯನದ ಕುರಿತು ಬೇರೆ ಬೇರೆ ಆಕರಗಳು ಇಲ್ಲದಿರುವಾಗ ಶಾಸನಗಳಲ್ಲಿನ ಒಂದೊಂದು ಅಕ್ಷರವು ಇತಿಹಾಸದ ರಚನೆಯಲ್ಲಿ ಮಹತ್ವದ ಪಾತ್ರವಹಿಸಬಲ್ಲದು"[೩] (ವಸಂತ ಶೆಟ್ಟಿ ಬಿ;೧೯೯೮;ಪುಟ:೧). "ಶಾಸನದಲ್ಲಿನ ಜನ ಸಂಸ್ಕೃತಿಯನ್ನು ಅರಿಯಬೇಕಾದರೆ ಅವುಗಳ ಆಂತರಿಕ ಸ್ವರೂಪದ ಕಡೆಗೆ ಹೆಚ್ಚು ಗಮನವನ್ನು ಕೊಡಬೇಕಾಗುತ್ತದೆ. ಈ ರೀತಿಯ ಸೂಕ್ಷ್ಮ ಗ್ರಹಿಕೆಯಿಂದ ಶಾಸನಗಳ ಎರಡು ಪ್ರಮುಖ ವೈವಿಧ್ಯ ಬೆಳಕಿಗೆ ಬರುತ್ತದೆ. ಒಂದು ದಾನ ದೃಷ್ಟಿಯಿಂದ ಪ್ರೇರಿತ ಶಾಸನ ಮತ್ತೊಂದು ವೀರ ದೃಷ್ಟಿ. ಧರ್ಮ ಮತ್ತು ವೀರ ಶಾಸನ ಸಂಸ್ಕೃತಿಯ ಕಣ್ಣುಗಳು" (ತಿಪ್ಪೇರುದ್ರಸ್ವಾಮಿ; ೨೦೧೧;ಪುಟ:೨೪೧).

ಬಸರೂರು ಶಾಸನಕಾಲಕ್ಕಿಂತಲೂ ಹಿಂದಿನ ಪ್ರಾಚೀನತೆಯನ್ನು ಹೊಂದಿದೆ. "ಬಸರೂರಿನ ಪ್ರಾಚೀನತೆಯನ್ನು ಹುಡುಕುತ್ತಾ ಹೋದರೆ ಪ್ರಾಗಿತಿಹಾಸ ಕಾಲದವರೆಗೆ ತಲುಪಿಸುವ ಅವಶೇಷಗಳು ಬಸರೂರಿನಲ್ಲಿ ಸಿಗುತ್ತದೆ. ಇಲ್ಲಿ ಬಂಗ್ಲೆಗುಡ್ಡೆಯ ಬದಿಯಲ್ಲಿ ಬಂಡೆಕಲ್ಲುಗಳ ಮೇಲೆ ಕಂಡುಬರುವ ಚನ್ನೆಮಣೆಯಂತಹ ರಚನೆಗಳು ಬೇರೆಡೆಯ ಪ್ರಾಗೈತಿಹಾಸಿಕ ನಿವೇಶನದಲ್ಲಿ ದೊರೆತಿವೆ" (ವಸಂತ ಶೆಟ್ಟಿ ಬಿ;೧೯೯೧;ಪುಟ:೭೧೪). ಕ್ರಿಶಕದ ಆದಿಯಲ್ಲಿ ಪಾಶ್ಚಾತ್ಯರಿಗೆ ವ್ಯಾಪಾರ ಕೇಂದ್ರವಾಗಿ ಪರಿಚಿತವಾಗಿದ್ದ ಬಸರೂರು ಮುಂದಿನ ಕೆಲವು ಶತಮಾನಗಳಲ್ಲಿ ರಾಜಕೀಯ ಮತ್ತು ಸಾಂಸ್ಕೃತಿಕ ಮಹತ್ವವನ್ನು ಪಡೆಯಿತು. ಕ್ರಿಶ ೧೨ನೇ ಶತಮಾನದ ಆಳುಪ ಅರಸರಿಂದ ೧೭ನೇ ಶತಮಾನದ ಕೆಳದಿನಾಯಕರ ಆಡಳಿತ ಅವಧಿಗೆ ಸಂಬಂಧಪಟ್ಟ ಶಾಸನಗಳು ಬಸರೂರಿನಲ್ಲಿ ಲಭ್ಯವಾಗಿದೆ. ಈ ಶಾಸನಗಳ ಅಧ್ಯಯನದ ಮೂಲಕ ಬಸರೂರಿಗೊಂದು ಹೊಸ ಸಾಂಸ್ಕೃತಿಕ ಆಯಾಮವನ್ನು ಒದಗಿಸಬಹುದು.

"ಕುಂದನಾಡಿನ ಇತಿಹಾಸ ಸಂಶೋಧನೆಗೆ ವಿಪುಲ ಅವಕಾಶಗಳಿವೆ. ಹಿಂದೆಂದಿಗಿಂತಲೂ ಇದರ ಅಧ್ಯಯನ ಮಹತ್ವವನ್ನು ಪಡೆದಿದೆ. ಇಲ್ಲಿ ಗಮನಿಸಬೇಕಾದ

ಪ್ರಮುಖ ಕೇಂದ್ರವೆಂದರೆ ಹಟ್ಟಿಯಂಗಡಿ, ಬಸರೂರು, ರಟ್ಟಾಡಿ, ಅಮಾಸೆಬ್ಬೈಲು, ಹಳ್ಳಿಹೊಳೆ, ಸಿದ್ಧಾಪುರ, ಕೊಲ್ಲೂರು, ಗಂಗನಾಡು....... (ನರಸಿಂಹಮೂರ್ತಿ ಪಿ.ಎನ್;೨೦೦೭;ಪುಟ:೬೨). ಹಟ್ಟಿಯಂಗಡಿ, ಬಸರೂರುಗಳು ಕ್ರಿಸ್ತ ವರ್ಷಾರಂಭಕ್ಕೂ ಮೊದಲಿನಿಂದಲೂ ಇದ್ದ ವ್ಯಾಪಾರ ವಾಣಿಜ್ಯ ಚಟುವಟಿಕೆಗಳಿಂದ ಕೂಡಿದ ಬಂದರು ನಗರಗಳಾಗಿದ್ದವು. ಇಲ್ಲಿಂದ ವ್ಯಾಪಾರವಹಿವಾಟುಗಳನ್ನು ನಿರ್ವಹಿಸುತ್ತಿದ್ದ ವ್ಯಾಪಾರಿ ಸಂಘಗಳು ಬಸರೂರಿನ ಸಾಂಸ್ಕೃತಿಕ ಶ್ರೀಮಂತಿಕೆಗೆ ಕೊಡುಗೆ ನೀಡಿರುವುದನ್ನು ಗಮನಿಸಬಹುದಾಗಿದೆ. ದೇವಾಲಯ, ದೈವಸ್ಥಾನ, ಬಸದಿಗಳ ಧಾರ್ಮಿಕ ಚಟುವಟಿಕೆಗಳು ಸಮರ್ಪಕವಾಗಿ, ಧರ್ಮಕ್ಕೆ ಚ್ಯುತಿಬಾರದಂತೆ ನೆಡೆಸಿಕೊಂಡುಹೋಗಲು ದಾನ ನೀಡಿದ ವಿವರಗಳು ಶಾಸನಗಳಲ್ಲಿವೆ. ಇವುಗಳ ಅಧ್ಯಯನದಿಂದ ಬಸರೂರಿನ ಸಾಂಸ್ಕೃತಿಕ ಶ್ರೀಮಂತಿಕೆಯು ಹೊರ ಜಗತ್ತಿಗೆ ಪರಿಚಯವಾದಂತಾಗುತ್ತದೆ. ಬಸರೂರಿನಲ್ಲಿ ದೊರಕಿದ ಐವತ್ತಕ್ಕೂ ಹೆಚ್ಚು ದಾನಶಾಸನಗಳನ್ನು ಗಮನಿಸಿದರೆ ಬಸರೂರಿನ ಆಡಳಿತಾಧಿಕಾರಿಗಳು, ಮಹಿಳೆಯರು, ವರ್ತಕರು, ಜನಸಾಮಾನ್ಯರು ಬಸರೂರಿನ ಧಾರ್ಮಿಕ ಬೆಳವಣಿಗೆಯಲ್ಲಿ ವಹಿಸಿದ ಪಾತ್ರ ತಿಳಿಯುತ್ತದೆ. "ಧರ್ಮ ಎಂಬುದು ಸಂಸ್ಕೃತಿಯಲ್ಲಿ ಸಮಾವೇಶಗೊಳ್ಳುವುದರಿಂದ ಧಾರ್ಮಿಕ ವ್ಯವಸ್ಥೆಯನ್ನು ಸಾಂಸ್ಕೃತಿಕ ವ್ಯವಸ್ಥೆಯೊಳಗೆ ಅಧ್ಯಯನ ಮಾಡಬಹುದು" (ಸುಬ್ಬಣ್ಣರೈ.ಎ;೧೯೯೪;ಪುಟ:೮೨).

ಬಸರೂರಿನಲ್ಲಿ ದೊರಕಿದ ದಾನಶಾಸನಗಳ ಅಧ್ಯಯನ ಕೈಗೊಳ್ಳುವುದರಿಂದ ಬಸರೂರಿನ ಸಂಸ್ಕೃತಿಯ ಸ್ವರೂಪವನ್ನು, ಶ್ರೀಮಂತಿಕೆಯನ್ನು ಅರ್ಥಮಾಡಿಕೊಳ್ಳಬಹುದು. ಇಲ್ಲಿ ದೊರಕಿದ ದಾನಶಾಸನ, ನ್ಯಾಯಪಂಚಾಯಿತಿಗೆ ಸಂಬಂಧಿಸಿದ ಶಾಸನ, ದಂಡತೆತ್ತಶಾಸನ, ಜೊತೆಗೆ ಮಾಸ್ತಿಕಲ್ಲು, ಬಸರೂರಿನ ಜನರ ಜೀವನಕ್ರಮ, ನಂಬಿಕೆ, ಆರಾಧನೆ, ಆಚರಣೆ, ಬಳಿಕಟ್ಟು, ಮಾತೃವಂಶಿಯತೆ, ಅಳಿಯಕಟ್ಟು, ಸಾಮಾಜಿಕ ಸ್ಥಾನಮಾನ ಮುಂತಾದ ಸಾಂಸ್ಕೃತಿಕಾಂಶಗಳ ಮೇಲೆ ಬೆಳಕು ಚೆಲ್ಲುತ್ತದೆ. ಬಸರೂರಿನ ಶಾಸನಗಳು ಆ ಪ್ರದೇಶದ ಸಂಸ್ಕೃತಿಯ ಕೈಗನ್ನಡಿಗಳಾಗಿವೆ.

ಬಸರೂರಿನಲ್ಲಿ ದೊರೆತ ಶಾಸನಗಳ ಕುರಿತು ಈವರೆಗೂ ಪೂರ್ಣಪ್ರಮಾಣದ ಅಧ್ಯಯನ ನಡೆದಿಲ್ಲ. ಅನೇಕ ವಿದ್ವಾಂಸರು, ಇತಿಹಾಸಕಾರರು ಶಾಸನಗಳನ್ನು ಪತ್ತೆ ಹಚ್ಚಿ ಅದರ ಪ್ರತಿ ಮಾಡುವಲ್ಲಿ ವಿಶೇಷ ಆಸಕ್ತಿತೋರಿದ್ದಾರೆ. ಬಸರೂರಿನ ಶಾಸನಗಳನ್ನು ಆಧರಿಸಿ ಸಂಶೋಧನ ಶಿಸ್ತನ್ನು ಅಳವಡಿಸಿಕೊಂಡು ಸಂಸ್ಕೃತಿ ಅಧ್ಯಯನ ಕೈಗೊಂಡಿಲ್ಲ. ಈ ಅಧ್ಯಾಯದಲ್ಲಿ ಬಸರೂರಿನಲ್ಲಿ ಲಭ್ಯವಾಗಿದ್ದ ಶಾಸನಗಳನ್ನು ಗಮನಿಸಲಾಗಿದೆ ಮತ್ತು ಅವುಗಳಲ್ಲಿ ಕಂಡುಬರುವ ಸಾಂಸ್ಕೃತಿಕ ಪದಗಳನ್ನು ಗಮನಿಸಿ ವಿಶ್ಲೇಷಣೆ ಮಾಡಲಾಗಿದೆ. ಕ್ರಿಶ ೧೨ನೇ ಶತಮಾನದಿಂದ ೧೭ನೇ ಶತಮಾನದವರೆಗಿನ ಕಾಲಘಟ್ಟದ ಶಾಸನಗಳಲ್ಲಿ ಮಾತೃಮೂಲೀಯ ಕುಟುಂಬವ್ಯವಸ್ಥೆ, ಅಳಿಯಕಟ್ಟು, ಬಳಿಗಳ ಅನನ್ಯತೆ, ಸಾಂಸ್ಕೃತಿಕ

ಕ್ರೀಡೆ, ದೇವದಾಸಿ ಪದ್ಧತಿ, ದೈವಗಳ ಆರಾಧನೆ, ದೇವಾಲಯಗಳ ಆಚರಣೆ, ಜನಪದರ ನಂಬಿಕೆ ಮುಂತಾದ ಸಾಂಸ್ಕೃತಿಕ ಅಂಶಗಳಿದ್ದು ಅವುಗಳ ವಿಶ್ಲೇಷಣೆಗೆ ಹೆಚ್ಚು ಗಮನಕೊಡಲಾಗಿದೆ.

(ಅ) ಮಾತೃಮೂಲೀಯ/ಮಾತೃವಂಶೀಯ ಕುಟುಂಬ ಪದ್ಧತಿ

ಮಾತೃಮೂಲೀಯ[೪] ಕುಟುಂಬ ಪದ್ಧತಿ ಮೂಲದ್ರಾವಿಡರ ಕಾಲದಿಂದಲೂ ಬೆಳೆದುಕೊಂಡು ಬಂದಿರುವ ಪ್ರಾಚೀನ ಪದ್ಧತಿಯಾಗಿದೆ. "ಈ ಪದ್ಧತಿ ಮೆಡಿಟೇರಿಯನ್ ಪ್ರದೇಶದಿಂದ ಕೇರಳಕ್ಕೆ ಬಂದು ನಂತರ ತುಳುನಾಡಿನಲ್ಲಿ ವ್ಯಾಪಿಸಿತು" (ಎಸ್.ಡಿ.ಶೆಟ್ಟಿ;೨೦೦೪;ಪುಟ:೨೧೭). ಪ್ರಾಚೀನ ತುಳುನಾಡಿನಲ್ಲಿ ಪ್ರಚಲಿತವಿದ್ದ ಬಳಿ ವ್ಯವಸ್ಥೆ ಮಾತೃಮೂಲೀಯ ಕುಟುಂಬ ಪದ್ಧತಿಗೆ ಪೂರಕವಾಗಿದೆ. "ಭಗವತಿ ಆರಾಧನೆ ಆರಂಭವಾಗುತ್ತಲೆ ಮಾತೃಮೂಲೀಯ ಪದ್ಧತಿ ಬಂದಿರಬೇಕು. ಮಾತೃದೇವತೆ ಆರಾಧನೆಯ ಒಂದು ರೂಪವೇ ಮಾತೃಮೂಲೀಯ ವ್ಯವಸ್ಥೆ" (ಅಮೃತ ಸೋಮೇಶ್ವರ; ೨೦೦೭;ಪುಟ:೮೩). "ತುಳುನಾಡಿನ ಬಹುಸಂಖ್ಯಾತರು ಅನುಸರಿಸುವ ಅಳಿಯ ಸಂತಾನ ಮತ್ತು ಮಾತೃಪ್ರಧಾನ (ಮೂಲೀಯ) ಪದ್ಧತಿಯ ಬಗ್ಗೆ ಭೂತಾಳಪಾಂಡ್ಯನ ಐತಿಹ್ಯ[೫] ವಿವರಣೆ ನೀಡುತ್ತದೆ" (ಸುಬ್ಬಣ್ಣ ರೈ ಎ;೧೯೯೪;ಪುಟ:೯).

ವಿಜಯನಗರದ ಅರಸರ ಆಳ್ವಿಕೆಗಿಂತಲೂ ಹಿಂದೆ, ಬಸರೂರಿನಲ್ಲಿ ಮಾತೃಮೂಲೀಯ ಪದ್ಧತಿ ಇದ್ದಿತ್ತು. ಬಸರೂರಿನಲ್ಲಿ ಭೂಮಾಲಿಕರು ಮತ್ತು ವ್ಯಾಪಾರಸ್ಥರು ಈ ಕ್ರಮವನ್ನು ಅನುಸರಿಸುತ್ತಿದ್ದ ವಿಚಾರ ಶಾಸನಗಳಿಂದ ತಿಳಿಯುತ್ತದೆ. ತಾಯಿಯ ಹೆಸರನ್ನು ಆರಂಭದಲ್ಲಿ ಸೇರಿಸಿ ಮಕ್ಕಳ ಹೆಸರನ್ನು ಉಲ್ಲೇಖಿಸುವುದನ್ನು ಕಾಣಬಹುದು. ಮಾತೃಮೂಲೀಯ ಪದ್ಧತಿಯ ಅವಿಭಾಜ್ಯ ಅಂಗವಾದ ಅಳಿಯಕಟ್ಟಿನ ಪ್ರಾಶಸ್ತ್ಯ[೬] ಈ ಪದ್ಧತಿಯಲ್ಲಿ ಕಾಣುವ ಅನನ್ಯತೆಯಾಗಿದೆ. ಕ್ರಿಶ ೧೧೫೬ ರಲ್ಲಿ ರಾಜನಾಗಿದ್ದ ಆಲುಪೇಂದ್ರನ ಕಾಲದಲ್ಲಿ ರಾಣಿಗೆ ಹೆಚ್ಚಿನ ಸ್ಥಾನಮಾನ ಇದ್ದಿರುವುದು ಬಸರೂರಿನ ಶಾಸನಗಳಿಂದ ತಿಳಿದುಬರುತ್ತದೆ. ಬಸರೂರಿನಲ್ಲಿ ಮಾತೃಮೂಲೀಯ ಪದ್ಧತಿ ೧೧ನೇಯ ಶತಮಾನದಲ್ಲಿಯೇ ಇತ್ತು ಎನ್ನುವುದು ದೃಢಪಡುತ್ತದೆ. ಮಾತೃಮೂಲೀಯ ವ್ಯವಸ್ಥೆಯ ಮೇಲೆ ಬೆಳಕು ಚೆಲ್ಲುವ ಮತ್ತೊಂದು ಶಾಸನ ಕ್ರಿಶ ೧೨೯೨ ಕ್ಕೆ ಸೇರಿದೆ (ವಾದಿರಾಜಭಟ್ ಕನರಾಡಿ; ೧೯೯೭;ಪುಟ:೨೨೩). ಆ ಶಾಸನದಲ್ಲಿ ನಾಗದೇವರಸನನ್ನು 'ಪಿರಿಯರಸಿ ಬಲ್ಲ ಮಾಹಾದೇವಿಯಪುತ್ರ' ಎಂದು ಸಂಬೋಧಿಸಿದೆ. ಕ್ರಿ.ಶ ೧೧೭೬ರ ಆಲುಪವೀರ ಕುಲಶೇಖರನ ಶಾಸನ (ಅದೇ;ಪುಟ:೨೨೩) ರಾಜಪ್ಪಸೆಟ್ಟಿಯ ಮಗಳು ಚಂಡಬ್ಬೆ ನಖರೇಶ್ವರ ದೇವರಿಗೆ ದಾನ ನೀಡಿದ ಉಲ್ಲೇಖವಿದೆ. ಈ ಶಾಸನದ ಉಲ್ಲೇಖವು ಬಸರೂರಿನ ಸ್ತ್ರೀಯರು ಭೂ ಒಡೆತನದೊಟ್ಟಿಗೆ ಆರ್ಥಿಕ ವ್ಯವಹಾರವನ್ನು ನಿರ್ವಹಿಸುತ್ತಿದ್ದರು ಎಂಬ

ಅಂಶವನ್ನು ತಿಳಿಸುತ್ತದೆ. ಮಾತೃಮೂಲೀಯ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆಯಸ್ಥಾನ ಮತ್ತು ಜವಾಬ್ದಾರಿ ಹೆಚ್ಚಿನದ್ದಾಗಿತ್ತು ಎಂಬುದು ಈ ಶಾಸನದಿಂದ ಅರ್ಥಮಾಡಿಕೊಳ್ಳಬಹುದು.

ಕ್ರಿ.ಶ ೧೪೫೦ ರಲ್ಲಿ ಕೋಟಿಯಕ್ಕ ನಾಯಕತಿಯು ಹಲರು ಸೆಟ್ಟಿಕಾರರಿಗೆ ೨೦೦ ಕಾಟಿಗದ್ಯಾಣವನ್ನು ಸಾಲ ನೀಡಿದ್ದ ಉಲ್ಲೇಖವಿದೆ (ವಾದಿರಾಜ ಭಟ್ ಕನರಾಡಿ ;೧೯೯೭; ಪುಟ:೨೨೭). ಮಾತೃಮೂಲೀಯ ಕುಟುಂಬ ಪದ್ಧತಿಯಲ್ಲಿ ಆಸ್ತಿಯಹಕ್ಕು ಮತ್ತು ಧಾರ್ಮಿಕ ಕಾರ್ಯನಿರ್ವಹಣೆಯು ವಂಶಪಾರಂಪರ್ಯವಾಗಿ ಹೆಣ್ಣುಮಕ್ಕಳಿಗೆ ಸಲ್ಲುವುದು. ಮಾತೃಮೂಲೀಯ ಕುಟುಂಬವನ್ನು ಆಳಿಯಕಟ್ಟು ಎಂದು ಕರೆಯುವುದರ ಔಚಿತ್ಯ ತಿಳಿಯುತ್ತದೆ. ಈ ವ್ಯವಸ್ಥೆಯಲ್ಲಿ ಆಸ್ತಿಯ ಹಕ್ಕು ತಾಯಿಯ ಮೂಲಕ ಮಗನಿಗೆ ವರ್ಗಾವಣೆಯಾಗುತ್ತದೆ. ಆಸ್ತಿಗೆ ಹೆಣ್ಣು ವಾರಸುದಾರಳು. ಆದರೆ ಸೋದರಳಿಯನಿಗೆ ಹೆಚ್ಚಿನ ಪ್ರಾಶಸ್ತ್ಯ ದೊರಕುತ್ತದೆ ಎನ್ನುವುದನ್ನು ತಿಳಿಸುತ್ತದೆ. ಕ್ರಿ.ಶ ೧೪೭೨ ರ ಶಾಸನವು (ವಾದಿರಾಜ ಭಟ್ಟ ಕನರಾಡಿ;೧೯೯೭;ಪುಟ:೨೨೯) ಬಸರೂರು ಪಡುವಕೇರಿಯ ದುಗ್ಗಣ್ಣಸೆಟ್ಟಿ ಮತ್ತು ಆತನ ಮೂವರು ಸೋದರಳಿಯರು ಭೂದಾನ ಮಾಡಿದ ವಿವರಗಳನ್ನು ಉಲ್ಲೇಖಿಸಿದೆ. ಈ ಮೂವರು ದುಗ್ಗಣ್ಣಸೆಟ್ಟಿಯ ಅಕ್ಕನ ಅಥವಾ ತಂಗಿಯ ಮಕ್ಕಳಾಗಿದ್ದಾರೆ. ತೊಳಹರ ಬಳಿಯ ಸಂಕಮ್ಮ ಮೊದಲತಿಯು ದೇವರಿಗೆ ೬೦ ವರಾಹ ಗದ್ಯಾಣ ದಾನ ಮಾಡಿದ ವಿಚಾರ ಶಾಸನದಲ್ಲಿದೆ. ಕ್ರಿ.ಶ ೧೫೨೮ ರಲ್ಲಿ ಸಂಕರ ಸೆಟ್ಟಿಯ ಎರಡನೆ ಹೆಂಡತಿ ಸಂಕಮ್ಮ ನಾಯಕತಿ ಹಾಗೂ ಸಹೋದರಿ ದೆಕು ಅಡೆಯತಿ ಮಠಕ್ಕೆ ದಾನ ಮಾಡಿದ ವಿಚಾರವಿದೆ (ವಾದಿರಾಜ ಭಟ್ ಕನರಾಡಿ;೧೯೯೭;ಪುಟ೨೩೩). ಬಸರೂರಿನಲ್ಲಿ ಹೆಣ್ಣು ಆಸ್ತಿಯ ಒಡೆತನ ಹೊಂದಿ ಮಾರುವ ಮತ್ತು ಕೊಳ್ಳುವ ಅಧಿಕಾರ ಹೊಂದಿದ್ದಳು ಎಂಬುದು ಸ್ಪಷ್ಟವಾಗುತ್ತದೆ. ಯಾವುದೇ ದಾನವನ್ನು, ಕೊಡುಗೆಯನ್ನು ಹೆಣ್ಣಿನ ಹೆಸರಿನಲ್ಲಿ ನೀಡಲಾಗುತ್ತಿತ್ತು. ಸೋದರಿಯ ಮಕ್ಕಳು ಮತ್ತು ಸೋದರ ಮಾವ ವಿಶೇಷವಾದ ಸ್ಥಾನಮಾನವನ್ನು ಪಡೆದಿದ್ದರು ಎಂಬುವುದು ಬಸರೂರಿನ ಶಾಸನಗಳಿಂದ ಸ್ಪಷ್ಟವಾಗುತ್ತದೆ. ಪ್ರಾಯಶ ಅಳಿಯ ಕಟ್ಟಿನಲ್ಲಿ ಮಾವ ತಂದೆಯ ಸ್ಥಾನವನ್ನು ಅಲಂಕರಿಸುತ್ತಾನೆ. ಮದುವೆ ಸಂದರ್ಭದಲ್ಲಿ ಸೊಸೆಗೆ ಕಾಲುಂಗುರ ತೊಡಿಸುವ ಜವಾಬ್ದಾರಿ ಮಾವನಿಗಿದೆ. ಆಮಂತ್ರಣ ಪತ್ರಿಕೆಯಲ್ಲಿ ಇಂಥವರ ಅಳಿಯ/ಸೊಸೆ ಎಂದು ಸಂಬೋಧಿಸುವುದನ್ನು ಗಮನಿಸಿದರೆ ಬಸರೂರಿನಲ್ಲಿ ಅಳಿಯಕಟ್ಟು ಮತ್ತು ಮಾತೃಮೂಲೀಯ ಪದ್ಧತಿ ವ್ಯಾಪಕವಾಗಿತ್ತು ಎನ್ನುವುದು ಸ್ಪಷ್ಟವಾಗುತ್ತದೆ.

ಬಸರೂರಿನಲ್ಲಿರುವ ಬಂಟರು, ಬಿಲ್ಲವರು, ಮೊಗವೀರರು, ಮೇರರು, ಮಾತೃಮೂಲೀಯ ಕುಟುಂಬ ಪದ್ಧತಿಯನ್ನು ಅನುಸರಿಸಿಕೊಂಡು ಬರುತ್ತಿದ್ದಾರೆ. ಆದರೆ ವಾಸ್ತವವಾಗಿ ಅಧಿಕಾರ ಹೆಣ್ಣಿನದಾದರೂ ಅದರ ಒಳಿತು ಕೆಡುಕು ಮತ್ತು ಮಾರುವ ಮತ್ತು ಕೊಳ್ಳುವ ವ್ಯವಹಾರವನ್ನು ಗಂಡಸೇ ನಿರ್ವಹಿಸುತ್ತಿರುವುದು ಕಂಡುಬರುತ್ತದೆ.

ಬದಲಾಗುತ್ತಿರುವ ಸಾಮಾಜಿಕ ಸ್ಥಾನಮಾನ ಮಾತೃಮೂಲೀಯ ಕುಟುಂಬ ಪದ್ಧತಿಯ ಅನನ್ಯತೆಯನ್ನು ದುರ್ಬಲಗೊಳಿಸಿದೆ.

(ಆ) ದೇವದಾಸಿ ಪದ್ಧತಿ

ಬಸರೂರಿನಲ್ಲಿ ದೇವದಾಸಿ ಪದ್ದತಿ ಹತ್ತನೆಯ ಶತಮಾನಕ್ಕಿಂತ ಹಿಂದೆಯೇ ಇತ್ತು ಎನ್ನುವುದನ್ನು ಶಾಸನಗಳು ದೃಢಪಡಿಸುತ್ತದೆ. ದೇವಸ್ಥಾನದ ತಟ್ಟೆಚಾಕರಿ[೭] ಮಾಡುವ ಪಾತ್ರದವರಿಗೆ[೮] ದಾನನೀಡಿದ ಉಲ್ಲೇಖವಿದೆ. ಕ್ರಿ.ಶ. ೧೧೫೪ ರಲ್ಲಿ ಪಾಂಡ್ಯ ಚಕ್ರವರ್ತಿ ಭುಜಬಳ ವೀರಕವಿಯಾಳುಪೇಂದ್ರನು ರಾಜ್ಯವಾಳುತ್ತಿದ್ದಾಗ ಬಸುರೇಪುರದ ನಖರೇಶ್ವರ ದೇವರ ನೈವೇದ್ಯ ಕಾಲದಲ್ಲಿ ಸಂಗೀತ ಮತ್ತು ನೃತ್ಯವನ್ನು ಮಾಡುವ ಪಾತ್ರದವರಿಗೆ ಪಾಂಡ್ಯಗದ್ಯಾಣ ಎಂಬ ಚಿನ್ನದ ನಾಣ್ಯವನ್ನು ದಾನಕೊಟ್ಟ ವಿಚಾರ ದಾಖಲಾಗಿದೆ (ನರಸಿಂಹಮೂರ್ತಿ ಪಿ.ಎನ್;೨೦೦೭;ಪುಟ:೧೩೬). ಬಸರೂರಿನ ನಖರೇಶ್ವರ ದೇವರಿಗೆ ಅಂಗಭೋಗ ಮತ್ತು ರಂಗಭೋಗ ಸೇವೆಗಳು ನಡೆಯುತ್ತಿದ್ದವು. ಪಾತ್ರದವರು ದೇವಾಲಯದ ಕಟ್ಟುಕಟ್ಟಲೆಯವರಾಗಿದ್ದರು. ತಟ್ಟೆಚಾಕರಿ ಕೂಡಾ ಪ್ರಮುಖ ಆರಾಧನ ಕ್ರಮವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಕ್ರಿಶ ೧೪೫೧ ರಲ್ಲಿ ವಿಜಯನಗರ ದೊರೆ ಮಲ್ಲಿಕಾರ್ಜುನನ ಆಳ್ವಿಕೆಯಲ್ಲಿ ಬಾರಕೂರು ರಾಜ್ಯದ ರಾಜ್ಯಪಾಲನಾಗಿ ಬಾನಪ್ಪ ಒಡೆಯನು ಆಡಳಿತ ನಡೆಸುತ್ತಿದ್ದಾಗ ನಖರೇಶ್ವರ್ ದೇವರಿಗೆ ಎರಡು ಹೊತ್ತಿನ ಭೋಗಪಾತ್ರದ ವೆಚ್ಚಕ್ಕೆ ದಾನ ನೀಡಿದ ವಿಚಾರವಿದೆ. ಬಸರೂರಿನಲ್ಲಿ ಆಳುಪರ ಕಾಲದಿಂದ ವಿಜಯನಗರದ ಅರಸರ ಕಾಲದವರೆಗೂ ದೇವದಾಸಿ ಪದ್ಧತಿ ಪವಿತ್ರವಾಗಿತ್ತು. ದೇವದಾಸಿಯರಿಗೆ ವಿಶೇಷವಾದ ಧಾರ್ಮಿಕ ಮತ್ತು ಸಾಂಸ್ಕೃತಿಕ ಸ್ಥಾನಮಾನಗಳಿದ್ದವು. ಅನಂತರದ ಅವಧಿಯಲ್ಲಿ ದೇವದಾಸಿ ಪದ್ಧತಿ ತನ್ನ ನೆಲೆಬೆಲೆಯನ್ನು ಕಳೆದುಕೊಂಡಂತೆ ಕಾಣುತ್ತದೆ. ಮುಂದೆ ವಸಾಹತುಶಾಹಿ ಸಂದರ್ಭದಲ್ಲಿ ವ್ಯವಹಾರವಾಗಿ ಮಾರ್ಪಟಿತ್ತು.

(ಇ) ನ್ಯಾಯ ನಿರ್ಣಯ

ಕುಂದಾಪುರ ತಾಲೂಕಿನಾದ್ಯಂತ ಬಸ್ರೂರ್‌ಪಂಚಾಯಿತ್ತಿ ಎಂಬುದು ಮನೆಮಾತಾಗಿದೆ. ಬಸರೂರಿನ ಪಂಚಾಯತಿಕೆಯ ಬಗ್ಗೆ ಐತಿಹ್ಯಗಳಿವೆ (ನೋಡಿ, ಸಾಹಿತ್ಯ ಸಂಸ್ಕೃತಿ ಆಧ್ಯಾಯದಲ್ಲಿ ಬಸರೂರು ಪಂಚಾಯುತಿಗೆ). ಈ ಪಂಚಾಯುತಿಕೆ ನ್ಯಾಯುಸಮ್ಮತವಾದ ತೀರ್ಮಾನವಾಗಿರುತ್ತಿತ್ತು. ಯಾವ ಪಕ್ಷಕ್ಕೂ ಅನ್ಯಾಯವಾಗದ ಹಾಗೆಯೇ ತೀರ್ಪು ಕೊಡುತ್ತಿದ್ದರು. ಸಂಘರ್ಷ ಪೂರ್ಣವಾದ ವಾತಾವರಣದಲ್ಲಿಯೂ ಸಮರ್ಪಕ ನ್ಯಾಯ ನಿರ್ಣಯ ಆಗುತ್ತಿತ್ತು ಮತ್ತು ತಪ್ಪಿತಸ್ಥರೂ ಎಷ್ಟೇ ದೊಡ್ಡವರಾದರೂ, ಯಾವುದೇ ಅಧಿಕಾರವನ್ನು ಹೊಂದಿದ್ದರೂ ಶಿಕ್ಷೆಯಾಗುತ್ತಿತ್ತು. ಈ ವಿಚಾರವನ್ನು ಬಸರೂರಿನ ಶಾಸನಗಳು ನಿರೂಪಿಸಿದೆ. ಕ್ರಿಶ ೧೪೪೪ ಕ್ಕೆ ಸೇರುವ ಶಾಸನವೊಂದರ ಪ್ರಕಾರ (ವಾದಿರಾಜ ಭಟ್

ಕನರಾಡಿ;೧೯೯೭;ಪುಟ:೨೨೭). ರಾಜ್ಯಪಾಲ ತಿಮ್ಮಣ್ಣ ಒಡೆಯರು ಬಾರಕೂರು ರಾಜ್ಯವನ್ನು ಆಳುತ್ತಿದ್ದಾಗ ಧರ್ಮಪಟ್ಟಣದ ನಖರರು ಮತ್ತು ಹಲರು ಸೆಟ್ಟಿಕಾರರು ತಮ್ಮ ಕಡೆಯ ಇಬ್ಬರನ್ನು ಕೊಂದದ್ದಕ್ಕೆ ಪ್ರಾಯಶ್ಚಿತ ದಂಡರೂಪದಲ್ಲಿ ನಖರದವರು ಅರಮನೆಗೆ ಕೊಡುವ ಸುಂಕದ ಹಣದಲ್ಲಿ ಹತ್ತನೆ ಒಂದಂಶದಷ್ಟು ಹಣವನ್ನು ದಂಡರೂಪದಲ್ಲಿ ಪ್ರತಿವರ್ಷವು ನಖರೇಶ್ವರ ದೇವರಿಗೆ ಕೊಡಬೇಕೆಂದು, ಪ್ರಾಯಶ್ಚಿತ ರೂಪದ ದಂಡವನ್ನು ದೇವಾಲಯದ ಚಿನ್ನದಕಲಶ ಮತ್ತು ತಾಮ್ರದ ಹೊದಿಕೆಯ ನಿರ್ಮಾಣಕ್ಕೆ ಖರ್ಚುಮಾಡಬೇಕೆಂದು ಕಟ್ಟಪ್ಪಣೆ ಮಾಡಲಾಯಿತು. ಇದಕ್ಕೆ ಬಸರೂರಿನ ನಖರದವರ, ಸೆಟ್ಟಿಕಾರರ ಸಹಸಮ್ಮತಿ ಇದ್ದಿತ್ತು. ಕೊಲೆಯಂತಹ ಪಾತಕ ಕೃತ್ಯ ನಡೆದಾಗಲು ರಾಜ್ಯಪಾಲರ ಮಧ್ಯಪ್ರವೇಶವಿಲ್ಲದೆ ಬಸರೂರಿನ ಸ್ಥಳಿಯಾಡಳಿತವೇ ನ್ಯಾಯನಿರ್ಣಯ ಮಾಡುತ್ತಿರುವುದು ವಿಶೇಷವಾಗಿದೆ. ಅಂತೆಯೇ ವಸೂಲಿಮಾಡಿದ ದಂಡದ ಹಣವು ಸದುಪಯೋಗ ಆಗಬೇಕೆಂಬ ಅಂಶವು ಅದರಲ್ಲಿದೆ. ಸಂಕೀರ್ಣವಾದ, ಸಾಮಾಜಿಕ ಸ್ವಾಸ್ಥ್ಯವನ್ನು ಕೆಡಿಸುವಂತ ಸಮಸ್ಯೆಯನ್ನು ಸರಳವಾಗಿ ಬಗೆಹರಿಸುವುದೇ ಬಸರೂರ ಪಂಚಾಯಿತಿಕೆಯ ವಿಶಿಷ್ಟತೆಯಾಗಿದೆ.

ಇದೇ ರೀತಿ ಇನ್ನೊಂದು ನ್ಯಾಯನಿರ್ಣಯ ಮಾಡಿದ ಘಟನೆ ಶಾಸನದಲ್ಲಿ ಉಲ್ಲೇಖವಾಗಿದೆ. ಕ್ರಿ.ಶ. ೧೪೪೫ ಕ್ಕೆ ಸೇರುವ ವಿಜಯನಗರದ ಮಲ್ಲಿಕಾರ್ಜುನನ ಶಾಸನವು (ವಾದಿರಾಜ ಭಟ್ ಕನರಾಡಿ;೧೯೯೭;ಪುಟ:೨೪೫). ಮೂಡುಕೇರಿ ಮತ್ತು ಪಡುವಕೇರಿಯವರ ಮಧ್ಯ ಮಾರಿ ಜಾತ್ರೆಯ ಸಮಯದಲ್ಲಿ ಶ್ರೀದೇವಿಅಮ್ಮನವರ ದೇವಸ್ಥಾನಕ್ಕೆ[೧೦] ಅಡಿಕೆಮರ ಮತ್ತು ಕುರಿಗಳನ್ನು ಕೊಂಡುಹೋಗುವ ವಿಚಾರದಲ್ಲಿ ಮನಸ್ತಾಪವುಂಟಾಗಿತ್ತು. ಎರಡು ಕೇರಿಯವರ ಭಿನ್ನಾಭಿಪ್ರಾಯವನ್ನು ಬದಿಗೊತ್ತಿ, ಕೇರಿ ಮತ್ತು ರಸ್ತೆ ಮೇಲಿನ ಹಕ್ಕನ್ನು ಮಾನ್ಯಮಾಡಿ, ಎರಡು ಕಡೆಯವರಿಗೆ ಓಡಾಡಲು ಹಕ್ಕಿರುವ ಒಂದು ಉಭಯ ಮಾರ್ಗವನ್ನು ರಚಿಸಲಾಯಿತು. ಸೀಮೆಗಾರರು[೧೧] ಇದ್ದ ಹಿತ್ತಲಿನಿಂದ ಪಡುವ ಒತ್ತಿನಲ್ಲಿ ನೀರು ಹರಿಯುವ ತೋಡನ್ನು ಮೂಡುಕೇರಿಯವರು ಮುಟ್ಟಕೂಡದು ಮತ್ತು ಮೂಡುಕೇರಿಯಲ್ಲಿ ಏನಾದರೂ ಅಹಿತವಾದರೆ ಎರಡು ಕಡೆಯವರು ವ್ಯವಹಾರದ ಲಾಭಪಡೆಯಬಾರದು ಎಂದು ನಖರೇಶ್ವರದ ಶ್ರೀಮಹಾದೇವರನ್ನು ಮುಂದಿಟ್ಟುಕೊಂಡು ಶಾಸನಮಾಡಲಾಯಿತು. ಈ ನ್ಯಾಯ ನಿರ್ಣಯವು ಬಸರೂರಿನ ನ್ಯಾಯಪಂಚಾಯಿತಿಕೆಯನ್ನು ತಿಳಿಯಪಡಿಸುತ್ತದೆ. ಅರವತ್ತು ವರ್ಷಗಳಿಗೊಮ್ಮೆ ಆಚರಿಸುವ ಮಾರಿ ಹಬ್ಬದ ವ್ಯವಸ್ಥೆಗೆ ಮತ್ತು ಜವಾಬ್ದಾರಿಗಾಗಿ ಎರಡು ಪ್ರತಿಷ್ಠಿತ ಕೇರಿಗಳ ನಡುವೆ ಪೈಪೋಟಿ ನಡೆಯುತ್ತಿರುವುದು ಈ ಶಾಸನದಿಂದ ತಿಳಿದು ಬರುತ್ತದೆ. ಕ್ರಿ.ಶ. ೧೪೪೪ರಲ್ಲಿ ಎರಡು ಪ್ರಬಲ ಗುಂಪುಗಳ ನಡುವಿನ ದ್ವೇಷ ಕೊಲೆಯಲ್ಲಿ ಕೊನೆಗೊಂಡಿತು. ರಾಜ್ಯಪಾಲನ ಮಧ್ಯಸ್ಥಿಕೆಯಿಂದ ತಲೆದಂಡ[೧೨] ವಿಧಿಸಿ ಮುಂದೆ ಇಂತಹ ಘಟನೆ ಸಂಭವಿಸದಂತೆ ಜಾಗ್ರತೆವಹಿಸಲಾಯಿತು. ಬಸರೂರು ಧರ್ಮಪಟ್ಟಣವೆಂಬುದು ಈ ಬಗೆಯ ನ್ಯಾಯ

ತೀರ್ಮಾನದಿಂದ ತಿಳಿಯುತ್ತದೆ. ಬಸರೂರಿನ ನ್ಯಾಯ ಪಂಚಾಯತಿಕೆಯ ಭಯದಿಂದ ಕ್ರಿ.ಶ.೧೪೫೫ ರಲ್ಲಿ ಉಂಟಾದ ಧಾರ್ಮಿಕ ವಿವಾದವು 'ನಾವೆರಡು ಕೇರಿಯ ಹಲರು ಸೆಟ್ಟಿಕಾರರು ಸುಖದಳು ಬಾಳುವೆವೆಂದು' ಒಡಂಬಟ್ಟು ಒಪ್ಪಂದ ಮಾಡಿಕೊಂಡಿರಬೇಕು. ಈ ನ್ಯಾಯ ಪಂಚಾಯಿತಿಕೆಯಲ್ಲಿ ಗಮನಿಸಬೇಕಾದುದ್ದು ಹಲರು ಮತ್ತು ನಖರರು ಬಸರೂರಿನ ಅತ್ಯಂತ ಪ್ರಭಾವಶಾಲಿ ಜನಸಮುದಾಯ. ಸ್ಥಳಿಯ ಆಡಳಿತವು ಅವರ ಕೈಯಲ್ಲಿತ್ತು. ಆದರೂ ಪಕ್ಷಪಾತವಿಲ್ಲದೆ ನ್ಯಾಯ ನಿರ್ಣಯಿಸಲಾಯಿತು. ಕ್ರಿ.ಶ. ೧೪೬೫ ರಲ್ಲಿ ಬಸರೂರಿನ ಹಂಜಮಾನಸರು[೧೫] ತೆರಿಗೆಯನ್ನು ಅರಮನೆಯ ಭಂಡಾರಕ್ಕೆ ಒಪ್ಪಿಸುವಲ್ಲಿ ವಿಫಲರಾದಾಗ ಬೆಳೆಗಳನ್ನೇ ಒಪ್ಪಿಸಿದ ವಿಚಾರವಿದೆ. ಈ ತೀರ್ಪು ಬಸರೂರಿನ ನ್ಯಾಯಪಂಚಾಯತಿಕೆಯ ಕಟ್ಟುನಿಟ್ಟುತನ, ನಿಸ್ಪೃಹತೆ, ಜಾತ್ಯತೀತ ಧೋರಣೆಯನ್ನು ತಿಳಿಸುತ್ತದೆ.

### (ಈ) ಆರಾಧನೆ, ಆಚರಣೆ ಮತ್ತು ನಂಬಿಕೆಗಳು

ಸಂಸ್ಕೃತಿ, ಧರ್ಮಗಳು ಸರಿಯಾಗಿ ಕಣ್ಣುಬಿಡುವ ಮೊದಲೆ ಮಾನವನು ಪ್ರಾಕೃತಿಕ ಶಕ್ತಿಗಳನ್ನು ಭಿನ್ನ ಭಿನ್ನರೂಪದಲ್ಲಿ ಪೂಜಿಸಿದ್ದನೆಂದು; ಮನುಷ್ಯನ ಭಯ, ನಂಬಿಕೆ, ಕಲ್ಪನೆಗಳು ಬಗೆಬಗೆಯ ದೇವರುಗಳನ್ನು, ಆರಾಧನೆ, ಆಚರಣೆ ಮತ್ತು ನಂಬಿಕೆಗಳನ್ನು ಸೃಷ್ಟಿಸಿದೆ. ಬಸರೂರು ಅತ್ಯಂತ ಪ್ರಾಚೀನ ಜನವಸತಿ ಪ್ರದೇಶವಾಗಿದೆ. ಈ ಪ್ರದೇಶವು ಸಮುದ್ರ ನದಿತಟ ಮತ್ತು ಕಾಡುಗಳಿಂದ ಆವೃತವಾದ ಪ್ರದೇಶವಾಗಿದ್ದಿತ್ತು. ಪ್ರಕೃತಿ ಮುನಿಸಿಕೊಳ್ಳುವ ಭಯವೇ ಬಸರೂರಿನಲ್ಲಿ ದೇವಾಲಯ ಮತ್ತು ದೈವಸ್ಥಾನಗಳ ಹುಟ್ಟಿಗೆ ಕಾರಣವಾಯಿತು. ಅಷ್ಟೇಅಲ್ಲದೆ ಬಸರೂರು ಬೇರೆ ಬೇರೆ ಜನಸಮುದಾಯಗಳಿಗೆ ನೆಲೆಯನ್ನು ಕಲ್ಪಿಸಿಕೊಟ್ಟಿದೆ ಎಂಬುದು ಇತಿಹಾಸದಿಂದ ತಿಳಿಯುತ್ತದೆ. ಈ ಜನಸಮುದಾಯವು ಅನೇಕ ಬಗೆಯ ನಂಬಿಕೆ ಆಚರಣೆ ಮತ್ತು ಆರಾಧನೆ ಕ್ರಮವನ್ನು ಅನುಸರಿಸಿಕೊಂಡು ಬರುತ್ತಿದೆ. ಪ್ರತಿಯೊಂದು ಜನಸಮುದಾಯಕ್ಕೆ ತನ್ನ ಅನನ್ಯತೆಯನ್ನು ಗುರುತಿಸಿಕೊಳ್ಳುವುದು ಮುಖ್ಯವಾಗುತ್ತದೆ ಮತ್ತು ತಮ್ಮ ಅಸ್ತಿತ್ವವನ್ನು ಗಟ್ಟಿಗೊಳಿಸಿಕೊಳ್ಳುವ ಮನೋಧೋರಣೆಯನ್ನು ಹೊಂದಿರುತ್ತಾರೆ. ದೇವರ ಜೊತೆಗೆ ತಮ್ಮ ಆಚರಣೆಗಳನ್ನು ಸಮೀಕರಿಸಿಕೊಂಡು ಅದು ಶಾಶ್ವತವಾಗುವಂತೆ ನೋಡಿಕೊಳ್ಳಲು ಪ್ರಯತ್ನಿಸುತ್ತಾರೆ. ಇಲ್ಲಿ ಜೈನರು, ನಾಥರು, ಹಲರು, ಹಂಜಮಾನರು, ಸೆಟ್ಟಿಕಾರರು, ಬಂಟರು, ಬಳೆಗಾರರು, ಗುಡಿಗಾರರು, ಮೇರರು, ಬಿಲ್ಲವರು, ಮೊಗವೀರರು, ಚಪ್ಪಟೆಕಾರ್‌ಬಂಡಾರಿ ನಾಯ್ಕರು, ಸೇರಿಗಾರರು, ದೇವಾಡಿಗರು ತಮ್ಮದೆ ಆದ ಜೀವನ ಸಂಸ್ಕೃತಿಯನ್ನು ಆಚರಿಸಿಕೊಂಡು ಹೋಗುತ್ತಿದ್ದಾರೆ. ಈ ಎಲ್ಲಾ ಜನಸಮುದಾಯವನ್ನು ಗಮನದಲ್ಲಿ ಇಟ್ಟುಕೊಂಡು ದೇವಾಲಯದ ಮತ್ತು ದೈವಸ್ಥಾನದ ಆಚರಣೆಗಳು, ಆರಾಧನ ಕ್ರಮಗಳು ಅಸ್ತಿತ್ವಕ್ಕೆ ಬಂದಂತೆ ಕಾಣುತ್ತದೆ. ಅಷ್ಟೆ ಅಲ್ಲದೇ ಜೈನ, ನಾಥ, ವೀರಶೈವ, ಶಾಕ್ತ, ಗಾಣಪತ್ಯ, ವೈಷ್ಣವ ಧರ್ಮಗಳ ಪ್ರಭಾವವನ್ನು ಇಲ್ಲಿ ಕಾಣುತ್ತೇವೆ.

ಆಳುಪರ, ಹೊಯ್ಸಳ, ವಿಜಯನಗರ, ಕೆಳದಿ, ಟಿಪ್ಪುಸುಲ್ತಾನರ ಮುಂತಾದವರ ಆಳ್ವಿಕೆಯ ಪ್ರಭಾವಕ್ಕೆ ಒಳಗಾದ ಪ್ರದೇಶವಿದು. ಬಸರೂರಿಗೆ ಬಂದ ಧರ್ಮ ಪ್ರಚಾರಕರು ಮತ್ತು ಅರಸರು ವಿಶಿಷ್ಟವಾದ ಸಂಸ್ಕೃತಿಯನ್ನು ಬಿಟ್ಟು ಹೋಗಿದ್ದಾರೆ. ಇವುಗಳೆಲ್ಲವನ್ನು ದೇವಾಲಯ, ದೈವಸ್ಥಾನ, ಗರಡಿಗಳ ಆಚರಣೆ ಮತ್ತು ಆರಾಧನೆಗಳಲ್ಲಿ ಕಾಣುತ್ತದೆ. ಸಂಸ್ಕೃತಿಕರಣದ ಪ್ರಭಾವದಿಂದ ಮತ್ತು ಬೇರೆ ಇನ್ನಿತರ ಕಾರಣಗಳಿಂದ ಇಲ್ಲಿನ ಜನಸಮುದಾಯದಲ್ಲಿ ಮತ್ತು ದೇವಾಲಯ, ದೈವಸ್ಥಾನಗಳ ಆಚರಣೆಗಳಲ್ಲಿ ಬದಲಾವಣೆ ಆಗಿದ್ದರೂ ಶಾಸನಗಳಲ್ಲಿ ಮಾತ್ರ ಅದು ಹಾಗೆಯೆ ಉಳಿದಿದೆ.

ಬಸರೂರಿನಲ್ಲಿ ದೊರಕುವ ದಾನಶಾಸನ ಆರಾಧನೆ, ಆಚರಣೆಗಳಿಗೆ ಸಂಬಂಧಪಟ್ಟ ಶಾಸನವಾಗಿದೆ. ಕ್ರಿ.ಶ. ೧೪೦೦ರ ವಿಜಯನಗರದ ಇಮ್ಮಡಿ ಹರಿಹರನ ಶಾಸನವು ಬಸರೂರಿನ ನಂದಿಕೇಶ್ವರ ದೇವರ ನೂಲುಹಬ್ಬ[೧೪] ಕ್ಕೆ ಒಂದು ಗದ್ಯಾಣ ದಾನಮಾಡಿದ ವಿಚಾರ ತಿಳಿಸಿದೆ. ನಂದಿಕೇಶ್ವರನ ಆರಾಧನೆಗೆ ಭತ್ತವನ್ನು ದಾನಮಾಡಿದ ವಿಚಾರವಿದೆ. ಬಸವನ ಆರಾಧನೆ/ನಂದಿಕೇಶ್ವರನ ಆರಾಧನ ಕ್ರಮವು ವೀರಶೈವ ಪ್ರಭಾವದಿಂದ ಬಂದಿರುವುದು ಇದರಿಂದ ತಿಳಿಯುತ್ತದೆ. ಮಹಾಲಿಂಗೇಶ್ವರ ದೇವರಿಗೆ ಬಸವನನ್ನು ಬಿಡುವ ಕ್ರಮ ಈಗಲೂ ಈ ಪ್ರದೇಶದಲ್ಲಿದೆ. ದೇವಾಲಯಕ್ಕೆ ಬಿಟ್ಟ ಬಸವನಿಗೆ ದೇವರ ಬಸವ ಎನ್ನುವ ವಾಡಿಕೆಯಿದೆ. "ವಿಜಯನಗರದ ಪ್ರೌಢದೇವರಾಯನ ಸಚಿವ ಲಕ್ಕಣ್ಣದಂಡೇಶ ಬಾರಕೂರಿನ ರಾಜ್ಯಪಾಲನಾಗಿದ್ದಾಗ ತುಳುನಾಡಿನಲ್ಲಿ ಮುಖ್ಯವಾಗಿ ಬಸರೂರಿನಲ್ಲಿ ವೀರಶೈವ ಧರ್ಮದ ಪ್ರಭಾವ ಇದ್ದಿರಬಹುದು" (ಎಂ.ಜಿ.ನಾಗರಾಜ;೨೦೦೪;ಪುಟ:೧೩೭). ಈ ಕಾಲಕ್ಕಿಂತಲೂ ಹಿಂದೆಯೆ ಬಸರೂರು ವೀರಶೈವ ಧರ್ಮದ ಪ್ರಭಾವದಿಂದ ಬಸವಪುರವಾಗಿ ಕೊನೆಗೆ ಬಸರೂರು ಎಂದು ಆಗಿದ್ದಿರಬಹುದು. ಈ ಶಾಸನದಲ್ಲಿ ನೂಲುಹಬ್ಬ ಎಂಬ ಇನ್ನೊಂದು ಬಗೆಯ ಧಾರ್ಮಿಕ ಆಚರಣೆಯನ್ನು ತಿಳಿಸಿದೆ. ಬಸರೂರಿನಲ್ಲಿ ನಖರರು[೧೫], ಸೆಟ್ಟಿಗಾರರು[೧೬] ಪ್ರಮುಖ ವ್ಯಾಪಾರಿ ಸಂಘಟನೆಯಾಗಿದ್ದು, ನಖರರು ಜೈನರಾಗಿದ್ದರು. ಈ ಎರಡು ವರ್ಗಗಳು ಬಸರೂರಿನ ಸ್ಥಳಿಯಾಡಳಿತದಲ್ಲಿ ಮುಖ್ಯ ಪಾತ್ರವಹಿಸುತ್ತಿದ್ದರು. ನೂಲುಹಬ್ಬ ಇವರ ಪ್ರಮುಖ ಧಾರ್ಮಿಕ ಆಚರಣೆಯಾಗಿದ್ದಿತ್ತು. "ಜೈನರು ನೂಲುಹಬ್ಬವನ್ನು ನೂಲಹುಣ್ಣಿಮೆಯ ದಿನ ಆಚರಿಸುತ್ತಾರೆ. ಈ ಹಬ್ಬದ ಆಚರಣೆಗೆ ಬಸದಿಗಳಿಗೆ ದಾನನೀಡಿದ ದೃಷ್ಟಾಂತಗಳು ಕಂಡುಬರುತ್ತವೆ (ಎಸ್.ಡಿ.ಶೆಟ್ಟಿ;೨೦೦೨;ಪುಟ:೨೧೭). ಈ ಹಬ್ಬವು ಜೈನರ ಆಚರಣೆ ಎನ್ನುವುದರಲ್ಲಿ ಸಂದೇಹವಿಲ್ಲ. ವಿಜಯನಗರದ ಅರಸರ ಕಾಲದಲ್ಲಿ ಈ ಹಬ್ಬಕ್ಕೆ ಮತ್ತಷ್ಟು ಪ್ರಾಮುಖ್ಯತೆ ಬಂದಂತೆ ಕಾಣುತ್ತದೆ. ಅವರ ಕಾಲದಲ್ಲಿ ಬಸರೂರಿನ ಸೆಟ್ಟಿಕಾರರು ನೂಲುಹಬ್ಬಕ್ಕೆ ದಾನಮಾಡಿದ ವಿಚಾರವಿದೆ. "ಕ್ರಿ.ಶ. ೧೪೦೦ರ ಕಾಲಕ್ಕೆ ಶೃಂಗೇರಿ ಮಠದ ಪ್ರಭಾವವು ಬಸರೂರಿನ ಮೇಲೆ ಆಗಿದೆ" (ನರಸಿಂಹಮೂರ್ತಿ ಪಿ.ಎನ್;೧೯೮೪;ಪುಟ:೩೨). ವಿಜಯನಗರದ ಅರಸರು ಶೃಂಗೇರಿ ಮಠದ ಭಕ್ತರಾಗಿದ್ದರು. ಇವರಿಗೆ ಸೈನಿಕರ ಕೊರತೆ

ಎದುರಾದಾಗ ತುಳುನಾಡಿಗೆ ವಲಸೆ ಬಂದ ಸೆಟ್ಟಿಕಾರರಿಗೆ, ಚಪ್ಪಟ್ಟೆಕಾರರಿಗೆ, ಗಾಣಿಗರಿಗೆ, ಮರಾಠಿನಾಯಕರಿಗೆ, ನಾಯರಿಗಳಿಗೆ ಶೃಂಗೇರಿ ಮಠದವರು ದ್ವಿಜದೀಕ್ಷೆ ಕೊಟ್ಟು ಕ್ಷತ್ರೀಯರಾಗಿ ಮಾಡಿಕೊಂಡರು. ಕೋಟಕ್ಷತ್ರೀಯ[೧೬], ರಾಮಕ್ಷತ್ರೀಯ ಎಂಬ ಹೆಸರನ್ನು ಪಡೆದುಕೊಂಡು ಸೇನೆಗೆ ಸೇರಿದರು. ಈ ಕಾರಣದಿಂದ ಸೆಟ್ಟಿಕಾರರು ನೂಲು ಹಬ್ಬಕ್ಕೆ ದಾನ ನೀಡಿದ್ದಾರೆ. ಕ್ರಿಶ ೧೪೩೩ ರ ವಿಜಯನಗರದ ಇಮ್ಮಡಿ ದೇವರಾಯನ ಶಾಸನವು ಬಸರೂರಿನ ನಖರೇಶ್ವರ ದೇವರಿಗೆ ನಂದಾದೀಪ ರುದ್ರಪೂಜೆಗೆ ಭೂದಾನಮಾಡಿದ ವಿಚಾರವನ್ನು ಒಳಗೊಂಡಿದೆ (ವಾದಿರಾಜ ಭಟ್ ಕನರಾಡಿ;೧೯೯೭;ಪುಟ:೨೨೫). "ಪ್ರಮುಖವಾಗಿ ವೀರಶೈವರಿಗೆ ವೀರಭದ್ರ ಆರಾಧ್ಯದೈವ. ವೀರಶೈವಾನ್ವಯವು ವೀರಭದ್ರನಿಗೆ ನಿಕಟವಾಗಿರುವ ಕಾರಣ ಅವನು ವೀರಮಹೇಶ್ವರಾಚಾರಕ್ಕೆ ಗುರು. ವೀರಭದ್ರ ಪರಮೇಶ್ವರನಿಗೆ ಸಮನಾದ ಗುಣವುಳ್ಳ ಗಣಪುರುಷ ಎಂದು ಶಿವರಹಸ್ಯದಲ್ಲಿದೆ. ರುದ್ರನ ಪುತ್ರನಾಗಿ ರುದ್ರದೇವರು ಎಂದು ಕರೆಯಿಸಿಕೊಂಡು ರುದ್ರಪೂಜೆಯನ್ನು ಪಡೆದನು ಎಂದಿದೆ" (ನಾಗರಾಜ ಎಂ.ಜಿ;೨೦೦೪;ಪುಟ:೧೫೬).

ಈ ಮೇಲಿನ ವಿಚಾರದಿಂದ ರುದ್ರಪೂಜೆ ವೀರಭದ್ರನಿಗೆ ಸಂಬಂಧಪಟ್ಟದ್ದಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಇಲ್ಲಿ ದಾನ ಕೊಟ್ಟವರು ಸೆಟ್ಟಿಕಾರರು. ಸೆಟ್ಟಿಕಾರರು ವೀರಭದ್ರನ ಒಕ್ಕಲುಗಳು. ಹಾಗಾಗಿ ರುದ್ರಪೂಜೆ ವೀರಭದ್ರನಿಗೆ ಸಂಬಂಧಪಟ್ಟದ್ದಾಗಿದೆ. ಬಸರೂರಿನ ನಖರೇಶ್ವರ ಮಹಾದೇವ ದೇವಾಲಯದ ಎಡಭಾಗದಲ್ಲಿ ವೀರಭದ್ರನ ಸನ್ನಿಧಾನವಿದೆ. ಶ್ರೀದೇವಿದೇವಸ್ಥಾನದಲ್ಲಿ ವೀರಭದ್ರನಿದ್ದಾನೆ. ಹಲರಕರೆಯ ಎದುರು ವೀರಭದ್ರನ ಗುಡಿಯಿದೆ. ನಖರೇಶ್ವರ ದೇವಾಲಯಕ್ಕೆ ದಾನನೀಡಿದ್ದರು ಅದು ವೀರಭದ್ರನಿಗೆ ಎಂಬುದು ಗಮನಿಸುವಂತದ್ದು. ಕ್ರಿ.ಶ. ೧೪೪೨ ರಲ್ಲಿ ವಿಜಯನಗರದ ಚಕ್ರವರ್ತಿ ಇಮ್ಮಡಿದೇವರಾಯನ ಆಜ್ಞೆ ಮೇರೆಗೆ ಮಹಾಪ್ರಧಾನ ಚಂದರಸವೊಡೆಯನು ಬಾರಕೂರು ರಾಜ್ಯವನ್ನು ಆಳುತ್ತಿರುವಾಗ ಸನಿಯಮ್ಮ ಸೆಟ್ಟಿಯ ಅಳಿಯ ಕೋಟಿಯಣ್ಣ ಸೆಟ್ಟಿಯು ಪಡುವಕೇರಿಯ ಮಹಾದೇವರ ರುದ್ರಪೂಜೆ, ರಂಗಪೂಜೆ ಸೋಣೆಪೂಜೆಗೆ ಭೂದಾನ ಮಾಡಿದ ಉಲ್ಲೇಖವಿದೆ (ಕನರಾಡಿ ವಾದಿರಾಜ ಭಟ್; ೧೯೯೭;ಪುಟ:೨೨೬). ರಂಗಪೂಜೆ ಎಂದರೆ "ದೇವರ ಉತ್ಸವ ಮೂರ್ತಿಯನ್ನು ಕೂರಿಸಿ ಪೂಜಿಸುವ ಕ್ರಮವೆಂದು" ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಣೆಯ ಸಂಕ್ಷಿಪ್ತ ಕನ್ನಡ ನಿಘಂಟಿನಲ್ಲಿದೆ. ಆಗಮೋಕ್ತ ಮತ್ತು ಆಗಮೇತರ ದೇವಾಲಯಗಳಲ್ಲಿ ರಂಗಪೂಜೆಯಲ್ಲಿ ಹಿರೇರಂಗಪೂಜೆ ಮತ್ತು ಕಿರಿರಂಗಪೂಜೆಯೆಂದು ಎರಡು ರೀತಿಯಲ್ಲಿ ನಡೆಸುತ್ತಾರೆ. ಹಿರೇರಂಗಪೂಜೆಯಲ್ಲಿ ದೇವರ ಗರ್ಭಗುಡಿಯಿಂದ ಮಹಾಬಲಿ ಪೀಠದ ತನಕ ಹಲಗೆ ಇಟ್ಟು ಮಡಿಬಟ್ಟೆ ಹಾಸಿ ಅನ್ನದ ಅಗಳು, ಎಲೆಅಡಿಕೆ, ವಡೆ ಬಳಸಿ ಶ್ರೀದೇವರ ಸಕಲ ಪರಿವಾರವನ್ನು ಉಪಚರಿಸುವುದು. ಇದು ಆಗಮೋಕ್ತ ದೇವಾಲಯದಲ್ಲಿ ರಥೋತ್ಸವದ ಮರುದಿನ ನಡೆಯುತ್ತದೆ. ಕಿರಿರಂಗ ಪೂಜೆಯಲ್ಲಿ ದೇವರ ಗರ್ಭಗುಡಿಯಿಂದ

ತೀರ್ಥಮಂಟಪದಲ್ಲಿರುವ ಬಸವಮಂಟಪದ ಪೂರ್ವ ಭಾಗದವರೆಗೂ ಅಗಳು, ಬಾಳೆಹಣ್ಣು, ಎಲೆಅಡಿಕೆ, ವಡೆ ಇಟ್ಟು ಶ್ರೀದೇವರ ಪರಿವಾರವನ್ನು ಉಪಚರಿಸುತ್ತಾರೆ. ರಂಗಪೂಜೆಯ ಅನ್ನವನ್ನು ಕಟ್ಟುಕಟ್ಟಲೆಯವರು[೧೮] ಪ್ರಸಾದ ರೂಪದಲ್ಲಿ ಕೊಂಡುಹೋಗುತ್ತಾರೆ. ಇಲ್ಲಿ ರಂಗ ಎಂದರೆ ಎತ್ತರ ಎನ್ನುವ ಅರ್ಥದಲ್ಲಿ ಪ್ರಯೋಗವಾಗಿದೆ.

ಕ್ರಿ.ಶ. ೧೫೦೬ ರ ಬಸರೂರಿನ ಶಾಸನವು ದೀವಳಿಗೆ ಪೂಜೆ[೧೯]ಗೆ ಬೇರೆ ಬೇರೆಯವರು ನೀಡಿದ ವರಾಹ ಗದ್ಯಾಣವನ್ನು ಉಲ್ಲೇಖಿಸಿದೆ. ಇದು ಕಾರ್ತಿಕಮಾಸದ ದೀಪೋತ್ಸವವಾಗಿದ್ದು ಕುಂದಾಪುರದ ಕನ್ನಡದಲ್ಲಿ ದೀವಳಿ ಪೂಜೆ ಎಂದು ಕರೆಯುವುದು ವಾಡಿಕೆ. ಧರ್ಮಸ್ಥಳದಲ್ಲಿ ದೀಪೋತ್ಸವ ನಡೆವ ದಿನ ಬಸರೂರಿನ ಮಹಾಲಿಂಗೇಶ್ವರನಲ್ಲಿ ದೀಪೋತ್ಸವ ನಡೆಯುವುದು ವಿಶೇಷವಾಗಿದೆ.[೨೦] ದೀಪೋತ್ಸವದ ದಿನ ಮಹಾಲಿಂಗೇಶ್ವರ ದೇವಾಲಯದ ಹೊರ ಪ್ರಾಕಾರದಲ್ಲಿರುವ ಕಂಚಿನ ದೀಪ ಸ್ತಂಭಕ್ಕೆ ದೀಪಹಚ್ಚಿ ಆರಾಧಿಸುವ ಕ್ರಮವಿದೆ. ದೇವರ ಕೆರೆಯ ಎದುರಿಗಿರುವ ವೆಂಕಟರಮಣ ದೇವಾಲಯದ ಕಂಚಿನ ದೀಪಸ್ತಂಭಕ್ಕೂ ದೀಪ ಹಚ್ಚುವ ಸಂಪ್ರದಾಯವಿದೆ. ಅದೇ ದಿನ ಶ್ರೀ ಮಹಾಲಿಂಗೇಶ್ವರನಿಗೆ ದೇವರ ಕೆರೆಯಲ್ಲಿ ಮೂರು ಸುತ್ತು ಕೆರೆ ಆಯನ ನಡೆಸುತ್ತಾರೆ. ಆನಂತರ ದೇವಾಲಯದ ದಕ್ಷಿಣದ ಬಾಗಿಲಿನ (ತೆಂಕು ಬಾಗಿಲು) ಮೂಲಕ ಉತ್ಸವ ಮೂರ್ತಿಯನ್ನು ದೇವಾಲಯಕ್ಕೆ ತರುತ್ತಾರೆ. (ಹೆಚ್ಚಿನ ವಿವರಗಳಿಗೆ ದೇವಾಲಯದ ವಾರ್ಷಿಕಾಚರಣೆ ದೀಪೋತ್ಸವ, ನೋಡಿ).

ಕ್ರಿ.ಶ. ೧೪೪೦ ರ ಶಾಸನವು ಬಸರೂರಿನ ಚಂಡಿಕಾದೇವಿಯ ರಕ್ಷಾಭೋಗಕ್ಕೆ ಹೊನ್ನಿನ ದಾನ ನೀಡಿದ ವಿಚಾರವನ್ನು ಉಲ್ಲೇಖಿಸಿದೆ (ಶೈಲಾ.ಟಿ.ವರ್ಮಾ;೨೦೦೨; ಪುಟ:೨೪೦). "ತುಳುನಾಡಿನ ದೇವಿ ದೇವಾಲಯಗಳಲ್ಲಿ ನವರಾತ್ರಿ ಹಬ್ಬದ ವಿಶೇಷ ಸಂದರ್ಭದಲ್ಲಿ ಒಂಬತ್ತು ದಿನಗಳ ಪೂಜೆ ಏರ್ಪಡುತ್ತಿತ್ತು. ರಕ್ಷಾಭೋಗವೆಂಬ ಪೂಜೆಯ ಭಾಗವಾಗಿ ಸೋಮನಾಥ ದೇವರಿಗೆ ಮಹಾನವಮಿಯ ಒಂದು ದಿನದ ಪೂಜೆಯನ್ನು ನಡೆಸಿದ ಉಲ್ಲೇಖವಿದೆ" (ಶೈಲಾ.ಟಿ.ವರ್ಮಾ;೨೦೦೨;ಪುಟ,೨೦೧). ಇದು ತಂತ್ರ ಮಾರ್ಗದಲ್ಲಿ ನಡೆಯುವ ಧಾರ್ಮಿಕ ಕಾರ್ಯಕ್ರಮವಾಗಿದೆ. ರಕ್ಷಾಭೋಗವೆಂದರೆ ರಕ್ಷಣೆಗಾಗಿ ದೇವರಿಗೆ ಬಲಿ ಕೊಡುವುದು ಎಂದಾಗುತ್ತದೆ. ಕೆಲವು ಮೂಲಗಳ ಪ್ರಕಾರ ರೈತರು ತಾವು ಬೆಳೆದ ಧಾನ್ಯಗಳನ್ನು ಆ ದಿನ ದೇವರಿಗೆ ಅರ್ಪಿಸಿ ಕೃತಾರ್ಥರಾಗುತ್ತಾರೆ. ತಮ್ಮ ಬೆಳೆಗಳ ರಕ್ಷೆಗಾಗಿ ಭೋಗ ನೀಡುತ್ತಿದ್ದಾರೆ. ಭೋಗ ನೀಡಿದ ವಸ್ತುವನ್ನೇ ನೈವೇದ್ಯದ ರೂಪದಲ್ಲಿ ದೇವರಿಗೆ ಅರ್ಪಿಸುತ್ತಿದ್ದಂತೆ ತೋರುತ್ತದೆ. ಅದರೆ ಇದು ಕುರಿಬಲಿ ನೀಡುವ ಕ್ರಮವಾಗಿದೆ. ಈಗಲೂ ಬಸರೂರಿನ ಶ್ರೀ ದೇವಿದೇವಸ್ಥಾನದಲ್ಲಿ ಕುರಿಬಲಿ ನಡೆಯುತ್ತದೆ.

ಕ್ರಿ.ಶ. ೧೪೫೫ ರ ಶಾಸನವು ಬಸರೂರಿನ ಶ್ರೀದೇವಿ ಅಮ್ಮನವರ ದೇವಸ್ಥಾನದ ಮಾರಿಪೂಜೆ[೧] ಆಚರಣೆಯನ್ನು ಉಲ್ಲೇಖಿಸಿದೆ. ಅದನ್ನು ಮಾರಿಹಬ್ಬ ಎಂದು ಕರೆಯುವುದು ವಾಡಿಕೆ. ಊರಿನ ಕೆಟ್ಟದ್ದನ್ನು ಕಳೆಯಲು ಮಾರಿಯನ್ನು ಸಂತೃಪ್ತಿಗೊಳಿಸುವ ಹಬ್ಬವಿದು. ಬಸರೂರಿನ ಮಾರಿಹಬ್ಬ ೧೫ ವರ್ಷ ಮತ್ತು ೬೦ ವರ್ಷಕ್ಕೊಮ್ಮೆ ನಡೆಯುತ್ತದೆ. ೧೫ ವರ್ಷಕ್ಕೊಮ್ಮೆ ನಡೆಯುವ ಮಾರಿಹಬ್ಬ ಸಣ್ಣ ಮಾರಿಹಬ್ಬ. ೬೦ ವರ್ಷದ ಮಾರಿಹಬ್ಬ ದೊಡ್ಡ ಮಾರಿಹಬ್ಬವಾಗಿದೆ (ಹೆಚ್ಚಿನ ವಿವರಗಳಿಗೆ ದೈವಸ್ಥಾನದ ವಾರ್ಷಿಕಾವರ್ತನ ಆಚರಣೆ ಮಾರಿ ಹಬ್ಬ ನೋಡಿ). ಈ ದೇವಾಸ್ಥಾನದಲ್ಲಿ ಭದ್ರಮಹಾಂಕಾಳಿಗೆ ಕುರಿ ಹೊಡೆಯುವ[೨] ಮತ್ತು ಕೋಳಿಯನ್ನು ಬಲಿಕೊಡುವ ಹರಕೆಯನ್ನು ಹೊತ್ತುಕೊಳ್ಳುತ್ತಾರೆ. ಹರಿಕೆಯ ರೂಪದಲ್ಲಿ ಕುರಿಬಲಿ ನೀಡಲಾಗುತ್ತದೆ. ಅನಂತರ ಭದ್ರ ಮಹಾಂಕಾಳಿಗೆ ನೈವೇದ್ಯ ಮಾಡಿ ಸಹ ಭೋಜನ ನಡೆಸುತ್ತಾರೆ. ಆದರೆ ಮಾರಿಹಬ್ಬದಲ್ಲಿ ಮಾರಿಗೆ ಸಾಮೂಹಿಕ ಕೋಳಿ ಮತ್ತು ಕುರಿಬಲಿ ನಡೆಯುತ್ತದೆ.

(ಉ) ಶಾಸನಗಳಲ್ಲಿ ಬಳಿಕಟ್ಟು

"ಬಳಿಯೆಂಬುದು ಕುಟುಂಬದ ಗುರುತಿಸುವಿಕೆ ಮತ್ತು ಕುಟುಂಬದ ಅಸ್ಮಿತೆಯಾಗಿದೆ" (ಇಂದಿರಾ ಹೆಗ್ಡೆ;೨೦೦೯;ಪುಟ:೧೧೫) ಬಸರೂರಿನಲ್ಲಿ ಅನೇಕ ಜಾತಿಗಳಿವೆ. ಆ ಜಾತಿಗಳ ಒಳಗೆ ಬಳಿ ಮತ್ತು ಗೋತ್ರ ವ್ಯವಸ್ಥೆ ಇದೆ. ಜಾತಿಗಳು ಶ್ರೇಣಿಕರಣಕ್ಕೆ ಒಳಗಾದ ಹಾಗೆ ಬಳಿಗಳು ಶ್ರೇಣಿಕರಣಕ್ಕೆ ಒಳಗಾಗಿದೆ. ಇದರಿಂದಾಗಿ ಒಂದೇ ಜಾತಿಯಲ್ಲಿ ವೈವಿಧ್ಯತೆ ಕಾಣಲಾಗುತ್ತದೆ. ಬಳಿಗಳು ಧಾರ್ಮಿಕ ಆಚರಣೆ, ಶುಭಸಮಾರಂಭಗಳಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಬಳಿ ಸಂಪ್ರದಾಯ ಅವೈದಿಕ ವರ್ಗಗಳಲ್ಲಿ ಮಾತ್ರ ಕಂಡುಬರುವುದು ವಿಶೇಷವಾಗಿದೆ. ಪ್ರಾಯಶ ಜನಸಮುದಾಯದ ಮೂಲವೇ ಬಳಿ ಇರಬೇಕು. ಮದುವೆಯ ಸಂದರ್ಭದಲ್ಲಿ ಒಂದೆ ಬಳಿಯವರು ಸಂಲಗ್ನಗೊಳ್ಳುವುದಿಲ್ಲ. ಅವರು ಅಣ್ಣ ತಂಗಿಯರು ಆಗುತ್ತಾರೆ. ಒಂದೇ ಬಳಿಯವರು ಮದುವೆಯಾದರೆ ಹೊಳೆಯಲ್ಲಿ ಬಳಕೊಂಡು[೩] ಹೋಗುತ್ತಾರೆ ಎಂಬ ಮಾತಿದೆ.

ಬಸರೂರಿನ ಶಾಸನಗಳಲ್ಲಿ ದಾನಕೊಟ್ಟ ವಿಚಾರವನ್ನು ಉಲ್ಲೇಖಿಸುವಾಗ ಬಳಿಯನ್ನು ಹೆಸರಿಸಿದ ನಂತರ ವ್ಯಕ್ತಿಯ ಹೆಸರನ್ನು ಹೇಳಲಾಗಿದೆ. ಬಳಿಕಟ್ಟಿಗೆ ಇದ್ದ ಪ್ರಾಮುಖ್ಯತೆ ಇದರಿಂದ ತಿಳಿಯುತ್ತದೆ. ಬಸರೂರಿನ ಬಂಟರಲ್ಲಿ, ಸೆಟ್ಟಿಕಾರರಲ್ಲಿ, ಮೇರರಲ್ಲಿ, ಬಿಲ್ಲವರಲ್ಲಿ, ದೇವಾಡಿಗರಲ್ಲಿ ಬಳಿ ಇಂದಿಗೂ ಚಾಲ್ತಿಯಲ್ಲಿದೆ. ಆ ಜನಸಮುದಾಯದವರು ಬಳಿಯ ಮೂಲಕ ತಮ್ಮ ಅನನ್ಯತೆಯನ್ನು ಗುರುತಿಸಿಕೊಳ್ಳುತ್ತಾರೆ. ಕ್ರಿ.ಶ. ೧೪೦೧ ಶಾಸನವು ಪಡುವಕೇರಿಯ ಜರಡೆಯ ಬಳಿ ಕೋಟೀಸರದಹನ ಮೊಮ್ಮಗಳು ತುಳುವರ ಹೆಗ್ಗಡತಿಯನ್ನು ಉಲ್ಲೇಖಿಸಿದೆ (ವಾದಿರಾಜ ಭಟ್ ಕನರಾಡಿ;೧೯೯೭;ಪುಟ:೨೨೭). ಕ್ರಿ.ಶ. ೧೪೦೦ ರಲ್ಲಿ

ವಿಜಯನಗರದ ಇಮ್ಮಡಿ ಹರಿಹರನ ಕಾಲದ ಶಾಸನದಲ್ಲಿಉಡುವರ ಬಳಿ[೨೪]ಯ ಉಲ್ಲೇಖವಿದೆ (ಅದೇ;೧೯೭;ಪುಟ:೨೨೪). ಕ್ರಿ.ಶ.೧೪೪೪ ರ ಶಾಸನವು ಅನ್ಯಂಟರ ಬಳಿಯ[೨೫] ಶಂಕರ ಸೆಟ್ಟಿ ಮತ್ತು ಅವನ ಮಗ ಕುಡೆಯರ ಬಳಿಯ ನಾರಾಯಣ ಸೆಟ್ಟಿ ಎಂಬುವನ ಹೆಸರನ್ನು ತಿಳಿಸುತ್ತದೆ. ಕ್ರಿ.ಶ. ೧೪೫೦ರ ಶಾಸನದಲ್ಲಿ ಉಪಿನಕುಳೆಯರ ಬಳಿಯ[೨೬] ಕೋಟೆಯರ ನಾಯಕೆತಿ ಮತ್ತು ಆಕೆಯ ಮಗ ಮೆರವಣ್ಣ ಸೆಟ್ಟಿಯ ಪ್ರಸ್ತಾಪವಿದೆ. ಕ್ರಿ.ಶ ೧೫೧೦ ರ ವಿಜಯನಗರದ ಭುಜಬಲ ನರಸಿಂಹ ಮಹಾರಾಯನ ಕಾಲದ ಶಾಸನವು ತೊಳಹರಬಳಿ[೨೭]ಯ ಸಂಕಮ ಮೊದಲತಿಯ ಪ್ರಸ್ತಾಪವಿದೆ. ಕ್ರಿ.ಶ ()೫೪೮ ರ ವಿಜಯನಗರದ ಸದಾಶಿವರಾಯನ ಶಾಸನವು ಹಡಗಳಬಳಿಯ ಉಲ್ಲೇಖವಿದೆ. ಕ್ರಿ.ಶ ೧೫೫೫ರ ವಿಜಯನಗರದ ಸದಾಶಿವರಾಯನ ಇನ್ನೊಂದು ಶಾಸನವು ಬಳಾಬಳಿ[೨೮]ಯನ್ನು ಹೆಸರಿಸಿದೆ. ಈ ಬಳಾಬಳಿಯೇ ಬಾಳೆಬಳಿಯಾಗಿರಬೇಕು. ಕ್ರಿ.ಶ ೧೫೨೦ರ ವಿಜಯನಗರದ ಕೃಷ್ಣದೇವರಾಯನ ಶಾಸನವು ಬಸ್ತಿಕೇರಿಯ ಅರಿಯಬಳಿ[೨೯]ಯ ಅಣ್ಣುಸೆಟ್ಟಿಯ ಮಗ ಯಿರಣಸೆಟ್ಟಿಯ ವಿಚಾರ ತಿಳಿಸಿದೆ (ಇಂದಿರಾ ಹೆಗ್ಡೆ;೨೦೦೯;ಪುಟ:೧೧೮). ಕ್ರಿ.ಶ ೧೪೪೪ರ ಶಾಸನದಲ್ಲಿ ಬಳಿಗಾರ ಬಳಿಯ ಪ್ರಸ್ತಾಪವಿದೆ. ಕ್ರಿ.ಶ. ೧೫೬೨ರ ಶಾಸನವು ಬಸರೂರು ಪಡುವಕೇರಿಯ ಗಣಪಸೆಟ್ಟಿಯ ಮಗ ಹೊಲೆಯ ಬಳಿಯ ಚತುಸೆಟ್ಟಿಯು ಮಠವನ್ನು ಕಟ್ಟಿಸಿ ದಾನನೀಡಿದ ಉಲ್ಲೇಖವಿದೆ.

ಬಸರೂರಿನ ಶಾಸನಗಳಲ್ಲಿ ಉಲ್ಲೇಖಿತ ಬಳಿಗಳು ಬಸರೂರಿನ ಮಾತೃಪ್ರಧಾನ ಸಂಸ್ಕೃತಿಯ ನೆಲೆಯನ್ನು ತಿಳಿಸಿಕೊಡುತ್ತದೆ. ಬಸರೂರು ಕೃಷಿ ಪ್ರಧಾನ ಸಂಸ್ಕೃತಿಯನ್ನು ಹೊಂದಿದ ಪ್ರದೇಶವೆಂದು, ವಿವಿಧ ಜನಸಮುದಾಯದ ವಲಸೆ ಪ್ರದೇಶವೆಂದು, ಜೈನ ಮತ್ತು ಬಂಟರಸಂಕರ, ತುಳುವಿನ ಬಂಟರು ಮತ್ತು ನಾಡವ ಬಂಟರ ಸಂಕರವನ್ನು ಹೊಂದಿದ ಪ್ರದೇಶವೆಂದು ತಿಳಿಯತ್ತದೆ. ಆದರೆ ಸಿರಿಯ ಬಳಿಯ ಪ್ರಸ್ತಾವ ಕಂಡುಬರುವುದಿಲ್ಲ.

(ಊ) ಸಾಂಸ್ಕೃತಿಕ ಕ್ರೀಡೆ

ಕೃಷಿ ಸಂಸ್ಕೃತಿಯನ್ನು ಬದುಕಾಗಿ ರೂಪಿಸಿಕೊಂಡ ಜನಪದರಿಗೆ ಕೃಷಿ ಕೆಲಸದಿಂದ ಬಿಡುಗಡೆ ಹೊಂದಿದಾಗ ರಂಜನೆ ನೀಡುವ ಕಂಬಳ, ಕೋಳಿಅಂಕ, ಕಾಯಿ ಆಟಗಳೆನ್ನುವ ಕ್ರೀಡಾ ಚಟುವಟಿಕೆಗಳನ್ನು ನಡೆಸುತ್ತಿದ್ದರು. ಬಸರೂರಿನ ಶಾಸನದಲ್ಲಿ ಈ ಬಗೆಯ ಆಟಗಳ ಪ್ರಸ್ತಾಪವಿದೆ. ಕೃಷಿಕರ ಮನೋರಂಜನೆಯಾಗಿರುವ ಕೋಣಗಳ ಓಟದ ಸ್ಪರ್ಧೆಯನ್ನು ಕಂಬಳ ಎಂದು ಕರೆಯುತ್ತಾರೆ. ಬಸರೂರಿನಲ್ಲಿ ಕಂಬಳದಂತಹ ಕೃಷಿ ಸಂಬಂಧಿ ಆಚರಣೆ ನಡೆಯುತ್ತಿತ್ತು ಎಂಬುದನ್ನು ಶಾಸನ ಉಲ್ಲೇಖಿಸಿದೆ. ಕ್ರಿ.ಶ. ೧೫೨೦ರ ಬಸರೂರಿನ ಶಾಸನವೊಂದು ದಾನವಾಗಿ ನೀಡಲಾದ ಭೂಮಿಯನ್ನು ಕಂಬಳಗದ್ದೆ ಎಂದು ಹೆಸರಿಸಿದೆ (ಶೈಲಾ ಟಿ.ವರ್ಮಾ;೨೦೦೨;ಪುಟ:೧೯).

ಸಿರಿಯ ಪಾಡ್ದನದಲ್ಲಿಯೂ ಬಸರೂರಿನ ಕಂಬಳಗದ್ದೆ[೬೦]ಯ ಉಲ್ಲೇಖವಿದೆ (ನಾವುಡ ಎ.ವಿ;೧೯೯೯;ಪುಟ:೪೫). ಬಸರೂರಿನಲ್ಲಿ ಬಹಳ ಹಿಂದೆಯೇ ಕಂಬಳದ ಆಚರಣೆ ಇದ್ದಿತ್ತು ಎಂಬುದು ಸ್ಪಷ್ಟವಾಗುತ್ತದೆ. ಬಸರೂರಿನಲ್ಲಿ ಕಂಬಳವು ಸಾರ್ವಜನಿಕ ಕ್ರೀಡೆಯಾಗಿತ್ತು ಮತ್ತು ಕಂಬಳವು ನಡೆಯುವ ಗದ್ದೆಯನ್ನು ಪವಿತ್ರ ಸ್ಥಳವೆಂದು ಪರಿಗಣಿಸಲಾಗುತ್ತಿತ್ತು. ಇದು ಮೂಡ್ಲಕಟ್ಟೆ ಕಂಬಳ ಗದ್ದೆಯ ಉಲ್ಲೇಖವಿರಬೇಕು.

(ಋ) ದೈವಗಳ ಆರಾಧನೆ

ಬಸರೂರಿನಲ್ಲಿ ನಲವತ್ತೆಂಟಕ್ಕು ಮಿಕ್ಕಿ ದೈವಸ್ಥಾನಗಳಿವೆ. ಈ ದೈವಸ್ಥಾನಗಳ ಹಿನ್ನೆಲೆಯಿಂದ ದೈವಗಳ ಆರಾಧನೆ ಹುಟ್ಟಿಕೊಂಡಿತು. "ಕೃಷಿ ಸಂಸ್ಕೃತಿಯಿಂದಲೆ ಹುಟ್ಟಿಕೊಂಡ ಇನ್ನೊಂದು ಸಂಸ್ಕೃತಿ ಭೂತಾರಾಧನೆ. ಪ್ರಕೃತಿ ವಿಕೋಪ ಕಾರಣಗಳಿಂದ ಅಪಮೃತ್ಯುಗಳು ಸಂಭವಿಸುತ್ತಿದ್ದವು. ಇವುಗಳಿಂದ ರಕ್ಷಣೆ ಪಡೆಯಲು ಬಲಿಷ್ಟವಾದ ಶಕ್ತಿಗಳ ಆರಾಧನೆ ಮಾಡುತ್ತಿದ್ದರು" (ರಾಮಕೃಷ್ಣ ಆಚಾರ್ ಪಾಲ್ತಾಡಿ;೨೦೦೭;ಪುಟ೧೪೯). ಬಸರೂರಿನಲ್ಲಿ ದೊರಕಿದ ವಿಜಯನಗರದ ಅರಸರ ಕಾಲದ ಶಾಸನಗಳಲ್ಲಿ ದೈವಗಳ ಉಲ್ಲೇಖವಿದೆ. ಆ ಕಾಲಘಟ್ಟದಲ್ಲಿ ಆಡಳಿತದ ಅನುಕೂಲಕ್ಕಾಗಿ ಮಾಗಣೆಗಳು ರಚಿಸಲ್ಪಟ್ಟವು. ಮಾಗಣೆಯ ಮುಖ್ಯಸ್ಥರು ತಮ್ಮ ಪ್ರಜೆಗಳನ್ನು ಧಾರ್ಮಿಕ ಹಿನ್ನೆಲೆಯಲ್ಲಿ ಅಂಕೆಯಲ್ಲಿರಿಸಿಕೊಳ್ಳಲು ಅವರ ದೈವಗಳ ಮೇಲೆ ನಂಬಿಕೆ ಇರಿಸಿಕೊಂಡು ಭೂದಾನಗಳನ್ನು ನೀಡಿದರು. ಕ್ರಿ.ಶ. ೧೪೫೫ರ ಶಾಸನದಲ್ಲಿ ಬಸರೂರಿನ ಶ್ರೀದೇವಿ ಅಮ್ಮನವರ ದೇವಸ್ಥಾನದ ಮಾರಿ ಆರಾಧನೆಯ ಉಲ್ಲೇಖವಿದೆ. ಉಗ್ರರೂಪದ ಮಾರಿಯನ್ನು ಸಂತುಷ್ಟಗೊಳಿಸಿದರೆ ಊರಿಗೆ ಬರುವ ಕೆಟ್ಟದ್ದನ್ನು, ದನಕರುಗಳಿಗೆ ಬರುವ ರೋಗವನ್ನು, ಮಕ್ಕಳು ಮರಿಗಳಿಗೆ ಬರುವ ಕಾಯಿಲೆಯನ್ನು ಕಳೆಯುವಳು ಎಂಬ ನಂಬಿಗೆಯಿದೆ. ಕ್ರಿ.ಶ. ೧೫೪೬ರ ಬಸರೂರಿನ ಶಾಸನ ಬೊಬ್ಬರ್ಯನ ತೋಟವನ್ನು ಉಲ್ಲೇಖಿಸಿದೆ. ಇದರಿಂದ ೧೫ನೇ ಶತಮಾನಕ್ಕಿಂತಲೂ ಹಿಂದೆ ಬಸರೂರಿನಲ್ಲಿ ಬಬ್ಬರ್ಯನ[೬೧] ಆರಾಧನೆ ಇದ್ದಿತ್ತು ಎಂಬುದು ಸ್ಪಷ್ಟವಾಗುತ್ತದೆ. ಬಸರೂರಿನಲ್ಲಿ ಮಲೆಯಾಳಿ ಬಬ್ಬರ್ಯನ ಉರುಗಳು ಇವೆ. ಇದರಿಂದ ಬಸರೂರು ಭಗವತಿ ಆರಾಧನೆಯ[೬೨] ಕ್ಷೇತ್ರವಾಗಿತ್ತೆಂದು ತಿಳಿಯುತ್ತದೆ.

(ಎ) ಸಾಮಾಜಿಕ ಕಾರ್ಯಗಳು

ಬಸರೂರು ದಾನ-ಧರ್ಮ ಸಮಾಜಸೇವೆ ಮೂಲಕ ಧರ್ಮಪಟ್ಟಣ ಎಂದು ಹೆಸರು ಪಡೆದಿರುವುದು ಶಾಸನಗಳ ಅಧ್ಯಯನದಿಂದ ತಿಳಿಯುತ್ತದೆ. ವಿಜಯನಗರದ ಅರಸರ ಕಾಲದಲ್ಲಿ ನೀರಾವರಿಗಾಗಿ ಕೆರೆಗಳು ನಿರ್ಮಾಣವಾಯಿತು. ಬಸರೂರಿನಲ್ಲಿ ಧರ್ಮಛತ್ರಗಳನ್ನು ಕಟ್ಟಿಸಿ ಯಾತ್ರಾರ್ಥಿಗಳಿಗೆ, ಯೋಗಿಗಳ ದಾಸೋಹಕ್ಕೆ ವ್ಯವಸ್ಥೆಮಾಡಲಾಗಿತ್ತು. ಜಾತ್ರೆ, ಉತ್ಸವದಂತಹ ವಿಶೇಷ ದಿನಗಳಲ್ಲಿ ಸಾರ್ವಜನಿಕರಿಗೆ ಕುಡಿಯುವ ನೀರಿನ

ವ್ಯವಸ್ಥೆಗೆ ಅರವಟ್ಟಿಗೆಗಳನ್ನು ನಿರ್ಮಿಸಲಾಗಿತ್ತು. ಮನುಷ್ಯರಿಗೆ ಮಾತ್ರವಲ್ಲ, ಪ್ರಾಣಿಗಳಿಗೂ ಗೋಗ್ರಾಸ ಮತ್ತು ನೀರಿನ ವ್ಯವಸ್ಥೆ ಮಾಡಿದ ವಿಚಾರವನ್ನು ಶಾಸನಗಳು ತಿಳಿಸುತ್ತದೆ. ಕ್ರಿಶ ೧೪೩೬ರ ಶಾಸನದಲ್ಲಿ ಮಹಾದೇವಕೆರೆಯ ಸಮೀಪದ ಅರಳಿ ಕಟ್ಟೆಯಲ್ಲಿ ಕುಡಿಯಲು ನೀರೆಯುವ ಬ್ರಾಹ್ಮಣನಿಗೆ ಭೂಮಿ ದಾನ ಮಾಡಿದ ಉಲ್ಲೇಖ ಬರುತ್ತದೆ (ಶೈಲಾಟಿ.ವರ್ಮಾ;೨೦೦೨;ಪುಟ:೮೪). ಜಾತ್ರೆ ಉತ್ಸವಾದಿ ದಿನಗಳಲ್ಲಿ ದೇವಾಲಯಕ್ಕೆ ಸೇರಿದ ದೇವರ ಕೆರೆಯು ನೀರನ್ನು ಅಪವಿತ್ರಗೊಳಿಸದೆ ಸಾರ್ವಜನಕರಿಗೆ ಉಪಯೋಗವಾಗುವಂತೆ ಮಾಡಿಸುವ ಸಲುವಾಗಿ ಕೆರೆಯ ಬಳಿಯ ಅರಳಿಮರಕ್ಕೆ ಸುತ್ತಲೂ ಕಟ್ಟೆಕಟ್ಟಿಸುತ್ತಿದ್ದರು ಮತ್ತು ನೀರೆಯುವ ಬ್ರಾಹ್ಮಣರನ್ನು ನೇಮಕಮಾಡುತ್ತಿದ್ದರು.

ಕ್ರಿ.ಶ.೧೬೦೪ರ ಶಾಸನವು ಧರ್ಮಶಾಲೆಯೊಂದರ ಗೋಗ್ರಾಸಕ್ಕೆ ೨೦೦ ವರಹ ಗದ್ಯಾಣವನ್ನು ಹಲರು ಸೆಟ್ಟಿಕಾರರು ದಾನಮಾಡಿದ ಉಲ್ಲೇಖವಿದೆ. ಬಸರೂರಿನಲ್ಲಿ ಗೋವುಗಳಿಗೆ ಗೋಶಾಲೆ ಇದ್ದಿತ್ತು ಎಂಬುದು ಇದರಿಂದ ತಿಳಿಯುತ್ತದೆ. ಬಸರೂರಿನ ಪರಪಳ್ಳಿ ನಾಯಕನ ಐತಿಹ್ಯವು ಗೋಗ್ರಾಸ, ಗೋಮಾಳದ ಬಗ್ಗೆ ಮಾಹಿತಿ ನೀಡುತ್ತದೆ. ಗೋವುಗಳಿಗೆ ನೀರು ಕುಡಿಯಲು ಕೆರೆಯ ಸಮೀಪದಲ್ಲಿ ಗಂಗೆ–ಗೌರಿ ಎಂಬ ನೀರಿನ ತೊಟ್ಟಿಯನ್ನು ನಿರ್ಮಿಸಿದ್ದರು. ಗೋವುಗಳ ಮೈತುರಿಕೆಗೆ ಗಂಟಿಕಲ್ಲು ಅಥವಾ ತುರಿಕೆಕಂಬ ನೆಡಿಸಿದ್ದರು. (ಚಿತ್ರ ೧) ಈ ಬಗೆಯ ಸಾಮಾಜಿಕ ಕಾರ್ಯ ಬಸರೂರಿನಲ್ಲಿ ನಡೆಯುತ್ತಿದ್ದಿತ್ತು.

ಬಸರೂರಿನ ಶಾಸನಗಳು ನೀಡುವ ಮಾಹಿತಿಗಳನ್ನು ಗಮನಿಸಿ ಈ ಪ್ರದೇಶದ ಸಂಸ್ಕೃತಿಯನ್ನು ತಿಳಿಯುವ ಪ್ರಯತ್ನಮಾಡಲಾಗಿದೆ. ಬಸರೂರಿನ ಶಾಸನಗಳ ಅಧ್ಯಯನದಿಂದ ಬಸರೂರಿನ ದೇವಾಲಯಯಗಳು ಮತ್ತು ದೈವಸ್ಥಾನಗಳಲ್ಲಿ ಕೃಷಿ ಸಂಬಂಧಿ ಅಚರಣೆಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡಲಾಗುತ್ತಿತ್ತು ಎಂಬುದು ತಿಳಿಯುತ್ತದೆ. ಬಸರೂರಿನಲ್ಲಿ ಮಾತೃವಂಶಿಯ ಕುಟುಂಬ ಪದ್ಧತಿ ವ್ಯಾಪಕವಾಗಿತ್ತು ಮತ್ತು ಮಹಿಳೆಯರು ಹೆಚ್ಚಿನ ಸ್ಥಾನಮಾನ ಪಡೆದಿದ್ದರು ಎನ್ನುವುದು ತಿಳಿಯುತ್ತದೆ. ಶಾಸನಗಳಿಂದ ಬಸರೂರಿನಲ್ಲಿ ನಡೆಯುತ್ತಿರುವ ತಾಂತ್ರಿಕ ಆಚರಣೆ ಯಾವ ಸ್ವರೂಪದ್ದು ಮತ್ತು ಅವುಗಳನ್ನು ಯಾವ ಕಾಲದಲ್ಲಿ ಯಾವ ಉದ್ದೇಶಗಳಿಗೆ ಮಾಡುತ್ತಿದ್ದರು ಎಂಬುದು ತಿಳಿದು ಬರುತ್ತದೆ. ಬಸರೂರಿನ ಅಗ್ರಹಾರ ಕೇರಿಯ ಮಡಿವಂತಿಕೆಯನ್ನು ಕೂಡಾ ಈ ಶಾಸನಗಳು ಹೊರಹಾಕುತ್ತದೆ. ಬಸರೂರಿನ ಒಂದು ಕಾಲಕ್ಕೆ ಬಳಿ, ಜನಸಮುದಾಯದ ಜೀವನದಲ್ಲಿ ಪ್ರಮುಖ ಪಾತ್ರವಹಿಸುತ್ತಿತ್ತು. ಆದರೆ ಬದಲಾದ ಕಾಲಘಟ್ಟದಲ್ಲಿ ಬಳಿಯನ್ನು ಅನುಸರಿಸುತ್ತಿರುವುದು ಅಪಮಾನವೆಂಬ ಮಟ್ಟಕ್ಕೆ ತಲುಪಿದೆ. ಅದರೆ ಸಾಮಾಜಿಕ ಶ್ರೇಣಿಯ ಕೆಳಸ್ಥರದಲ್ಲಿರುವವರು ಇಂದಿಗೂ ಬಳಿಯನ್ನು ಅನುಸರಿಸುತ್ತಿರುವುದು ಕಂಡು ಬರುತ್ತದೆ. ಬಸರೂರಿನ ಜನಸಾಮಾನ್ಯರ ಸಾಮಾಜಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ದೃಷ್ಟಿಶಾಸನಗಳಿಂದ ತಿಳಿಯುತ್ತದೆ. ಬಸರೂರಿನ ಪೂರ್ವ ಸಂಸ್ಕೃತಿಯ ಸ್ಮರಣೆಗೆ ಶಾಸನಗಳು ಅಮೂಲ್ಯ ಕೊಡುಗೆ ನೀಡಿದೆ.

## ಕೊನೆ ಟಿಪ್ಪಣಿಗಳು

೧. ಸಾಮಾಜಿಕ ಅಧ್ಯಯನವನ್ನು ಸಾಂಸ್ಕೃತಿಕ ಅಧ್ಯಯನವೆಂದು ಕರೆಯಬಹುದು ಎಂಬುದು ಚಿದಾನಂದಮೂರ್ತಿಯವರ ಅಭಿಪ್ರಾಯವಾಗಿದೆ.

೨. ಬಸರೂರಿನಲ್ಲಿ ವಿಪುಲವಾದ ಶಾಸನಗಳು ಸಿಕ್ಕಿವೆ. ಶಾಸನಗಳಗಂತೆ ಮೌಖಿಕ ಸಾಹಿತ್ಯ, ಸ್ಥಳನಾಮಗಳು ಸಂಸ್ಕೃತಿಯನ್ನು ಕಟ್ಟಿಕೊಡುತ್ತದೆ.

೩. ಬಸರೂರಿನ ಸಾಂಸ್ಕೃತಿಕ ಇತಿಹಾಸವನ್ನು ಕಟ್ಟಿಕೊಡಲು ಮೌಖಿಕ ಸಾಹಿತ್ಯ, ಸ್ಥಳನಾಮ, ಗ್ರಂಥಸ್ಥ ಸಾಹಿತ್ಯ, ಆರಾಧನೆ, ಆಚರಣೆ ಮುಂತಾದ ಆಕರಗಳಿವೆ.

೪. ಮಾತೃವಂಶೀಯತೆ ಅಂದರೆ ತಾಯಿಯ ಮೂಲಕ ತಮ್ಮವಂಶವನ್ನು ಗುರುತಿಸುವುದು. ಹೆಣ್ಣು ವಂಶವಾಹಕಳಾಗಿ ತನ್ನ ತವರು ಮನೆಯಲ್ಲಿ ಉನ್ನತ ಗೌರವ ಪಡೆಯುತ್ತಾಳೆ. ಆಸ್ತಿಯಹಕ್ಕು, ಉತ್ತರಾಧಿಕಾರ, ವಂಶೀಯತೆ ಮಾತೃವಂಶಿಯತೆಯನ್ನು ನಿರ್ಧರಿಸುತ್ತದೆ. ಎಲ್ಲಾ ಬಗೆಯ ಧಾರ್ಮಿಕ ಆಚರಣೆಗಳು ಹೆಣ್ಣು ಸಂತಾನದ ಮೂಲಕವೇ ಮುಂದುವರಿಯುತ್ತದೆ.

೫. ಭೂತಾಳ ಪಾಂಡ್ಯನ ಸೋದರಮಾವ ದೇವ ಪಾಂಡ್ಯನು ಬಾರಕೂರನ್ನು ಆಳುತ್ತಿದ್ದಾಗ, ಹೊಸದಾಗಿ ಕಟ್ಟಿದ ಹಡಗುಗಳನ್ನು ಸರಕುಗಳೊಂದಿಗೆ ನೀರಿಗೆ ಇಳಿಸುವಾಗ ಆತಂಕವಾಯಿತು. ಹೊಸ ಹಡುಗುಗಳಾದ್ದರಿಂದ ಕುಂಡೋದರಿ ಎಂಬ ಶಿವ ಗಣವು ನರಬಲಿಯನ್ನು ಕೇಳಿತು. ದೇವ ಪಾಂಡ್ಯನು ತನ್ನ ಮಡದಿ ಶಿವದೇವಿಯೊಂದಿಗೆ ಸಮಾಲೋಚನೆ ಮಾಡಿ ತನ್ನ ಏಳು ಮಂದಿ ಗಂಡು ಮಕ್ಕಳಲ್ಲಿ ಒಬ್ಬನನ್ನು ಬಲಿಕೊಡುವ ಸೂಚನೆ ಇತ್ತನು. ಮಡದಿ ಶಿವದೇವಿ ಕೋಪಗೊಂಡು ಮಕ್ಕಳೊಂದಿಗೆ ತವರಿಗೆ ಹೊರಟಳು. ದೇವಪಾಂಡ್ಯನು ಈ ವಿಷಯದಲ್ಲಿ ಚಿಂತಾಕ್ರಾಂತನಾಗಿರಲು ಆತನ ತಂಗಿ ಸತ್ಯವತಿ ತನ್ನ ಮಗ ಜಯಪಾಂಡ್ಯನನ್ನು ಬೂತಕ್ಕೆ ಬಲಿ ಕೊಡುವಂತೆ ಕೇಳಿಕೊಂಡಳು. ಆತನನ್ನು ಬಲಿಕೊಡಲು ದೇವಪಾಂಡ್ಯನು ಮುಂದಾದಾಗ ಕುಂಡೋದರಿ ಭೂತವು ಪ್ರಸನ್ನವಾಯಿತು. ಇನ್ನು ಮುಂದೆ ಜಯಪಾಂಡ್ಯನು ಭೂತಾಳ ಪಾಂಡ್ಯ ಎಂಬ ಹೆಸರಿನಿಂದ ರಾಜ್ಯಭಾರ ಮಾಡುತ್ತಾನೆ. ಮುಂದೇ ದೇವಪಾಂಡ್ಯನ ಆಸ್ತಿಗೆ ಮತ್ತು ಸಂಪತ್ತಿಗೆ ಒಡೆಯನಾಗುತ್ತಾನೆ ಎಂದು ಹೇಳಿತು. (ಶಿವರಾಮ ಶೆಟ್ಟಿ ಶಿರೂರು;೧೯೯೫;ಬಂಟರ ಮೂಲ ಒಂದು ಅಧ್ಯಯನ;ಪುಟ:೨೫)

೬. ಅಳಿಯ ಕಟ್ಟಿನಲ್ಲಿ ಆಸ್ತಿಯ ಹಕ್ಕು ಹೆಣ್ಣಿನದ್ದಾದರೂ, ಆಸ್ತಿಯನ್ನು ನೋಡಿಕೊಳ್ಳುವ ಅಧಿಕಾರವನ್ನು ಗಂಡು ಹೊಂದಿರುತ್ತಾನೆ. ಅರಸನ ಅಥವಾ ಯಜಮಾನನ ಉತ್ತರಾಧಿಕಾರಿಗಳು ಅವನ ಸಹೋದರಿಯ ಮಕ್ಕಳು. ಸರಕಾರದ ಸಾಮಾನ್ಯ ಕಾಯಿದೆಯಂತೆ ಆಸ್ತಿಯ ಪಾಲು ಅಳಿಯ ಸಂತಾನ ಕಟ್ಟಿನವರಲ್ಲಿಯೂ ಅವರ ಮಕ್ಕಳಿಗೆ ಹೋಗುವುದಿದೆ.ಆದರೆ ವಂಶಪಾರಂಪರ್ಯ ಅಧಿಕಾರ ಧಾರ್ಮಿಕ ಆಚರಣೆ ಸಂಬಂಧಪಟ್ಟ ಜವಾಬ್ದಾರಿ ಸಹೋದರ ಅಳಿಯನಿಗೆ ಸಿಗುತ್ತದೆ. ಈ ಅಳಿಯ ಕಟ್ಟು ಭೂತಾಳ ಪಾಂಡ್ಯನಿಂದ ಬಂದಿತ್ತು ಎಂಬುದು ಕೆಲವರ ಅಭಿಪ್ರಾಯವಾಗಿದೆ.

೭ ಬಸರೂರಿನ ಮಹಾಲಿಂಗೇಶ್ವರ ದೇವಾಲಯದಲ್ಲಿ ನಿತ್ಯವೂ ಐದು ಮಂದಿ ದೇವದಾಸಿಯರು ಆರತಿತಟ್ಟೆಯನ್ನು ಕೈಯಲ್ಲಿ ಹಿಡಿದು ದೇವರದೀಪದಿಂದ ಆರತಿ ತಟ್ಟೆಯನ್ನು ಬೆಳಗಿಸಿ ಹಾಡನ್ನು ಹಾಡುತ್ತ ಕುಣಿಯುತ್ತಾರೆ.

೮. ಮಹಾಲಿಂಗೇಶ್ವರ ದೇವಾಲಯದಲ್ಲಿ ರಂಗಭೋಗ ನಡೆಸುವ ದೇವದಾಸಿಯನ್ನು ಪಾತ್ರದವರು

ಎಂದು ಕರೆಯುತ್ತಾರೆ. ರಂಗಭೋಗವು ಕೂಡಾ ಒಂದು ಆರಾಧನ ಕ್ರಮವಾಗಿತ್ತು. ಇಂದು ಸಾಂಕೇತಿಕವಾಗಿದೆ.

೯. ನಖರರು ಎಂಬ ವ್ಯಾಪಾರಿಗಳಿಂದ ಈ ದೇವಾಲಯ ಸ್ಥಾಪನೆಯಾಯಿತು ಎಂಬುದು ಪ್ರತೀತಿ.

೧೦. ಈ ದೇವಸ್ಥಾನಕ್ಕೆ ದಾಖಲೆಗಳಲ್ಲಿ ಶ್ರೀ ದುರ್ಗಾದುರ್ಗಾಪರಮೇಶ್ವರಿ ದೇವಸ್ಥಾನವೆಂದು ಹೆಸರಿದೆ. ಈಗ ಇದನ್ನು ಶ್ರೀದೇವಿ ಅಮ್ಮನವರ ದೇವಸ್ಥಾನವೆಂದು ಕರೆಯುವುದು ವಾಡಿಕೆ.

೧೧. ಬಸರೂರಿನಲ್ಲಿ ತೆಲುಗರ ಹಿತ್ತಲನ್ನೇ ಸೀಮೆಗಾರರು ಇದ್ದ ಹಿತ್ತಲು ಎಂದು ಕರೆದಿರಬೇಕು. ಸೀಮೆಗಾರರು ಎಂದರೆ ಈ ನೆಲದವರಲ್ಲ ಹೊರಪ್ರದೇಶದವರು.

೧೨. ಮಾಡಿದ ತಪ್ಪನ್ನು ಒಪ್ಪಿಕೊಂಡು ವೈಯಕ್ತಿಕ ದಂಡವನ್ನು ನೀಡುವುದು.

೧೩. ಅಂಜುಮಾನ್‌ದಿಂದ ಹಂಜಮಾನ್ ಬಂದಿದೆ. ವ್ಯಾಪಾರದ ದೃಷ್ಟಿಯಿಂದ ಭಾರತದ ಕರಾವಳಿಗುಂಟ ಅಲ್ಲಲ್ಲಿ ನೆಲೆಸಿರುವ ಪರ್ಶಿಯನ್ ದೇಶದ ವರ್ತಕರ ಠಾಣ್ಯವನ್ನು ಹಂಜಮಾನ್ ಎಂಬ ಶಬ್ದ ಸೂಚಿಸುತ್ತದೆ.

೧೪. ನೂಲುಹಬ್ಬ, ಪಟಗಾರರು ರೇಶ್ಮೆನೂಲಿನಲ್ಲಿ ಏಳು, ಒಂಭತ್ತರಂತೆ ಮೆಣಸಿನಕಾಯಿಗಳನ್ನು ಕಟ್ಟಿ ಕೊಡುವರು, ಹೋಮಹವನಾದಿಗಳ ಬಳಿಕ ದೇವರಿಗೆ ಜನಿವಾರ ಹಾಕುವುದು.

೧೫. ರಮೇಶ ಕೆ.ವಿ.ಯವರು ನಖರರು ವಿದೇಶಿ ಸರಕುಗಳನ್ನು ಮಾರುವ ವ್ಯಾಪಾರಿಗಳೆಂದೂ ಈ ಸಂಘದವರು ಕಟ್ಟಿಸಿದ ಬಸದಿಗೆ, ದೇವಾಲಯಗಳಿಗೆ ಅವರ ಹೆಸರಿನಿಂದಲೇ ಕರೆಯುವ ರೂಢಿಯಿದ್ದಿತ್ತು ಎನ್ನುತ್ತಾರೆ.

೧೬. ವಿಜಯನಗರದ ಅರಸರು ಮಂಗಳೂರು, ಭಟ್ಕಳ, ಹೊನ್ನಾವರ ಬಂದರುಗಳ ಮೂಲಕ ಅರಬ್, ಪರ್ಷಿಯಾ ಮೊದಲಾದ ದೂರದೇಶಗಳಿಂದ ಕುದುರೆಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು. ಇಂಥ ವ್ಯಾಪಾರದಲ್ಲಿ ಸೆಟ್ಟರು ಭಾಗವಹಿಸುತ್ತಿದ್ದರು. ಮೂಡಬಿದಿರೆ ಚಂದ್ರನಾಥ ಬಸದಿಯ ಶಾಸನದಲ್ಲಿ ಕುದುರೆಯ ನೇಮಣ್ಣ ಸೆಟ್ಟಿಯ ಉಲ್ಲೇಖವಿದೆ.

೧೭. ಬಸರೂರಿನಲ್ಲಿ ಕೋಟೆ ಕ್ಷತ್ರೀಯರು ನವರಾತ್ರಿಯಲ್ಲಿ ಕತ್ತಿಪೂಜೆ ಮಾಡುತ್ತಾರೆ.

೧೮. ತಂತ್ರಿಗಳು, ಪಾತಾಳಿಗಳು ಮೇಲುಶಾಂತಿ, ಉಪಾದಿವಂತರು, ಕೀಳುಶಾಂತಿ, ಹುಟ್ಟಿನವರು, ಕಟ್ಟಿನವರು ಕಸಿನಕೆಲಸ, ಮೇಲ್ ವಾದ್ಯದವರು, ಪಂಚವಾದ್ಯದವರು.

೧೯. ಶಕವರ್ಷ ೧೪೨೮ ಪ್ರಭವ, ಕಾರ್ತಿಕ ಶುಕ್ಲ ೧೫ ಎಂದಿದೆ. ಹಾಗಾಗಿ ಅದು ದೀಪಾವಳಿ ಹಬ್ಬವಲ್ಲ ದೀಪೋತ್ಸವ. ಆ ದಿನದಲ್ಲಿ ತುಳುನಾಡಿನ ದೇವಾಲಯಗಳಲ್ಲಿ ನಂದಾದೀವಿಗೆ, ತುಪ್ಪದ ದೀವಿಗೆ, ತೆರುವಿನ ದೀವಿಗೆ, ಧಾರದೀವಿಗೆ, ನೆರೆಯದೀವಿಗೆ, ಒಳಸುತ್ತು ಪೌಳಿಯ ದೀವಿಗೆ, ವೊಳತಳಿ ದೀವಿಗೆಗಳೆಂಬ ವಿವಿಧ ಬಗೆಯ ದೀಪಗಳನ್ನು ಇಡುತ್ತಾರೆ. ದೀವಳಿಗೆ ಎಂದರೆ ದೀಪದ+ಆಳಿ(ಗುಂಪು)–ದೀವಳಿ ಎಂದು ಸಮಸ್ತಪದ ಮಾಡಬಹುದು.

೨೦. ಬಸರೂರಿನ ಮಹಾಲಿಂಗೇಶ್ವರ ಮತ್ತು ಧರ್ಮಸ್ಥಳದ ಮಂಜುನಾಥ ಇಬ್ಬರು ಒಂದೇ ದಿನ ಒಂದೇ ಗಳಿಗೆಯಲ್ಲಿ ಸ್ಥಾಪನೆಯಾಗಬೇಕೆಂಬ ಐತಿಹ್ಯದ ಹಿಂದಿರುವ ರಹಸ್ಯ ಅಧ್ಯಯನ ಯೋಗ್ಯವಾಗಿದೆ.

೨೧. ಬಸರೂರಿನ ಶ್ರೀದೇವಿಅಮ್ಮನವರ ದೇವಸ್ಥಾನದಲ್ಲಿ ನಾಗಬಂಧದಿಂದ ಕೂಡಿದ ಮಾರಿ ಮುಖವಾಡವಿದೆ.

೨೨. ಬಸರೂರಿನಲ್ಲಿ ಕುರಿ ಬಲಿಕೊಡುವುದನ್ನು ಕುರಿ ಹೊಡೆಯುವುದು ಎಂದು ಕರೆಯುತ್ತಾರೆ.

೨೩. ಹೊಳೆಯಲ್ಲಿ ತೇಲಿ ಹೋಗುವುದು ಎಂದರ್ಥ.

೨೪. ಆಳುವ ಮನೆತನದ ಬಂಟರನ್ನು ಆಶ್ರೀತರು, ಒಡೆಯರು ಎಂದು ಕರೆಯುತ್ತಾರೆ. ಬಾರ್ಕೂರಿನಲ್ಲಿದ್ದ ವಿಜಯನಗರದ ಅಧಿಕಾರಿಗಳನ್ನು ಒಡೆಯರು ಎಂದು ಕರೆಯುತ್ತಾರೆ. ಉಡುವರ ಎಂಬುದು ವೊಡೆಯರು ಎಂದಿರಬೇಕು.

೨೫. ಅನ್ನಂಟರ ಬಳಿಯನ್ನು ಅವನಟ್ಟ ಬಳಿಯೆಂದು ಕೂಡಾ ಕರೆಯುತ್ತಾರೆ. ದೇವರು ಎಲ್ಲರಗೂ ಬಳಿ ನೀಡುತ್ತ ಹೋದನಂತೆ. ಅವನು ಊಟಕ್ಕೆ ಹೋಗುವ ಹೊತ್ತಿನಲ್ಲಿ ಕೆಲವರು ಬಳಿ ಕೇಳಲು ಹೋದರು. ಊಟಕ್ಕೂ ತೊಂದರೆ ಕೊಡುವವರನ್ನು ನೋಡಿ ಅವನಟ್ಟ ಬಳಿ ನಿಮ್ಮದು ಹೋಗಿ ಎಂದು ಬೈದನಂತೆ ಅಂದಿನಿಂದ ಕೆಲವರಿಗೆ ಆ ಬಳಿ ಬಂದಿದೆ.

೨೬. ಶಾಸನಗಳಲ್ಲಿ ಉಪ್ಪಿನಕುಳೆ/ಹುಟ್ಟಿನಕುಳೆ/ಉಪ್ಪ್ಯನ್ನಾಯ ಎಂಬ ಪದಗಳು ಬಳಕೆಯಾಗಿದೆ. ಉಪ್ಪಿನ ಬಳಿಯ ಹೆಂಗಸರು ಉಪ್ಪಿಗೆ ಕೈಕಾಕುತ್ತ ಇರಬೇಕು ಎಂಬ ಗಾದೆಯಿದೆ. ಉದ್ಯೋಗದಿಂದ ಈ ಬಳಿ ಹುಟ್ಟಿದಂತೆ ಕಾಣುತ್ತದೆ.

೨೭. ತೋಳಹರ ಬಳಿ/ತೋಳಾರ ಬಳಿ ಈ ಬಳಿಯವರು ಸುರಾಲಿನ ತೋಳಹರ ವಂಶದವರು. ಇವರ ಕುಲದೇವರು ಮಹಾದೇವ. ತೋಳಾರ ಎಂದರೆ ದಂಡಿನ ಉಸ್ತುವಾರಕ. ಬಸರೂರಿನ ಬಸರೂರು ಮನೆಯವರು, ಕೊಂಗವಳ್ಳಿಯ ಕೊರ್ಗಿ ಮನೆಯವರು, ಬಸರೂರಿನ ಮೇರ್ಡಿ ಮನೆಯವರು ಈ ಬಳಿಯವರು. ಇಂದಿರಾ ಹೆಗಡೆಯವರು ಕೊಂಗವಳ್ಳಿ ಬಳಿ ಎಂಬುದನ್ನು ಬಳಿಯೆಂದು ಭಾವಿಸಿ ಕೊಂಗವಳ್ಳಿ ಮತ್ತು ತೋಳಹರ ಬಳಿ ಕೂಡು ಬಳಿ ಎಂದಿದ್ದಾರೆ. ಆದರೆ ಕೊಂಗಬಳಿ ಎಂಬುದು ಬಸರೂರಿನ ಕೊಂಗವಳ್ಳಿ ಪ್ರದೇಶವಾಗಿದೆ.

೨೮. ಬಳಾಬಳಿಯವರೆ, ಕುಂದಾಪರದ ನಾಡವರಲ್ಲಿ ಕಾಣುವ ಬಾಳೆಬಳಿಯವರು. ಇವರು ಬಸರೂರಿನ ಪಣ್ತರ ಮನೆಯವರು ಮತ್ತು ಕೊಳ್ಕೆರೆಮನೆಯವರು ಆಗಿರುತ್ತಾರೆ.

೨೯. ಅರಿಯ ಬಳಿಯವರು ಎಂದರೆ ದೊಡ್ಡ ಸಾಗುವಳಿದಾರರು ಅರಿಗ ಎಂಬುದು ಜೈನರ ಮತ್ತು ಬಂಟರ ಉಪನಾಮವಾಗಿದೆ.

೩೦. ಬಸಲೂರ ಅರಮನೆಯ ಕಂಬಳದ ದೊಡ್ಡಬದು ಹಿಡಿದರೂ ನೆಂಟರೂ ಬಸಲೂರ ನೆಂಟರೂ ಓ...ಓ...ಓ

೩೧. ಬಸರೂರಿನಲ್ಲಿ ಬಬ್ಬರ್ಯನನ್ನು ಬ್ರಾಹ್ಮಣ ಎಂದು ಭಾವಿಸುತ್ತಾರೆ. ಆತನ ಉರುವಿಗೆ ಜನಿವಾರ ಹಾಕುತ್ತಾರೆ. ಇದು ಸಸ್ಯಾಹಾರಿ ದೈವವಾಗಿದೆ. ಈ ದೈವ ರಾತ್ರಿ ಹೊತ್ತು ದಿವಡಿಗೆ ಹಿಡಿದು ನಗ್ನವಾಗಿ ನಡೆದು ಹೋಗುತ್ತದೆ ಎಂದು ನಂಬಿರುತ್ತಾರೆ. ಮುಖ್ಯವಾಗಿ ಜಾನುವಾರಗಳಿಗೆ ತೊಂದರೆ ಆಗದಂತೆ ರಕ್ಷಿಸುತ್ತಾನೆ ಎಂಬ ಕಾರಣಕ್ಕೆ ವರ್ಷಕ್ಕೊಂದು ಬಾರಿ ಉಪ್ಪು ಹಾಕದೇ ಅಕ್ಕಿ ರೊಟ್ಟಿ ಮಾಡಿ ಒಪ್ಪಿಸುತ್ತಾರೆ.

೩೨. ಮಳೆಯಾಳ ಸಂಪ್ರದಾಯದ ಭಗವತಿ ಆರಾಧನೆಯಲ್ಲಿ ಕೆಲವು ಕಡೆ ಭಗವತಿ ಸ್ಥಾನ ಸಂಕೀರ್ಣದಲ್ಲಿ ಬಬ್ಬರ್ಯನಿಗೆ ಕಿರುಗುಡಿ ಇರುವುದುಂಟು(ಅಮೃತ ಸೋಮೇಶ್ವರ;೨೦೦೭;ಪುಟ:೧೮೩)

★★★

# ಅಧ್ಯಾಯ ನಾಲ್ಕು

# ಸಾಹಿತ್ಯ ಮತ್ತು ಸಂಸ್ಕೃತಿ

**೪.೧. ಮೌಖಿಕ ಸಾಹಿತ್ಯ**

೪.೧.೧. ಕತೆಗಳು

೪.೧.೨. ಐತಿಹ್ಯಗಳು

೪.೧.೩. ಪುರಾಣಗಳು

೪.೧.೪. ಜನಪದ ಗೀತೆಗಳು

೪.೧.೫. ಪಾಡ್ದನ

೪.೧.೬. ಗಾದೆಗಳು

**೪.೨. ಗ್ರಂಥ ಸಾಹಿತ್ಯ**

೪.೨.೧. ಕೆಳದಿಯ ನೃಪವಿಜಯ

೪.೨.೨. ಬಸರೂರು ಭಾಗ್ಯ

೪.೨.೩. ಮೈಮನಗಳ ಸುಳಿಯಲ್ಲಿ

# ಅಧ್ಯಾಯ ನಾಲ್ಕು

# ಸಾಹಿತ್ಯ ಮತ್ತು ಸಂಸ್ಕೃತಿ

ಸಾಹಿತ್ಯ ಅದು ಮೌಖಿಕ ಅಥವಾ ಲಿಖಿತವಾಗಿರಲಿ ಸಂಸ್ಕೃತಿ ಚಿಂತನೆಗೆ ಮೂಲ ಆಕರವಾಗಿದೆ[1]. ಭೂತ ಮತ್ತು ವರ್ತಮಾನದ ಜೀವನವನ್ನು ಅರಿಯಲು ಸಾಹಿತ್ಯವು ಉಳಿದೆಲ್ಲಾ ಮಾರ್ಗಗಳಿಗಿಂತ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ. ಸಮಾಜದಲ್ಲಿ ಆಗುವ ಬದಲಾವಣೆಗಳಿಗೆ ಅನುಗುಣವಾಗಿ ಸಾಹಿತ್ಯವು ಬದಲಾಗುತ್ತಾ ಹೋಗುತ್ತದೆ. ಜನರ ಅಭಿರುಚಿಗೆ ತಕ್ಕಂತೆ ಇದು ರಚಿತವಾಗಿರುವುದರಿಂದ ಜನರ ಜೀವನಕ್ಕೆ ಹಿಡಿದ ಕೈಗನ್ನಡಿಯಾಗಿರುತ್ತದೆ. ಒಂದು ರೀತಿಯಲ್ಲಿ ಸಾಹಿತ್ಯವು ಸಂಸ್ಕೃತಿಯ ವ್ಯಾಖ್ಯಾನವನ್ನು ಮಾಡುತ್ತದೆ. ಮಾನವನ ಅಂತರಂಗದ ಪರಿಪಕ್ವತೆಯನ್ನು ಆಂತರಿಕ ಜೀವನ ವ್ಯವಸ್ಥೆಯನ್ನು ಸಂಸ್ಕೃತಿ ಎಂದು ಒಪ್ಪಿಕೊಂಡಿರುವಾಗ ಈ ಪ್ರಜ್ಞೆಯಿಂದ ಹುಟ್ಟಿದ ಭಾಷೆ,ಸಾಹಿತ್ಯವು ಸಂಸ್ಕೃತಿಯ ವ್ಯಾಪ್ತಿ ಒಳಗಡೆ ಬರುತ್ತದೆ. ಸಾಂಸ್ಕೃತಿಕ ಅಧ್ಯಯನದಲ್ಲಿ ಸಾಹಿತ್ಯವು ಅತ್ಯಂತ ಪ್ರಮುಖವಾಗಿದೆ.ಒಂದು ಪ್ರದೇಶದ ಜನರಾಡುವ ಭಾಷೆ, ಆಚಾರ, ವಿಚಾರ, ಸಾಹಿತ್ಯ, ಕಲೆ, ಆಚರಣೆ, ಸಂಪ್ರದಾಯ ಮೊದಲಾದವುಗಳು ಸಾಹಿತ್ಯದಲ್ಲಿ ಅಡಕವಾಗಿರುತ್ತದೆ.ಅದು ಮೌಖಿಕವೂ ಗ್ರಂಥಸ್ಥವು ಆಗಿರಬಹುದು. ಒಂದು ಪ್ರದೇಶ ಯಾವುದೊ ಕಾರಣದಿಂದ ಜನಪ್ರಿಯತೆಯನ್ನುಗಳಿಸಿಕೊಂಡಾಗ ಗ್ರಂಥಸ್ಥ ಸಾಹಿತ್ಯ ತಾನು ತಾನಾಗಿಯೆ ಹುಟ್ಟುತ್ತದೆ. ಒಂದು ಪ್ರದೇಶದ ಭೂತವನ್ನು ವರ್ತಮಾನದಲ್ಲಿ ಕಾಣುವಂತಾಗಬೇಕಾದರೆ ಅದು ಮೌಖಿಕ ಸಾಹಿತ್ಯದಿಂದ ಮಾತ್ರ ಸಾಧ್ಯವಾಗುತ್ತದೆ. ಜನಪದ ಸಾಹಿತ್ಯವು ಗ್ರಂಥಸ್ಥ ಸಾಹಿತ್ಯಕ್ಕೆ ಪ್ರೇರಣೆ ಎಂಬುದು ವಾಸ್ತವ ಸತ್ಯ. ಒಂದು ಪ್ರದೇಶದ ಜನರ ಒಟ್ಟು ಜೀವನ ಕ್ರಮವೇ ಸಂಸ್ಕೃತಿ ಎಂದಿರುವಾಗ, ಆ ಜನರ ಸಂಸ್ಕೃತಿಯು ಅವರ ಭಾಷೆ ಮತ್ತು ಸಾಹಿತ್ಯದಲ್ಲಿ ಅಭಿವ್ಯಕ್ತವಾಗುತ್ತದೆ. ಒಂದು ಪ್ರದೇಶವು ಧಾರ್ಮಿವಾಗಿ, ಸಾಂಸ್ಕೃತಿವಾಗಿ, ಜನಪ್ರೀಯಗೊಂಡಷ್ಟು ಅದರ ಕುರಿತು ಸಾಹಿತ್ಯ ಹುಟ್ಟುತ್ತ ಹೋಗುತ್ತದೆ. ಒಂದು ಪ್ರದೇಶದ ಅಧ್ಯಯನದಲ್ಲಿ ಆ ಕ್ಷೇತ್ರದ ಸಾಹಿತ್ಯ ಮತ್ತು ಕಲೆ ಪ್ರಾಥಮಿಕ ಆಕರಗಳಾಗುತ್ತವೆ.ಸಾಹಿತ್ಯವು

ಸಂಸ್ಕೃತಿಯ ವಾಹಕ, ಭಾಷೆಯು ಸಾಹಿತ್ಯಕ್ಕೆ ಮಾಧ್ಯಮ. ಈ ಕಾರಣದಿಂದಲೇ ಬಸರೂರಿನ ಸಾಂಸ್ಕೃತಿಕ ಅಧ್ಯಯನದ ಸಂದರ್ಭದಲ್ಲಿ ಬಸರೂರಿನಲ್ಲಿ ಸಿಗುವ ಬಸರೂರಿನ ಕುರಿತಾಗಿರುವ ಮೌಖಿಕ ಮತ್ತು ಗ್ರಂಥಸ್ಥ ಸಾಹಿತ್ಯವನ್ನು ಅನುಲಕ್ಷಿಸಿ ಅಧ್ಯಯನ ಮಾಡಲಾಗಿದೆ.

ಭಾಷಿಕ ಆಕರಗಳ ಮೂಲಕ ಬಸರೂರಿನ ಸಾಂಸ್ಕೃತಿಕ ಅಧ್ಯಯನ ಮಾಡಲು ಸಾಧ್ಯವಾಗುತ್ತದೆ.ಬಸರೂರು ಮಾಗಣೆಯ ಪಂಚಗ್ರಾಮಗಳಲ್ಲಿ ದೊರಕುವ ಭಾಷಿಕ ಸಾಮಾಗ್ರಿಗಳು,ಈ ಪ್ರದೇಶದ ಸಾಹಿತ್ಯಿಕ ಆಕರಗಳು ಮಾತ್ರವಾಗಿರದೆ ಬಸರೂರಿನ ಜನವರ್ಗದ, ಸಾಮಾಜಿಕ, ಸಾಂಸ್ಕೃತಿಕ, ಐತಿಹಾಸಿಕ, ಧಾರ್ಮಿಕ, ರಾಜಕೀಯ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ತಿಳಿಸಿಕೊಡುತ್ತದೆ. ಭಾಷೆ ಸಂಸ್ಕೃತಿಯ ಪ್ರಮುಖ ಅಂಗ ಬಹು ಸಂಸ್ಕೃತಿಯ ಅಧ್ಯಯನದಲ್ಲಿ ಭಾಷೆ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಬಸರೂರಿನ ಸಾಂಸ್ಕೃತಿಕ ಅಧ್ಯಯನದಲ್ಲಿ ಸಾಹಿತ್ಯಿಕ ಆಕರಗಳನ್ನು ಮೌಖಿಕ ಸಾಹಿತ್ಯ ಮತ್ತು ಗ್ರಂಥ ಸಾಹಿತ್ಯವೆಂದು ವಿಂಗಡಿಸಿಕೊಳ್ಳಲಾಗಿದೆ.

## ೪.೧ ಮೌಖಿಕ ಸಾಹಿತ್ಯ

ಬಸರೂರಿನ ಮಾಗಣೆಗಳಲ್ಲಿ ಮೌಖಿಕ ಸಾಹಿತ್ಯ ಹೇರಳವಾಗಿದೆ. ಜನಪದರ ಬದುಕಿನ ವಿವಿಧ ಸ್ತರಗಳಲ್ಲಿ ಮೌಖಿಕ ಸಾಹಿತ್ಯವು ಹುಟ್ಟಿ ಬೆಳೆದಿರುವುದನ್ನು ಕಾಣಬಹುದು. ಇಲ್ಲಿನ ಜನಸಮುದಾಯದ ಜೀವನ ಸಂಸ್ಕೃತಿಯನ್ನು ತಿಳಿದುಕೊಳ್ಳಲು ಮೌಖಿಕ ಸಾಹಿತ್ಯವು ಮಾಹಿತಿಯನ್ನು ಒದಗಿಸುತ್ತದೆ. ಅವುಗಳು ಕತೆ, ಐತಿಹ್ಯ, ಪುರಾಣ, ಜನಪದಗೀತೆ, ಪಾಡ್ದನ, ಗಾದೆಗಳ ಮೂಲಕ ಅಭಿವ್ಯಕ್ತಗೊಂಡಿರುವುದನ್ನು ಕಾಣಬಹುದು. ಬಸರೂರಿನಲ್ಲಿ ದೊರಕುವ ಐತಿಹ್ಯಗಳು ಇಲ್ಲಿನ ಜನಸಮುದಾಯದ ಸುತ್ತ ಕೌತುಕದ ಕತೆಗಳನ್ನು, ಬಸರೂರು ಹುಟ್ಟಿನ ಕುರಿತಾದ ವಿಚಾರವನ್ನು, ದೇವಾಲಯ ನಿರ್ಮಾಣದ ಹಿಂದಿನ ರಹಸ್ಯವನ್ನು, ಇಲ್ಲಿನ ಜನರ ವ್ಯವಹಾರ ಚತುರತೆಯನ್ನು, ಬಸರೂರಿನ ಭೌಗೋಳಿಕ ಸನ್ನಿವೇಶವನ್ನು, ವಾರ್ಷಿಕಾವರ್ತನ ಆಚರಣೆಗಳನ್ನು, ಬಸರೂರಿನ ನ್ಯಾಯ ತೀರ್ಮಾನದ ರೀತಿ ನೀತಿಯನ್ನು, ಬಸರೂರಿನ ಜಾತಿ ಸಂಘರ್ಷವನ್ನು, ವೈದಿಕೇತರ ಮತ್ತು ವೈದಿಕ ಸಂಸ್ಕೃತಿಯ ನಡುವಿನ ಪ್ರತಿ ಸ್ಪರ್ಧೆಯನ್ನು ಅಧ್ಯಯನ ಮಾಡಲು ಆಕರಗಳಾಗುತ್ತವೆ. ಜನಪದ ಗೀತೆಗಳಿಂದ ಬಸರೂರಿನ ತೇರು, ಬಸರೂರಿನ ಓಕುಳಿ, ಬಸರೂರಿನ ದೇವದಾಸಿಯರ ಜೀವನಕ್ರಮ, ಜನಸಮುದಾಯದ ಪಾರಂಪರಿಕ ಕಸುಬು ಒಟ್ಟಾರೆ ಬಸರೂರಿನ ಸಂಸ್ಕೃತಿಯನ್ನು ಅಧ್ಯಯನ ಮಾಡಲು ಸಾಧ್ಯವಾಗುತ್ತದೆ.

ಬಸರೂರಿನ ಮೌಖಿಕ ಸಾಹಿತ್ಯವನ್ನು ಕತೆಗಳು, ಐತಿಹ್ಯಗಳು, ಪುರಾಣಗಳು, ಜನಪದ ಗೀತೆಗಳು, ಪಾಡ್ದನ, ಗಾದೆಗಳು ಎಂದು ವಿಭಾಗಿಸಿಕೊಂಡು ಅಧ್ಯಯನ

ಕೈಗೊಳ್ಳಲಾಗಿದೆ. ಇವುಗಳ ಮೂಲಕ ಬಸರೂರಿನ ಬಹುಮುಖಿ ಸಂಸ್ಕೃತಿಯನ್ನು ಸಂಸ್ಕೃತಿಯೊಂದಿಗಿನ ಸಾಹಿತ್ಯದ ಸಂಬಂಧವನ್ನು ತಿಳಿಯಲು ಸಹಾಯಕವಾಗುತ್ತದೆ.

ಸಾಂಸ್ಕೃತಿಕ ಬದುಕು ಎಂದರೆ ಒಂದರ್ಥದಲ್ಲಿ ಸಾಮಾಜಿಕ, ಧಾರ್ಮಿಕ, ರಾಜಕೀಯ, ಭಾಷಿಕ ಹಾಗೂ ಸಾಹಿತ್ಯಿಕ ಸ್ಥಿತಿಗತಿಗಳನ್ನು ಒಳಗೊಂಡಿರುತ್ತದೆ. ಇವುಗಳು ಮಾನವ ಸಂಸ್ಕೃತಿಯ ಭಾಗವಾಗಿದೆ. ಮೌಖಿಕ ಪರಂಪರೆಯಲ್ಲಿ ಉಳಿದು ಬೆಳೆದು ಬಂದ ಜನಪದ ಸಂಸ್ಕೃತಿಯ ಕುರುಹುಗಳಲ್ಲಿ ಮೌಖಿಕ ಸಾಹಿತ್ಯ ಒಂದು.ಈ ಮೌಖಿಕ ಸಾಹಿತ್ಯದಲ್ಲಿ ಐತಿಹ್ಯಯೆಂಬುದು ಒಂದು ಪ್ರಕಾರ. ಬಸರೂರಿನಲ್ಲಿ ಇಂತಹ ಸಾಕಷ್ಟು ಐತಿಹ್ಯಗಳಿವೆ. ಅವುಗಳ ಅಧ್ಯಯನದ ಮೂಲಕ ಬಸರೂರಿನ ಸಾಂಸ್ಕೃತಿಕ ಇತಿಹಾಸವನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ.

ಬಸರೂರಿನಲ್ಲಿ ದೊರಕುವ ಐತಿಹ್ಯಗಳನ್ನು ಕತೆಗಳು, ಪುರಾಣಗಳು ಎಂದು ಅಧ್ಯಯನದ ದೃಷ್ಟಿಯಿಂದ ವಿಭಾಗಿಸಿಕೊಳ್ಳಲಾಗಿದೆ. ಐತಿಹ್ಯಗಳಲ್ಲಿ ವ್ಯಕ್ತಿಐತಿಹ್ಯ, ಸ್ಥಳೈತಿಹ್ಯ, ಘಟನಾ ಐತಿಹ್ಯಗಳಿವೆ. ಅವುಗಳನ್ನು ಒಂದೇ ಕರಂಡಿಕೆಯಲ್ಲಿ ಗಮನಿಸಲಾಗಿದೆ. ಬಸರೂರಿನ ಸಾಂಸ್ಕೃತಿಕ ಅಧ್ಯಯನಕ್ಕೆ ಐತಿಹ್ಯಗಳ ಜೊತೆಗೆ ಕತೆಗಳು, ಪುರಾಣಗಳು ಪೂರಕವಾದ ಮಾಹಿತಿಯನ್ನು ನೀಡುತ್ತದೆ. ಈ ಅಧ್ಯಾಯದಲ್ಲಿ ಕತೆಗಳನ್ನು, ಐತಿಹ್ಯಗಳನ್ನು, ಪುರಾಣಗಳನ್ನು ಬೇರೆ ಬೇರೆಯಾಗಿ ನೋಡಿದರೂ ಅವುಗಳೆಲ್ಲಾ ಒಂದೇ ಪ್ರಬೇಧವೆಂದು ಗುರುತಿಸಿಕೊಳ್ಳಲಾಗಿದೆ. ಕಥೆ ಐತಿಹ್ಯ ಮತ್ತು ಪುರಾಣಗಳಿಗೆ ಗದ್ಯವೇ ನಿರೂಪಣೆಯ ಮಾಧ್ಯಮವಾಗಿರುವುದರಿಂದ ಈ ಮೂರನ್ನು ಪ್ರತ್ಯೇಕವಾಗಿ ನೋಡುವ ಅಗತ್ಯವಿಲ್ಲ. ಐತಿಹ್ಯವು ಕಥೆಯ ಒಳಪ್ರಬೇಧವಾಗಿದೆ . ಇಲ್ಲಿ ಕೆಲವು ಪುರಾಣಗಳನ್ನು ಐತಿಹ್ಯಗಳೆಂದು ಹೇಳಲಾಗಿದೆ. ಐತಿಹ್ಯಗಳೇ ಬೆಳವಣಿಗೆ ಹೊಂದಿ ಪುರಾಣಗಳಾಗಿವೆ. "ಐತಿಹಾಸಿಕ ಘಟನೆಯೊಂದು ಕಂಠಸ್ಥ ಪರಂಪರೆಯೊಂದರಲ್ಲಿ ಮೊದಲು ಕಿವಿಮಾತು ಆಗಿ, ಬಳಿಕ ವದಂತಿಯಾಗಿ, ಆನಂತರ ಐತಿಹ್ಯವಾಗಿ ಕೊನೆಗೆ ಪುರಾಣವೇ ಆಗಿ ಪರಿವರ್ತನೆಗೊಳ್ಳುತ್ತದೆ" (ಸುಬ್ಬಣ್ಣ ರೈ.ಎ; ೧೯೯೪; ಪುಟ:೨೮).

ಬಸರೂರಿನ ಸಾಂಸ್ಕೃತಿಕ ಅಧ್ಯಯನಕ್ಕಾಗಿ ಇಲ್ಲಿ ದೊರಕಿದ ಮೌಖಿಕ ಸಾಹಿತ್ಯ ಪ್ರಕಾರಗಳಾದ ಐತಿಹ್ಯ, ಕಥೆ, ಪುರಾಣ, ಜನಪದ ಗೀತೆ, ಪಾಡ್ದನ, ಗಾದೆಗಳನ್ನು ಸಂಸ್ಕೃತಿಯ ಹಿನ್ನೆಲೆಯಲ್ಲಿ ಗಮನಿಸಲಾಗಿದೆ.

### ೪.೧.೧. ಕತೆಗಳು

ಮೌಖಿಕ ಸಾಹಿತ್ಯದಲ್ಲಿ ಕತೆಗಳು ಜನಪದ ಗದ್ಯ ನಿರೂಪಣೆಯ ಪ್ರಕಾರವಾಗಿದೆ.ಇದು ಕಲ್ಪಿತ ಅಥವಾ ನೈಜ ಕತೆಯ ನಿರೂಪಣೆಯಾಗಿದೆ. ಕತೆಯ ಮುಖ್ಯ ಉದ್ದೇಶ

ಮನರಂಜನೆಯಾಗಿದೆ.ಕತೆ ಎಂದರೆ ಹೇಳಿದ ಸಂಗತಿಯೆಂದು ಭಾವಿಸಬೇಕಾಗುತ್ತದೆ.

(ಅ) ಸರ್ರ್.....ಬಡ್.....ಬ್ಯಾಂ

ಒಮ್ಮೆ ಬಸರೂರಿಗೆ ಯಾವುದೋ ಊರಿನಿಂದ ಬಂದ ವಿದ್ವಾಂಸನೊಬ್ಬ ತನ್ನ ಪಾಂಡಿತ್ಯ ಪ್ರದರ್ಶಿಸುತ್ತ ಈ ಊರಿನಲ್ಲಿ ತನ್ನನ್ನು ಎದುರಿಸುವವರು ಯಾರು ಇಲ್ಲ ಎಂದು ಕೊಬ್ಬಿ ಹೋಗಿದ್ದನು. ಅವನನ್ನು ಎದುರಿಸಲು ಯಾರು ಮುಂದೆ ಬಾರದಿದ್ದಾಗ ಊರಿನ ಹಿರಿಯರಿಗೆ ಚಿಂತೆಯಾಯಿತು. ಏನು ಮಾಡುವುದು ಎಂದು ಯೋಚಿಸುತ್ತಿರುವಾಗ ಊರ ಹೊರಗಿರುವ ಗೌಡ ಸಾರಸ್ವತರ ನೆನಪಾಯಿತು.ಅವರನ್ನು ಕರೆಯಿಸಿಕೊಂಡು ವಿಷಯ ವಿವರಿಸಿದರು. ಆ ಪಂಥಾಹ್ವಾನವನ್ನು ಸ್ವೀಕರಿಸಿ ಆ ಪಂಡಿತನನ್ನು ಎದುರುಗೊಳ್ಳಲು ಹಳೆಯ ಕಡತಗಳನ್ನು ಹಿಡಿದು ಹಿರಿಯ ಗೌಡಸಾರಸ್ವತರು ಊರೊಳಗೆ ಬಂದರು. ಊರಲ್ಲಿ ಇವರಿಬ್ಬರ ಪಾಂಡಿತ್ಯ ನೋಡಲು ನೂರಾರು ಜನ ಸೇರಿದ್ದರು. ಗೌಡ ಸಾರಸ್ವತರು ವಿದ್ವಾಂಸನನ್ನು ಕುರಿತು ಗಂಭೀರವಾಗಿ ಸರ್...ಬಡ್...ಬ್ಯಾಂ ಎನಿದರ ಅರ್ಥ ಎಂದು ಕೇಳಿದರು. ಉತ್ತರ ಹೇಳಲಾಗದೇ ವಿದ್ವಾಂಸನು ಸೋಲೊಪ್ಪಿಕೊಂಡನು. ಶರಣಾದ ವಿದ್ವಾಂಸನು ಪ್ರಶ್ನೆಯ ಅರ್ಥವನ್ನು ನೀವೇ ಹೇಳಿ ಎಂದನು. ಅದಕ್ಕೆ ಅವರು ತೆಂಗಿನ ಮರದಿಂದ ಗರಿಯೊಂದು ಗಾಳಿಗೆ ಮುರಿದು ಬೀಳುವಾಗ 'ಸರ್ರ್' ಎಂದು ನೆಲಕ್ಕೆ ಬಿದ್ದಾಗ 'ಬಡ್' ಎಂಬ ಶಬ್ದವಾದರೆ ಗರಿಬೀಳುವ ರಭಸಕ್ಕೆ ಮರದಡಿಯಿದ್ದ ಆಡಿನ ಮರಿ ಭಯದಿಂದ 'ಬ್ಯಾಂ' ಎಂದು ಕೂಗುತ್ತ ಓಡಿಹೋಯಿತು ಎಂದರು. ಇದೇ ಸರ್ರ್...ಬಡ್...ಬ್ಯಾಂ ಎಂದರು. ಅಂದಿನಿಂದ ಗೌಡಸಾರಸ್ವತರನ್ನು ಪೇಟೆಯೊಳಗೆ ಸೇರಿಸಿಕೊಂಡರಂತೆ. ಜಾಗ ಕೊಡಿಸಿದ ತೆಂಗಿನ ಮರಕ್ಕೆ ಕೃತಜ್ಞತೆ ಸಲ್ಲಿಸಿದರಂತೆ.

(ಆ) ಪರಪಳ್ಳಿ ನಾಯಕ-ಬಸರೂರು ಪಂಚಾಯಿತಿ

ಪರಪಳ್ಳಿ ನಾಯಕ, ಪಲಿಪುಟ್ಟ ನಾಯಕ ಉಡುಪಿ ತಾಲೂಕಿನ ಬನ್ನಂಜೆಯವನು. ಈತನ ಸಮಾಜ ಕಾರ್ಯಚಟುವಟಿಕೆಗಳು[1] ಬಸರೂರಿಗೂ ಹಬ್ಬಿತ್ತು. ಬಸರೂರಿನಲ್ಲಿ ಪರಪಳ್ಳಿ ನಾಯಕ ಭೂಮಿಯನ್ನು ಪಡೆದು ಅದನ್ನು ಗೋಚರಕ್ಕೆಂದು ಬಿಟ್ಟಿದ್ದನು. ಹಾಗೆಯೇ ಆತನು ಬಸರೂರಿನಲ್ಲಿ ಚಿನ್ನ, ಬೆಳ್ಳಿ ವ್ಯಾಪಾರ ಮಾಡುತ್ತಿದ್ದನು. ಒಂದು ದಿನ ಬಸರೂರಿನಲ್ಲಿ ನಡೆದ ಪಂಚಾಯಿತಿಯಲ್ಲಿ ತಾರತಮ್ಯವುಂಟಾಗಿ ಅನ್ಯಾಯಕ್ಕೊಳಗಾದ ವ್ಯಕ್ತಿ ಪರಪಳ್ಳಿ ನಾಯಕನಲ್ಲಿ ದೂರು ಕೊಟ್ಟನು. ಪರಪಳ್ಳಿ ನಾಯಕ ನ್ಯಾಯಾನ್ಯಾಯ ತೂಗಿನೋಡಿ ನ್ಯಾಯತೀರ್ಮಾನ ಮಾಡಿ ಜನಮನ್ನಣೆಗಳಿಸಿದನು. ಇವನಿಂದಲೇ ಬಸರೂರು ಪಂಚಾಯಿತಿಕೆ ಎಂಬ ಮಾತು ಹುಟ್ಟಿಕೊಂಡಿತು ಎನ್ನುತ್ತಾರೆ. ಒಂದು ಸಲ ಕಾರಣಾಂತರದಿಂದ ಬಸರೂರಿಗೆ ಬಂದ ಪರಪಳ್ಳಿ ನಾಯಕನಿಗೆ ಅಲ್ಲಿ ಗೋಮಾಳ-ಗೋಚರಗಳೇನು ಕಾಣದೆ ಗೊವುಗಳ ಸ್ಥಿತಿಯ ಬಗ್ಗೆ ಅವನಿಗೆ ಮರುಕ ಉಕ್ಕಿ ಬಂತು.

ಗೋಮಾಳವನ್ನು ಮಾಡುವ ಉದ್ದೇಶದಿಂದ ಬಸರೂರಿನ ಭೂಮಾಲಿಕರಾದ ಪಂಚರಲ್ಲಿ ಸ್ವಲ್ಪ ನೆಲವನ್ನು ಕೇಳಿದ. ಸಾಮಾನ್ಯನಂತೆ ಕಾಣುವ ಪರಪಟ್ಟ ನಾಯಕನನ್ನು ಲಘುವಾಗಿ ಕಂಡ ಊರಿನ ಪಂಚರು ಒಂದು ಕಲ್ಲು ಮರಿಗೆಯಷ್ಟು ಹೊನ್ನು ಕೊಟ್ಟರೆ ಆ ಮರಿಗೆಯಷ್ಟೆ ಜಾಗಕೊಡಬಹುದೆಂದರು. ಪರಪಳ್ಳಿ ನಾಯಕನು ದೊಡ್ಡ ಕಲ್ಲುಮರಿಗೆಯನ್ನು ಚಾತುರ್ಯದಿಂದ ಕಡಿಸಿದ. ಅದರ ಬಾಯಿ ಕಿರಿದಾಗಿ ಒಡಲು ನಿಡಿದಾಗಿತ್ತು. ಹೊರಬದಿಯಲ್ಲಿ ಉಬ್ಬಿಕೊಂಡು ಹೆಚ್ಚು ಜಾಗವನ್ನು ಆಕ್ರಮಿಸುತ್ತಿತ್ತು. ಪರಪಳ್ಳಿ ನಾಯಕನು ಮಾತಿನಂತೆ ಮರಿಗೆ ಹೊನ್ನು ಕೊಟ್ಟನು. ಆ ಮರಿಗೆ ವ್ಯಾಪಿಸುವಷ್ಟು ನೆಲವನ್ನು ಪಡೆದನು. ಪಂಚರು ಎಣಿಸದಿದ್ದಷ್ಟು ನೆಲವನ್ನು ಆದು ಆವರಿಸಿತು. ಆದರೆ ಅವರೆಣಿಕೆಯ ಹೊನ್ನು ಮಾತ್ರ ಅದು ತನ್ನ ಹೊಟ್ಟೆಯಲ್ಲಿ ತುಂಬಿಕೊಂಡಿರಲ್ಲಿಲ್ಲ. ಊರಿನವರು ಒಡ್ಡಿದ ಜಾಲದಲ್ಲಿ ಅವರೇ ಸಿಕ್ಕಿ ಬೀಳಬೇಕಾದ ಪರಿಸ್ಥಿತಿ ಬಂದೊದಗಿತು. ಅಂದಿನಿಂದ ಬಸರೂರು ಪಂಚಾಯ್ತಿ ಎಂದು ಕರೆಯುವ ರೂಢಿಯಾತಂತೆ (ಸುಬ್ಬಣ್ಣ ರೈ.ಏ;೧೯೯೪;ಪುಟ:೬೬).

(ಇ) ಬಸರೂರು ಪಂಚಾಯಿತಿಗೆ–೨

ಅನೇಕ ವರ್ಷಗಳ ಹಿಂದೆ ಬಸರೂರಿನಲ್ಲಿ ಬ್ರಾಹ್ಮಣರು ಮತ್ತು ಮಡಿವಾಳರು ನೆರೆ ಹೊರೆಯವರಾಗಿದ್ದರು. ಒಂದು ದಿನ ಮಡಿವಾಳನ ಮನೆಯ ಕತ್ತೆ ಬ್ರಾಹ್ಮಣನ ಮನೆಯ ತೋಟಕ್ಕೆ ನುಗ್ಗಿ ಹಾಳು ಮಾಡಿತು. ಕೋಪಗೊಂಡ ಬ್ರಾಹ್ಮಣ ಕತ್ತಿಯಿಂದ ಕತ್ತೆಯ ಕಾಲನ್ನು ಕಡಿದನು. ಈ ವಿಷಯ ತಿಳಿದ ಮಡಿವಾಳನು ಕೋಪದಿಂದ ಬ್ರಾಹ್ಮಣನ ಮನೆಯ ಅಂಗಳ ಪ್ರವೇಶಿಸಿದನು. ಮಡಿವಾಳನ ಸಿಟ್ಟಿನ ರಭಸಕ್ಕೆ ಬ್ರಾಹ್ಮಣನ ಗರ್ಭಿಣಿ ಮಡದಿ ಎದುರು ಸಿಕ್ಕಿದಳು. ಸಿಟ್ಟಿನಿಂದ ಮಡಿವಾಳ ಬ್ರಾಹ್ಮಣ ಹೆಂಡತಿಯ ಹೊಟ್ಟೆಗೆ ತುಳಿದನಂತೆ. ತುಳಿತದ ರಭಸಕ್ಕೆ ಬ್ರಾಹ್ಮಣನ ಹೆಂಡತಿಗೆ ಗರ್ಭಪಾತವಾಯಿತು.ಎರಡು ಕಡೆಯವರು ಪಠೇಲರಲ್ಲಿ ದೂರು ಕೊಟ್ಟರು. ಪಠೇಲರು ಎರಡು ಕಡೆಯವರನ್ನು ಕರೆಯಿಸಿ ನ್ಯಾಯ ನಿರ್ಣಯ ಮಾಡಿದರಂತೆ. ಬ್ರಾಹ್ಮಣನ ಹೆಂಡತಿಯ ಗರ್ಭಪಾತಕ್ಕೆ ಕಾರಣನಾದ ಮಡಿವಾಳ ಪುನಃ ಗರ್ಭಕೊಡಿಸಬೇಕು. ಮುರಿದ ಕತ್ತೆಯ ಕಾಲು ಬ್ರಾಹ್ಮಣ ಸರಿಪಡಿಸಬೇಕು ಎಂದು ನ್ಯಾಯನಿರ್ಣಯ ಮಾಡಿದರಂತೆ. ಅಂದಿನಿಂದ ಈ ಬಗೆಯ ಪಂಚಾಯ್ತಿಗೆಯನ್ನು ಬಸರೂರು ಪಂಚಾಯ್ತಿಗೆ ಎಂದು ಕರೆಯುವ ರೂಢಿ ಜಾರಿಗೆ ಬಂದಿತು.

(ಈ) ಬಸರೂರು ಉಪಚಾರ

ಹಿಂದಿನ ಕಾಲದಲ್ಲಿ ಬಸರೂರಿನಲ್ಲಿ ಒಬ್ಬರು ಪಟೇಲರು ಇದ್ದಿದ್ದರಂತೆ. ಅವರ ಮನೆಯಲ್ಲಿ ಒಬ್ಬ ಉಗ್ರಾಣಿ ಸಹಾ ಇದ್ದಿದ್ದನಂತೆ. ಉಗ್ರಾಣಿ ಕೆಲಸದ ನಿಮಿತ್ತ ಪಠೇಲರ ಮನೆಗೆ ಆಗಾಗ ಬರುತ್ತಿದ್ದನಂತೆ. ಊಟದ ಹೊತ್ತಿನಲ್ಲಿ ಬಂದಾಗಲೆಲ್ಲಾ ಮನೆಯ ಹೆಂಗಸು

'ಬಾಳೆಲಿ ಇದ್ದಿರೇ ಉಣ್ಣ್‌ಲಕ್ಕ ಇದ್ದಿತ್' ಎನ್ನುತ್ತಿದ್ದಳಂತೆ. ಉಗ್ರಾಣಿಗೆ ಈ ಮಾತನ್ನು ಕೇಳಿಕೇಳಿ ಬೇಸರವಾಯಿತು. ಒಂದು ದಿನ ಮಧ್ಯಾಹ್ನದ ಹೊತ್ತಿಗೆ ಪಟೇಲರ ಮನೆಗೆ ಬರುವ ಜಂಬ್ರ್‌ ಇದ್ದಿತ್ತಂತೆ. ಊಟದ ಹೊತ್ತಿಗೆ ಉಗ್ರಾಣಿ ಬಂದದ್ದನ್ನು ಕಂಡು ಪ್ರತಿಸಲ ಹೇಳಿದಂತೆ ಆಕೆ ಹೇಳಿದಳು. ಇದನ್ನು ಕೇಳಿದ ಉಗ್ರಾಣಿ 'ಬಾಳೆಲಿ ಇಲ್ಲಾ ಅಂದ್ ಗೊತಾಯ್ತ್ತ ಅದಕ್ಕೆ ಬಾಳೆಲಿತಕ ಬಂದಿದೆ' ಎಂದನಂತೆ. ಇದನ್ನು ಕೇಳಿದ ಹೆಂಗಸು ಅಡುಗೆ ಮನೆಗೆ ಹೋಗಿ ಬಂದು 'ಒಳ್ಳೆ ದಿನ ನೋಡಿ ಎಲಿ ತಂದ್ಯಾ ಉಗ್ರಾಣಿ ಮಕ್ಳು ಯಾರೋ ಎಸರಿಗೆ್ ಅಕ್ಕಿ ಹಾಕಿದೊ ಅನ್ನ ಕಡಿಮೆಯಾಯ್ತ' ಎಂದರಂತೆ. ಆಗ 'ಉಗ್ರಾಣಿ ಅಮ್ಮ ನೀವು ಹೀಗ್ ಹೇಳ್‌ದೆ ಇದ್ರೂ, ಉಂಬುಕೆ ಹಾಕ್ಲಿಲ್ಲ ಎಂದ್ ದೂರುದಿಲ್ಲ' ಈ ರೀತಿ ಒಣ ಉಪಚಾರ ಮಾಡಬೇಡಿ ಎಂದನಂತೆ. ಈ ಮನೆ ಬಸರೂರಿನ ಮನೆ ಆದ್ದರಿಂದ ಬಸರೂರು ಉಪಚಾರು ಎಂದು ಹೇಳುವುದು ವಾಡಿಕೆಯಾಗಿದೆ.

(ಉ) ಕೀಲುಕುದುರೆ ನ್ಯಾಯ

ವರದೇಂದ್ರ ಸ್ವಾಮಿಗಳು ಎನ್ನುವವರು ತಮ್ಮ ಕಾಲದಲ್ಲಿ ಏನಾದರೂ ಕಳ್ಳತನ, ಅನ್ಯಾಯ ನಡೆದಾಗ ತಪ್ಪಿತಸ್ಥರನ್ನು ಕಂಡು ಹಿಡಿಯಲು ಹೊಸ ಹೊಸ ವಿಧಾನವನ್ನು ಕಂಡು ಕೊಂಡಿದ್ದರು. ಮೂರು ಕಾಲುಗಳ ಜೊತೆ ಒಂದು ಅಲ್ಲಾಡುವ ಕಾಲು ಹೊಂದಿದ ಮರದ ಮಂಚ ಅದರ ಮೇಲೆ ಒಂದು ಕುದುರೆ ಮುಖ.ಕುದುರೆ ಮುಖಕ್ಕೆ ಮಂತ್ರಾಕ್ಷತೆ ಇಟ್ಟು ಕಳ್ಳತನವಾದ ಅಕ್ಕಪಕ್ಕದ ಮನೆಮಂದಿಯನ್ನು ಕರೆಯಿಸಿ ಅವರ ಮಧ್ಯದಲ್ಲಿ ಮೂರುಕಾಲಿನ ಕುದುರೆಯನ್ನು ಬಿಟ್ಟು ಕಳ್ಳರನ್ನು ಹುಡುಕುವಂತೆ ಆಜ್ಞಾಪಿಸುತ್ತಿದ್ದರು. ಅದು ಮುಂದೇ ಮುಂದೇ ಚಲಿಸಿ ತಪ್ಪಿತಸ್ಥರ ಹತ್ತಿರ ನಿಲ್ಲುತ್ತಿತ್ತು. ಹೀಗೆ ವರದೇಂದ್ರರು ಕಳ್ಳನನ್ನು ಪತ್ತೆಹಚ್ಚಿ ನ್ಯಾಯ ದೊರಕಿಸಿಕೊಡುತ್ತಿದ್ದರು.

೪.೧.೨. ಐತಿಹ್ಯಗಳು

ಬಸರೂರಿನ ಮೌಖಿಕ ಸಾಹಿತ್ಯವನ್ನು ಐತಿಹ್ಯಗಳೆಂದು ವಿಭಾಗಿಸಿ ಅಧ್ಯಯನ ಮಾಡಲಾಗಿದೆ. ಒಂದು ಕಾಲದಲ್ಲಿ ವಾಸ್ತವವಾಗಿ ನಡೆದ ಘಟನೆಗಳ ಸುತ್ತ ಅದು ಹೆಣೆದು ಕೊಂಡಿರುತ್ತದೆ ಮತ್ತು ಅವುಗಳ ಕುರುಹುಗಳು, ಪಳೆಯುಳಿಕೆಗಳು ಯಾವುದಾದರೊಂದು ರೂಪದಲ್ಲಿ ಕಾಣಿಸಿಕೊಳ್ಳಬಹುದು. ಬಸರೂರಿನ ಮೌಖಿಕ ಸಾಹಿತ್ಯದಲ್ಲಿ ಕಂಡುಬರುವ ಈ ಕೆಳಗಿನ ಘಟನೆಗಳನ್ನು ಐತಿಹ್ಯವೆಂದು ತಿಳಿದು ಅಧ್ಯಯನ ಮಾಡಲಾಗಿದೆ.

(ಅ) ಕರಣಿಕರ ಪ್ರತಿಷ್ಠೆ-ಕುರಿಯ ಎಡೆ

ನೂರಾರು ವರ್ಷಗಳ ಹಿಂದೆ ಸೋಮಯ್ಯ ಕರಣಿಕನೆಂಬ ದೊಡ್ಡ ವೈಶ್ಯನು ಅಮ್ಮನವರ ದೇವಸ್ಥಾನಕ್ಕೆ ಸಂಬಂಧ ಪಟ್ಟವನಾಗಿದ್ದನು. ಒಂದು ದಿನ ಅಮ್ಮನವರ

ದೇವಸ್ಥಾನದಲ್ಲಿ ದರ್ಶನ[೫] ನಡೆಯುತ್ತಿತ್ತು. ಎಲ್ಲರೂ ಮುಂಚಿತವಾಗಿಯೇ ಬಂದು ಸೇರಿದ್ದರು. ಅಮ್ಮನವರು ದರ್ಶನದಲ್ಲಿ ಕಾಣಿಸಿಕೊಂಡು ಬಂದವರನ್ನು ವಿಚಾರಿಸುತ್ತಿತ್ತು. ಸೋಮಯ್ಯ ಕರಣಿಕ ಬರಲಿಲ್ಲವೆ ಎಂದು ಕೇಳುತ್ತಿದ್ದಂತೆ ಸೋಮಯ್ಯ ಕರಣಿಕರು ದೇವಸ್ಥಾನವನ್ನು ಪ್ರವೇಶಿಸಿದರು. ಬ್ರಾಹ್ಮಣ ವೈಶ್ಯನನ್ನು ಬಳೆಗಾರನೊಬ್ಬ ಏಕವಚನದಲ್ಲಿ ಕರೆಯುವುದೆ ಎಂದು ಸಿಟ್ಟಿನಿಂದ ಮನೆಗೆ ಮರಳಿದರಂತೆ. ಮನೆಯನ್ನು ಪ್ರವೇಶಿಸುತ್ತಲೆ ಕರಣಿಕರ ಮಡದಿ ಹಣೆ ತುಂಬ ಕುಂಕುಮ ಮೆತ್ತಿಕೊಂಡು ಏ ಸೋಮಯ್ಯ ಕರಣಿಕ ಎಂದು ಕೂಗುತ್ತ ಮನೆಯ ಸುತ್ತ ಓಡುತ್ತಿದ್ದರು. ಹೆಂಡತಿಯ ಸ್ಥಿತಿಯನ್ನು ಕಂಡು ಭಯಗೊಂಡ ಕರಣಿಕರು ಮರಳಿ ದೇವಸ್ಥಾನಕ್ಕೆ ಓಡಿಬಂದರು. ಅಷ್ಟರಲ್ಲಿ ದರ್ಶನ ಮುಗಿದಿತ್ತು. ಮನೆಯಲ್ಲಿ ನಡೆದ ಘುಟನೆಯನ್ನು ತಿಳಿಸಿ ಪುನಃ ದರ್ಶನ ಮಾಡುವಂತೆ ವಿನಂತಿಸಿಕೊಂಡರು.ಆ ದಿನದ ಸೇವೆ ಮುಗಿದಿರುವುದರಿಂದ ನಾಳೆ ಆ ಬಗ್ಗೆ ವಿಚಾರಣೆ ನಡೆಸೋಣಾ ಎಂದು ಹಿರಿಯರು ಹೇಳಿದರು. ಮರುದಿನ ಅಮ್ಮನವರನ್ನು ಉಂಟುಮಾಡಿಕೊಂಡು ನಿನ್ನೆ ನಡೆದ ಘಟನೆಯನ್ನು ಸೋಮಯ್ಯ ಕರಣಿಕರು ಊರ ಹಿರಿಯರ ಸಮ್ಮುಖದಲ್ಲಿ ಪ್ರಸ್ತಾಪಿಸಿದರು. ಆವೇಶಗೊಂಡ ಅಮ್ಮನವರು ನನ್ನಲ್ಲಿ ಕೇಳಬೇಡ ಬಳೆಗಾರ ಗಂಡಿನಲ್ಲಿ ಕೇಳು ಎಂದು ನುಡಿಕೊಟ್ಟಿತು. ಸೋಮಯ್ಯಕರಣಿಕರಿಗೆ ತನ್ನ ತಪ್ಪಿನ ಅರಿವಾಗಿ ಕ್ಷಮೆ ನೀಡಬೇಕೆಂದು ಕೇಳಿಕೊಂಡರು. ಸೋಮಯ್ಯ ಕರಣಿಕರು ಅಮ್ಮನವರಿಗೆ ಚಿನ್ನದ ಜೋಮಾಲೆ ಸರ ಮಾಡಿಸಿಹಾಕಬೇಕು ಮತ್ತು ಕುರಿಪೂಜೆ ನಡೆಸುವ ಸಂದರ್ಭದಲ್ಲಿ ನಿನ್ನ ಮನೆಯ ಗದ್ದುಗೆಯಲ್ಲಿ ಕುರಿತಲೆ ಎಡೆ ಹಾಕಬೇಕು. ಇಂದಿನಿಂದ ನಿನ್ನ ಮನೆಯಲ್ಲಿ ನಾನು ನೆಲೆನಿಂತಿದ್ದೇನೆ. ನಿನ್ನ ಮನೆಯಲ್ಲಿ ನನಗೆ ನಿತ್ಯ ಪೂಜೆ ಸಲ್ಲಬೇಕು ಎಂದು ಅಪ್ಪಣೆ ಕೊಡಿಸಿತು. ತಮ್ಮ ತಪ್ಪಿಗೆ ಪಾಯಶ್ಚಿತವಾಗಿ ಚಿನ್ನದ ಜೋಮಾಲೆ ಕೊಡಲು ಒಪ್ಪಿದರು. ಆದರೆ ಗದ್ದುಗೆಗೆ ಕುರಿತಲೆಯನ್ನು ನೈವೇದ್ಯ ಮಾಡಲು ಬ್ರಾಹ್ಮಣನಾದ ನನಗೆ ಸಾಧ್ಯವಿಲ್ಲ ಎಂದರು. ಹಿರಿಯರ ಮಾತಿಗೆ ಒಪ್ಪಿದ ದೇವಿಯೂ ಕುರಿತಲೆಯ ನೈವೇದಕ್ಕೆ ವಿನಾಯಿತಿ ನೀಡಿತು. ಆದರೆ ಕುರಿಪೂಜೆ ನಡೆಯುವಾಗ ನನ್ನ ಸನ್ನಿಧಾನದಿಂದ ಪ್ರಸಾದದ ಎಡೆಯನ್ನು ತೆಗೆದುಕೊಂಡು ನಿನ್ನ ಮನೆಯ ಗದ್ದುಗೆಯಲ್ಲಿ ಇಡಲೇಬೇಕೆಂದು ಷರತ್ತು ವಿಧಿಸಿತು. ಕರಣಿಕರು ಅದಕ್ಕೆ ಒಪ್ಪಿದರು. ಈಗಲೂ ಕರಣಿಕರ ಮನೆಯಲ್ಲಿ ಗದ್ದುಗೆ[೬] ಇದೆ. ಗಡಿಪೂಜೆ ಮುಗಿಸಿ ಬರುವಾಗ ಅಮ್ಮನವರು ಕರಣಿಕರ ಮನೆಯಲ್ಲಿ ಪುನಃ ಆವೇಶಗೊಳ್ಳುವುದು ಇಂದಿಗೂ ನಡೆದೇ ಇದೆ.

### (ಆ) ಮಾಟಗಾರ ನಾಯಕರು ಮತ್ತು ನಾಗರಹಾವು

ಒಂದು ಕಾಲದಲ್ಲಿ ಮಾಟಗಾರ ನಾಯಕ/ಬಂಡಾರಿ ನಾಯಕರ ಹಿರಿಯರೊಬ್ಬಾಕೆಗೆ ಮಕ್ಕಳೇ ಆಗಿರಲಿಲ್ಲ. ಕುಲದೇವತೆ ಗೊಂದಾಳಮ್ಮನನ್ನು[೭] ಪ್ರಾರ್ಥಿಸಲು ಆಕೆ ಗರ್ಭಿಣಿಯಾಗಿ

ಒಂಬತ್ತು ತಿಂಗಳು ಕಳೆದು ಹಾವಿನ ಮರಿಯೊಂದಕ್ಕೆ ಜನ್ಮನೀಡಿದಳು. ಹಾವಿನ ಮರಿ ಮಾನವ ಶಿಶುವಿನಂತೆ ಮರದ ತೊಟ್ಟಿಲಲ್ಲಿ ಮಲಗಿರುತ್ತಿತ್ತು. ನಿದ್ರೆಯಿಂದ ಎಚ್ಚೆತ್ತಾಗ ತೊಟ್ಟಿಲ ಹಗ್ಗದಲ್ಲಿ ನೇತಾಡುತ್ತಿತ್ತು.ಆ ದಿನ ನೂಲು ಹುಣ್ಣಿಮೆಯ ಹಬ್ಬವಿತ್ತು.ತಾಯಿ ನೂಲು ಹುಣ್ಣಿಮೆಯ ಆಚರಣೆಗೆ ಪಾಯಸವನ್ನು ಮಾಡಲು ಆಡುಗೆ ಮನೆಗೆ ಹೋದಳು.ಮರಿನಾಗರ ಹಾವು ಎಚ್ಚರಗೊಂಡು ತೊಟ್ಟಿಲಿನಿಂದ ಇಳಿದು ತನ್ನ ತಾಯಿ ಅಡುಗೆ ಮಾಡುತ್ತಿದ ಕೋಣೆಗೆ ಹೋಗಿ ಮೂಲೆಯಲ್ಲಿ ಇರಕಿ[6] ಹಾಕಿಕೊಂಡು ಮಲಗಿತು. ತಾಯಿಗೆ ಇದು ತಿಳಿಯಲ್ಲಿಲ್ಲ. ಬಿಸಿ ಪಾಯಸದ ಮಡಕೆಯನ್ನು ಇರಕಿ ಎಂದು ಭಾವಿಸಿ ಎಳೆಯ ಹಾವಿನ ಇರಕಿಯ ಮೇಲಿಟ್ಟಳು.ಮಡಕೆಯ ಬಿಸಿಗೆ ಹಾವು ಸುಟ್ಟು ಹೋಯಿತು. ನಂತರ ಊಟದ ಸಮಯಕ್ಕೆ ಪಾಯಸವನ್ನು ಬಡಿಸಬೇಕೆನ್ನುವಾಗ ಮಡಿಕೆಯಲ್ಲಿರುವ ಪಾಯಸದ ಬಣ್ಣ ಹಸಿರಾಗಿತ್ತು ಎಂದೂ ಅನುಮಾನದಿಂದ ನೋಡಲು ತನ್ನ ಮಗು ನಾಗರ ಮರಿ ಪಾಯಸದ ಮಡಿಕೆ ಅಡಿಯಲ್ಲಿ ಸುಟ್ಟು ಬಿದ್ದಿರುವುದನ್ನು ಕಂಡಳು. ತನ್ನ ಅಚಾತುರ್ಯದಿಂದ ಆದ ತಪ್ಪಿಗೆ ಪಶ್ಚಾತ್ತಾಪ ಪಟ್ಟುಕೊಂಡಳು.ಅಂದಿನಿಂದ ಬಸರೂರಿನ ಬಂಡಾರಿ ನಾಯಕರಿಗೆ ನೂಲುಹಬ್ಬದ ಆಚರಣೆ ಇಲ್ಲವಂತೆ. ಆ ದಿನ ಹಬ್ಬದ ಊಟವನ್ನು ಮಾಡದೆ ಸೂತಕದ ಮನೆಯಂತೆ ಗಂಜಿಊಟ ಮಾಡುವ ಸಂಪ್ರದಾಯ ಆರಂಭವಾಯಿತಂತೆ ಮತ್ತು ನಾಗರ ಪಂಚಮಿಯ ದಿನ ನಾಗನಸನ್ನಿಧಾನಕ್ಕೆ ಹೋಗಿ ಅನ್ನದಾನ ಮಾಡುವ ಕ್ರಮಯಿದೆಯಂತೆ. ಈ ಜನ ವರ್ಗದವರು ಹಾವು, ಜೇಡ ಮುಂತಾದ ವಿಷಜಂತು ಕಚ್ಚಿದವರಿಗೆ ನೀರಿನ ಔಷಧಿ ನೀಡುತ್ತಾರೆ.ನಾಗನ ದಯೆಯಿಂದ ರೋಗ ವಾಸಿಯಾಗುತ್ತದೆ ಎಂದು ನಂಬಿರುತ್ತಾರೆ. ಔಷಧದಿಂದ ಬಂದ ಹಣವನ್ನು ಅನ್ನದಾನಕ್ಕೆ ಖರ್ಚು ಮಾಡುತ್ತಾರೆ. ನೀರನ್ನು ಮಂತ್ರಿಸಿ ರೋಗ ಗುಣಮಾಡುದರಿಂದ ಇವರಿಗೆ ಮಾಟಗಾರ ನಾಯಕರೆಂದು ಜನ ಕರೆಯುತ್ತಾರೆ.

(ಇ) ಒಂದಡಿಕೆ ಸಿಪ್ಪೆಯಷ್ಟೆ ಜಾಗ

ಪೋರ್ಚುಗೀಸರ ಮತ್ತು ಡಚ್ಚರ ದಬ್ಬಾಳಿಕೆ ಮತ್ತು ಮತಾಂತರಕ್ಕೆ ಹೆದರಿ ಗೌಡಸಾರಸ್ವತರು[7] ತಮ್ಮ ಕುಲದೇವತೆಯೊಂದಿಗೆ ರಾತ್ರೋರಾತ್ರಿ ಬಸರೂರಿಗೆ ಬಂದರು.ರಾಜ್ಯಾಡಳಿತ ಪ್ರದೇಶವಾದ ಈ ಊರಿನೊಳಗೆ ಅವರಿಗೆ ಪ್ರವೇಶ ನಿರಾಕರಿಸಿದ್ದರಿಂದ ಕೋಟೆ ಆಂಜನೇಯು ದೇವಾಲಯುದ ಹೊರಭಾಗದಲ್ಲಿ ತಮ್ಮ ಬದುಕನ್ನು ಆರಂಭಿಸಿದರು.ಹೊಸದಾಗಿ ಊರಿಗೆ ಬಂದ ಇವರುಗಳ ಬಗ್ಗೆ ಸ್ಥಳೀಯರಿಗೆ ಕುತೂಹಲ. ಆಗಾಗ ಅವರನ್ನು ನೋಡಲು ಸ್ಥಳೀಯರು ಹೋಗುತ್ತಿದ್ದರು.ಹೋದವರಿಗೆ ಪಾನಕಮಾಡಿ ಹಂಚುತ್ತಿದ್ದರು. ಅವರು ಪಾನಕ ಹಂಚುತ್ತಿದ್ದ ಕಟ್ಟೆಗೆ ಪಾನಕದಕಟ್ಟೆ[8] ಎಂಬ ಹೆಸರು ಬಂತಂತೆ. ವರ್ಷಗಳು ಉರುಳುತ್ತಿದ್ದಂತೆ ಒಮ್ಮೆ ಊರೊಳಗೆ ಎರಡು ಗುಂಪುಗಳ ಮಧ್ಯೆ

ಜಗಳ ಹುಟ್ಟಿಕೊಂಡಿತಂತೆ. ಜಗಳ ತೀರ್ಮಾನಕ್ಕೆ ಪರಗ್ರಹಸ್ಥರಾದ ಗೌಡಸಾರಸ್ವತರನ್ನು ಕರೆಸಿದರಂತೆ. ಜಗಳ ತಿರ್ಮಾನ ಮಾಡಿದರೆ ನನಗೇನು ಕೊಡ್ತಿರಿ ಎಂದು ಹಿರಿಯರಲ್ಲಿ ಕೇಳಿದರಂತೆ. ಊರಿನ ಹಿರಿಯರು ಏನು ಬೇಕಾದರೂ ಕೇಳಿ ಕೊಡುತ್ತೇವೆ ಎಂದರಂತೆ.ಊರೊಳಗೆ ಒಂದಡಿಕೆ ಸಿಪ್ಪೆಯಷ್ಟು ಜಾಗ ಕೊಡಬೇಕೆಂಬ ಬೇಡಿಕೆ ಮುಂದಿಟ್ಟರಂತೆ. ಇದೇನ್ ದೊಡ್ಡ ಲೆಕ್ಕವಾ ಎಂದು ಹಿರಿಯರು ಒಪ್ಪಿಕೊಂಡರು. ವ್ಯವಹಾರ ಚತುರರಾದ ಗೌಡಸಾರಸ್ವತರು[೧೦] ಒಂದು ಅಡಿಕೆ ಸಿಪ್ಪೆ ತಗೆದುಕೊಂಡು ತೆಳ್ಳಗಿನ ದಾರ ಮಾಡಿ ಪೇಟೆ ಮಧ್ಯ ಬೇಕಾದಷ್ಟು ಜಾಗವನ್ನು ಪಡೆದುಕೊಂಡರಂತೆ.

(ಈ) ಮಹಾಲಿಂಗೇಶ್ವರನ ಪ್ರತಿಷ್ಠೆ ಮತ್ತು ದಾಸಯ್ಯ

ಧರ್ಮಸ್ಥಳದ ಮಂಜುನಾಥ ಮತ್ತು ಬಸರೂರಿನ ಮಹಾಲಿಂಗೇಶ್ವರನನ್ನು ಒಂದೇ ಮಹೂರ್ತದಲ್ಲಿ ಪ್ರತಿಷ್ಠೆ ಮಾಡಬೇಕೆಂದು ಅಪ್ಪಣೆಯಾಯಿತು. ಅದಕ್ಕಾಗಿ ಎಲ್ಲಾ ಸಿದ್ಧತೆಯನ್ನು ಮಾಡಿಕೊಂಡು ಕಾಯುತ್ತಿದ್ದರು. ಮೂಹೂರ್ತಕ್ಕೆ ಸರಿಯಾಗಿ ಧರ್ಮಸ್ಥಳದಲ್ಲಿ ಶಂಖನಾದವಾಗುವುದೆಂದು ಅದು ಬಸರೂರಿಗೂ ಕೇಳಿಸುವುದೆಂದು ಅಪ್ಪಣೆಯಾುತು. ಧರ್ಮಸ್ಥಳದಲ್ಲಿ ಮೊಳಗುವ ಶಂಖನಾದವನ್ನೆ ಆಲಿಸುತ್ತ ದೇವರ ಪ್ರತಿಷ್ಠೆಗೆ ಎಲ್ಲರೂ ಕಾಯುತ್ತಿದ್ದರು. ಕಾಕತಾಳೀಯವೆಂಬಂತೆ ಊರ ದಾಸಯ್ಯನೊಬ್ಬ ಶಂಖವನ್ನು ಊದಿದನಂತೆ.ಅದು ಧರ್ಮಸ್ಥಳದಿಂದಲೇ ಕೇಳಿದ ಶಂಖನಾದವೆಂದು ತಿಳಿದು ಮಹಾಲಿಂಗೇಶ್ವರನ ಪ್ರತಿಷ್ಠೆ ಮಾಡಿಯೇ ಬಿಟ್ಟರಂತೆ. ಕೊನೆಗೆ ಸತ್ಯದ ಅರಿವಾಗಿ ನಡೆದ ಅಚಾತುರ್ಯಕ್ಕೆ ಕಾರಣವಾದ ದಾಸಯ್ಯನ ಮೇಲೆ ಕೋಪಗೊಂಡರು ಬಸರೂರಿಗೆ ದಾಸಯ್ಯರು ಬರಬಾರದೆಂದು ನಿರ್ಬಂಧ ಹೇರಿದರಂತೆ.

(ಉ)ವರದೇಂದ್ರಸ್ವಾಮಿಗಳು ಮಲೆಯಾಳಿ ಸಂನ್ಯಾಸಿಯನ್ನು ಸೋಲಿಸಿದ ಕತೆ

ಒಮ್ಮೆ ವರದೇಂದ್ರ ಸ್ವಾಮಿಯವರು ಕಾಶಿಮಠದೊಳಗೆ ಪೂಜೆ ಮಾಡುತ್ತಿದ್ದರು. ಆಗ ಇದ್ದಕ್ಕಿದಂತೆ ಜಪದ ತಟ್ಟೆ ಹರಿವಾಣಗಳು ಅಲ್ಲಾಡಲಾರಂಭಿಸಿತು. ತನ್ನ ಮಂತ್ರಬಲದಿಂದ ಅದನ್ನು ಸ್ತಂಭನಗೊಳಿಸಿದರು. ಹೊರಗಡೆ ಬೇರೊಬ್ಬ ಸಂನ್ಯಾಸಿ ಬಂದಿರುದನ್ನು ದಿವ್ಯ ದೃಷ್ಟಿಯಿಂದ ತಿಳಿದು ಪೂಜೆಮುಗಿಸಿ ಬರುವವರೆಗೆ ಅಥಿತಿಯಾಗಿ ಉಳಿಯಬೇಕೆಂದು ಪರಿಚಾರಕರಲ್ಲಿ ಹೇಳಿ ಕಳುಹಿಸಿದರು. ಪೂಜೆ ಮುಗಿಸಿ ಬಂದ ವರದೇಂದ್ರರು ತನ್ನ ಮಠಕ್ಕೆ ಅಥಿತಿಯಾಗಿ ಬಂದ ಸನ್ಯಾಸಿಗೆ ಆತಿಥ್ಯ ನೀಡಿ ಉಪಚರಿಸಿದರು. ಬಂದ ಕಾರಣವೇನೆಂದು ವಿಚಾರಿಸಿದರು. ನನ್ನನ್ನು ಈವರೆಗೆ ಯಾರು ಈ ರೀತಿ ಕಾಯಿಸಿ ಅವಮಾನಿಸಿಲ್ಲ. ನೀವೆ ಮೊದಲು ಸುಮ್ಮನೆ ಶರಣಾಗಿದ್ದೇನೆ ಎಂದು ಒಪ್ಪಿಕೊಂಡು ಕಾಣಿಕೆ ಒಪ್ಪಿಸಿ ಎಂದನು. ವರದೇಂದ್ರರು ಆಗುಂತಕ ಸನ್ಯಾಸಿಯ ಅಹಂಕಾರಕ್ಕೆ ಉದಾಸೀನ ತೋರಿದರಂತೆ. ಇದರಿಂದ ಕೋಪಗೊಂಡ ಸನ್ಯಾಸಿ ನಿಮ್ಮನ್ನು ಬಗ್ಗಿಸುವುದು ಹೇಗೆ

ಎಂದೂ ತಿಳಿದಿದೆ. ನಾಳೆ ಎಲ್ಲರೆದುರೆ ನನ್ನ ಶಕ್ತಿ ಪ್ರದರ್ಶಿಸುತ್ತೇನೆ ಎದುರಿಸಲು ತಯಾರಾಗಿರಿ ಎಂದು ದರ್ಪದಿಂದ ನುಡಿದನು. ಹಾಗೆಯೇ ಆಗಲೆಂದು ವರದೇಂದ್ರರು ಉತ್ತರಿಸಿದರು. ಮರುದಿನ ಆದಿನಾಥೇಶ್ವರ ಪ್ರಾಂಗಣದಲ್ಲಿ ಬಸರೂರೇ ಸೇರಿತ್ತು. ಇಬ್ಬರಿಗೂ ಸ್ಪರ್ಧೆಯಾಗುವುದನ್ನು ಕುತೂಹಲಭರಿತ ಕಣ್ಣುಗಳಿಂದ ಜನ ಕಾಯುತ್ತಿದ್ದರು. ಆಗುಂತಕ ಸನ್ಯಾಸಿ ನಿಗದಿತ ಸಮಯಕ್ಕಿಂತ ಅರ್ಧಗಂಟೆ ಮೊದಲೇ ಬಂದು ವರದೇಂದ್ರರನ್ನು ಮೂದಲಿಸುತ್ತ ಕುಳಿತುಬಿಟ್ಟ. ವರದೇಂದ್ರರು ತಮ್ಮ ದಿನನಿತ್ಯದ ಪೂಜಾವಿಧಿಗಳನ್ನು ಪೂರೈಸಿ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಬಂದರು.ತಕ್ಷಣ ಆಗುಂತಕ ಸನ್ಯಾಸಿ ಅಲ್ಲಿ ಸೇರಿದ ಜನರಲ್ಲಿ ಇಬ್ಬರ ಕೈಹಿಡಿದು ದರದರ ಎಳೆದುಕೊಂಡು ಕೆರೆಯ ಹತ್ತಿರ ಹೋದನು. ಕೆರೆಯ ನೀರಲ್ಲಿ ಕಾಲಿಟ್ಟು ಮೆಟ್ಟಿಲ ಮೇಲೆ ಕುಳಿತನು. ಆ ಇಬ್ಬರಿಗೆ ಎರಡು ಕೊಡಪಾನ ನೀಡಿ ತನ್ನ ಕಮಂಡಲಕ್ಕೆ ನಿರಂತರವಾಗಿ ನೀರು ಸುರಿಯುವಂತೆ ಆಜ್ಞಾಪಿಸಿದನು. ಹೀಗೆ ಸುರಿದ ನೀರನ್ನು ಆಗುಂತಕ ಸನ್ಯಾಸಿ ಒಂದೇ ಸಮನೆ ಕುಡಿಯುತ್ತಿದ್ದನು. ಅಲ್ಲಿ ಸೇರಿದ ಜನರಿಗೆ ಕೆರೆಯ ನೀರು ಖಾಲಿಯಾಗಬಹುದೆಂಬ ಭಯ ಶುರುವಾಯಿತು.ಆದಿನಾಥೇಶ್ವರ ದೇವಾಲಯದ ಪ್ರಾಂಗಣದಲ್ಲಿ ಕುಳಿತ ವರದೇಂದ್ರರಿಗೆ ಹೊಟ್ಟೆ ಉಬ್ಬರಿಸುತ್ತ ಹೋಗತೊಡಗಿತು. ಅಷ್ಟರಲ್ಲಿ ಯಾರೋ ಒಬ್ಬರು ಓಡಿ ಬಂದು ಆಗುಂತಕ ಸನ್ಯಾಸಿ ಕೆರೆಯ ನೀರನ್ನು ಕುಡಿದು ಖಾಲಿ ಮಾಡುತ್ತಿದ್ದ ವಿಷಯ ತಿಳಿಸಿದರು. ಇದನ್ನು ಕೇಳಿದ ವರದೇಂದ್ರರು ಒಂದು ಕರಡದ[77] ಹುಲ್ಲನ್ನು ಮಂತ್ರಿಸಿ ಹೊಕ್ಕುಳ ಮೇಲಿಟ್ಟು ನೆಲದ ಮೇಲಿಟ್ಟರು. ಆಗ ನೀರು ಕಾರಂಜಿಯಂತೆ ಕರಡದ ಹುಲ್ಲಿನಿಂದ ಹಾರತೊಡಗಿತು. ಈ ವಿಷಯವನ್ನು ತಿಳಿದ ಜನ ಕೆರೆಯ ಕಡೆಯಿಂದ ಆದಿನಾಥೇಶ್ವರ ಪ್ರಾಂಗಣದ ಕಡೆಗೆ ಓಡಿಬಂದರು. ವಿಸ್ಮಯ ಕಂಡು ಬೆರಗಾದರು. ಸೋಲೊಪ್ಪಿಕೊಂಡ ಸನ್ಯಾಸಿ ವರದೇಂದ್ರರಿಗೆ ಶರಣಾದನು.ಅಲ್ಲದೆ ತಾನು ಈವರೆಗೆ ಗೆದ್ದ ಸಾಲಿಗ್ರಾಮವನ್ನು ಮರಳಿ ಆಯಾ ದೇವಾಲಯಕ್ಕೆ ಒಪ್ಪಿಸುತ್ತೇನೆ ಎಂದು ಮಾತು ಕೊಟ್ಟನು. ಕಲಿತ ವಿದ್ಯೆಯನ್ನು ಸದ್ವಿನಿಯೋಗ ಮಾಡುವಂತೆ ವರದೇಂದ್ರರು ಸಲಹೆ ನೀಡಿದರು. ಒಂದು ದಿನದ ಭಿಕ್ಷೆಯನ್ನು ನೀಡಿ ಆಗುಂತಕ ಸಂನ್ಯಾಸಿಯನ್ನು ಬೀಳುಕೊಂಡರು.

(ಊ) ಟಿಪ್ಪುವಿನ ಸಿಟ್ಟು ಬಸರೂರಿಗೆ ಪೆಟ್ಟು

ಟಿಪ್ಪುಸುಲ್ತಾನ ಚಿಕ್ಕವನಿರುವಾಗ ತುಂಬಾ ತುಂಟಾಟಿಕೆವುಳ್ಳವನಾಗಿದ್ದನು. ವಿದ್ಯಾಭ್ಯಾಸದ ಕಡೆಗೆ ಗಮನ ಕೊಡುತ್ತಿರಲ್ಲಿಲ್ಲ. ಇದರಿಂದ ಹೈದರಾಲಿಗೆ ಚಿಂತೆಯಾಯಿತು. ಹೇಗಾದರೂ ಮಾಡಿ ತನ್ನ ಮಗನನ್ನು ಸರಿದಾರಿಗೆ ತರಬೇಕೆಂದು ಟಿಪ್ಪುವಿನ ಸಮಪ್ರಾಯದ ಬೀದಿ ಹುಡುಗನೊಬ್ಬನನ್ನು ಹೈದರಾಲಿ ತಂದು ಸಾಕಿದನು. ಟಿಪ್ಪುವಿಗೆ ಪೈಪೋಟಿ ಬೀಳುವಂತೆ ಅವನಿಗೆ ವಿದ್ಯೆ ಕಲಿಯಲು ಹಾಕಿದನು. ಒಮ್ಮೆ ಅವರಿಬ್ಬರ ಜಾಣ್ಮೆಯನ್ನು ಪರಿಶೀಲಿಸಲು

ಹೋದ ಹೈದರಾಲಿ ಕರಿಹಲಗೆಯ ಮೇಲೆ ಅಡ್ಡಾದಿಡ್ಡಿಯಾದ ಒಂದು ಗೆರೆಯನ್ನು ಎಳೆದು ಇದೇನೆಂದು ಕೇಳಿದನು. ಟಿಪ್ಪು ಅದನ್ನು ಕಂಡು ನಿಮಗೆ ಗೆರೆ ಎಳೆಯಲು ಬರುವುದಿಲ್ಲ ಎಂದನು. ಅದೇ ಪ್ರಶ್ನೆಯನ್ನು ಸಾಕು ಮಗನಲ್ಲಿ ಕೇಳಿದಾಗ ಹಾವು ಹರಿವ ದಾರಿ ಎಂದು ಉತ್ತರಿಸಿದ. ಸಾಕು ಮಗನ ಜಾಣ್ಮೆಯನ್ನು ಹೈದರಾಲಿ ಮೆಚ್ಚಿಕೊಂಡನು. ಈ ರೀತಿಯಾಗಿ ಅವಮಾನಗೊಳಿಸಿ ಟಿಪ್ಪುವನ್ನು ಸರಿದಾರಿಗೆ ತರಲು ಪ್ರಯತ್ನಿಸಿದನು. ಟಿಪ್ಪು ದೊಡ್ಡವನಾದಂತೆ ಆ ಹುಡಗನ ಬಗೆಗೆ ಮಾತ್ಸರ್ಯ ಹೆಚ್ಚುತ್ತ ಹೋಯಿತು.ಇದನ್ನರಿತ ಹೈದರಾಲಿ ತನ್ನ ಸಾಕು ಮಗನನ್ನು ಕುಂದಾಪುರಕ್ಕೆ ಕಳುಹಿಸಿ ಅಲ್ಲಿನ ಬಂಗಲೆಯಲ್ಲಿ ವಾಸ್ತವ್ಯಕ್ಕೆ ಎಡೆ ಮಾಡಿಕೊಟ್ಟನು.

ಇತ್ತ ಬ್ರಿಟಿಷರೊಂದಿಗೆ ಮಂಗಳೂರು ಯುದ್ಧದಲ್ಲಿ ಸೋತ ಹೈದರಾಲಿ ಹಾಸಿಗೆ ಹಿಡಿದನು. ಕುಂದಾಪುರದಲ್ಲಿದ್ದ ಸಾಕು ಮಗನಿಗೆ ತಲೆಮರೆಸಿಕೊಳ್ಳುವಂತೆ ದೂತನ ಮೂಲಕ ಸಂದೇಶ ಕಳುಸಿದನು. ಮಂಗಳೂರು ಒಪ್ಪಂದವಾದ ಕೂಡಲೇ ಟಿಪ್ಪು ಕುಂದಾಪುರಕ್ಕೆ ಬಂದು ತಂದೆಯ ಸಾಕು ಮಗನನ್ನು ಹುಡುಕಲು ಮುಂದಾದನು. ಎಲ್ಲಿಯೂ ಸಿಗದಿದ್ದಾಗ ಸಂಜೆ ಹೊತ್ತು ಬಸರೂರಿಗೆ ಬಂದು ಅಲ್ಲಿನ ಗುಡಿಗೋಪುರ ಚರ್ಚಿನ ಕಟ್ಟಡಗಳನ್ನು ನಾಶಪಡಿಸಿದನು. ಹೀಗೆ ಟಿಪ್ಪುವಿನ ಸಿಟ್ಟು ಬಸರೂರಿಗೆ ಬಿದ್ದ ಪೆಟ್ಟಾಯಿತು ಎಂದು ಜನ ಆಡಿಕೊಳ್ಳುತ್ತಾರೆ.

(ಋ) ವೀರಭದ್ರನ ಕತೆ

ಬಸರೂರಿನ ದೇವದಾಸಿಯರು ಊರ ದೇವರಾದ ಶ್ರೀ ಮಹಾಲಿಂಗೇಶ್ವರನ್ನನ್ನು ಪತಿಯೆಂದು ಭಾವಿಸಿಕೊಂಡವರು. ದೇವರಿಗೆ ತಮ್ಮನ್ನು ಅರ್ಪಿಸಿಕೊಂಡ ದೇವದಾಸಿಯರೊಡನೆ ಊರಿನ ಗಣ್ಯರು, ಜಮೀನ್ದಾರರು ಶೋಭಾನಪ್ರಸ್ಥ[೨] ಮಾಡಿಕೊಂಡು ಉಪಪತ್ನಿಯರನ್ನಾಗಿ ಸ್ವೀಕರಿಸುತ್ತಿದ್ದರು. ನವರಾತ್ರಿಯ ದಿನಗಳಲ್ಲಿ ಈ ದೇವದಾಸಿಯರು ಶ್ರೀದೇವಿಅಮ್ಮನವರ ದೇವಸ್ಥಾನದಲ್ಲಿ ರಂಗಭೋಗ ಸೇವೆ ನಡೆಸುತ್ತಿದ್ದರು. ಹೀಗೆ ಸೇವೆ ಮಾಡುತ್ತಿರುವ ದೇವದಾಸಿಯರ ಮೇಲೆ ವೀರಭದ್ರನಿಗೆ ಮನಸ್ಸಾಯಿತು. ಅಂದಿನಿಂದ ಶೋಭಾನಪ್ರಸ್ಥ ಮಾಡಿಸಿಕೊಂಡ ದೇವದಾಸಿ ರಾತ್ರಿ ಮಲಗಿ ಬೆಳಿಗ್ಗೆ ಏಳುತ್ತಲೆ ಸತ್ತುಹೋಗುತ್ತಿದ್ದಳು. ಈ ಘುಟನೆ ಮರುಕಳಿಸುತ್ತಿರಲು ಕೇರಳದ ಮಂತ್ರವಾದಿಯನ್ನು ಕರೆಯಿಸಿ ಕೇಳಿದಾಗ ವೀರಭದ್ರನೇ ಮನುಷ್ಯರೂಪ ತಾಳಿ ಶೋಭಾನಪ್ರಸ್ತದ ರಾತ್ರಿ ದೇವದಾಸಿಯೊಡನೆ ಕೂಡುತ್ತಿರುವುದರಿಂದ ಅವಳು ಸಾಯುತ್ತಿದ್ದುದಾಗಿಯೂ ಅದನ್ನು ತಡೆಯಲು ವೀರಭದ್ರನ ಕಾಲಿಗೆ ಸರಪಳಿ ಬಿಗಿದು ಬಂಧನದಲ್ಲಿಡಬೇಕು ಮತ್ತು ಅವನ ಹೆಣ್ಣಿನ ದಾಹವನ್ನು ನೀಗಿಸಲು ಬತ್ತಲೆ ಪರಮೇಶ್ವರಿಯನ್ನು ಎದುರುಗಡೆ ಸ್ಥಾಪಿಸಬೇಕೆಂದು ಸಲಹೆ ನೀಡಿದರಂತೆ.ಹಾಗೆ ಮಾಡಲು ದೇವದಾಸಿಯರ ಸಾವು ತಪ್ಪಿತಂತೆ.(ಚಿತ್ರ ೨)

೪.೧.೩.ಪುರಾಣಗಳು

"ಹಿಂದೆ ನಡೆದವುಗಳೆಂದು ಹೇಳಲಾಗುವ ಅಮಾನುಷ ವ್ಯಕ್ತಿಗಳ, ದೈವ, ದೇವರುಗಳ, ಸಾಂಸ್ಕೃತಿಕ ವೀರಪುರಷರ, ಸಾಹಸ ಮಹಿಮೆ, ಪವಾಡಗಳನ್ನು, ಪುರಾತನ ಸಂಪ್ರದಾಯ ಹಾಗೂ ಧಾರ್ಮಿಕ ಆಚರಣೆಗಳನ್ನು ವಿವರಿಸುವ ಕತೆಗಳನ್ನು ಪುರಾಣ ಎಂದು ಕರೆಯಲಾಗುವುದು"(ಸುಬ್ಬಣ್ಣ ರೈ.ಎ;೧೯೯೪;ಪುಟ:೨೭) ಈ ನೆಲೆಯಲ್ಲಿ ಬಸರೂರಿನ ಮೌಖಿಕ ಸಾಹಿತ್ಯವನ್ನು ಅನುಲಕ್ಷಿಸಿ ಈ ಕೆಳಗಿನವುಗಳನ್ನು ಪುರಾಣಗಳೆಂದು ವಿಭಾಗಿಸಿ ಅಧ್ಯಯನ ನಡೆಸಲಾಗಿದೆ.

(ಅ) ಬಸರೂರಿನ ಸ್ಥಳ ಪುರಾಣ-ಮಹಾಲಿಂಗೇಶ್ವರ ದೇವಾಲಯ

ಬಸರೂರನ್ನು ಆಳಿಕೊಂಡಿದ್ದ ವಸುಚಕ್ರವರ್ತಿಗೆ ಮಕ್ಕಳಿರಲ್ಲಿವಂತೆ. ತನಗೆ ಮಕ್ಕಳಾದರೆ ಕೋಟೇಶ್ವರದ ಕೋಟಿಲಿಂಗನಿಗೆ ದೇವಾಲಯ ಕಟ್ಟಿಸುವುದಾಗಿ ಹರಕೆ ಹೊತ್ತನು. ದೇವರ ಅನುಗ್ರಹದಿಂದ ಅರಸನಿಗೆ ಮಕ್ಕಳಾಯಿತು. ಚಕ್ರವರ್ತಿ ತನ್ನ ಮಾತಿನಂತೆ ಕೋಟೇಶ್ವರದಲ್ಲಿ ದೇವಾಲಯವನ್ನು, ಕೆರೆಯನ್ನು ಕಟ್ಟಿಸಿದನು.ತನ್ನ ರಾಜಧಾನಿಯಾದ ವಸುಪುರದಿಂದ ಪ್ರತಿನಿತ್ಯ ಕೋಟೇಶ್ವರಕ್ಕೆ ಹೋಗಿ ದೇವರ ಪ್ರಸಾದ ಪಡೆದು ಮರಳುತ್ತಿದ್ದನು. ಅಲ್ಲದೆ ವಸುಪುರದ ಶುಕ್ತಿಮತಿ ತೀರಕ್ಕೆ ದಿನಾಲೂ ಹೋಗಿ ಮರಳಿನಲ್ಲಿ ಶಿವಲಿಂಗ ಮಾಡಿ ಪೂಜಿಸುತ್ತಿದ್ದನು.ಒಂದು ದಿನ ಆತನು ಮರಳಿನ ಲಿಂಗವನ್ನು ವಿಸರ್ಜಿಸಲು ಮರೆತುಬಿಟ್ಟನು. ಅದು ಗಟ್ಟಿಯಾಗಿ ಉಳಿದಿರುವುದರಿಂದ ಅಲ್ಲಿಯೇ ಮಹಾಲಿಂಗೇಶ್ವರ ದೇವರನ್ನು ಪ್ರತಿಷ್ಠೆ ಮಾಡಿದನಂತೆ. ಹೀಗೆ ವಸುಚಕ್ರವರ್ತಿಯಿಂದ ಮಹತೋಭಾರ ಮಹಾಲಿಂಗೇಶ್ವರ ಸ್ಥಾಪನೆಯಾಯಿತು.ಶಿವಲಿಂಗವು ವಿಸರ್ಜಿಸಲು ಮರೆತುಬಿಟ್ಟ ಜಾಗದಲ್ಲಿ ನಡೆದಾಡಿದರೆ ಅಪವಿತ್ರವಾಗುವುದೆಂದು ವಸುಚಕ್ರವರ್ತಿ ಶುಕ್ತಿಮತಿ ತೀರದಿಂದ ಮಂಡಿಯೂರಿ ನಡೆದನಂತೆ. ಆವನು ಮಂಡಿಊರಿ ನಡೆದಾಡಿದ ಕೇರಿ ಮಂಡಿಕೇರಿ ಆಯಿತೆಂದು ಹೇಳುತ್ತಾರೆ.

(ಆ) ಮೂರ್ಹಾನೆ ಬಬ್ಬರ್ಯ ಮತ್ತು ಮಂತ್ರವಾದಿ

ಬಸರೂರಿನ ನಾವುಡರ ಹೊಳಲಿನಲ್ಲಿರುವ ಮೂರ್ಹಾನೆ ಬಬ್ಬರ್ಯ ದೇವಸ್ಥಾನದ ಹತ್ತಿರ ಕೊಪ್ಪರಿಗೆ ಗಟ್ಟಲೆ ನಿಧಿ ಇದ್ದಿತಂತೆ. ಆ ನಿಧಿಕೊಪ್ಪರಿಗೆಯ ಚೊಟ್ಟು ಮೇಲಕ್ಕೆ ಕಾಣಿಸುತ್ತಿದ್ದಿತಂತೆ. ಒಂದು ದಿನ ಮಂತ್ರವಾದಿಯೊಬ್ಬ ಕೊಪ್ಪರಿಗೆ ಹೊನ್ನನ್ನು ಅಪಹರಿಸಲು ಮುಂದಾದನು. ಕೊಪ್ಪರಿಗೆಯನ್ನು ಮೇಲಕ್ಕೆತ್ತಲು ಮೂರು ಆನೆಗಳನ್ನು ತಂದಿದ್ದನಂತೆ.ತನ್ನ ಸುಪರ್ದಿಯಲ್ಲಿರುವ ನಿಧಿಯನ್ನು ಅಪಹರಿಸಲು ಬಂದವರ ಮೇಲೆ ಕೊಪಗೊಂಡ ಬಬ್ಬರ್ಯ ನಿಧಿ ಕೀಳಲು ಬಂದ ಆನೆಗಳನ್ನು ಕಾಲಿನಿಂದ ಮೆಟ್ಟಿತಂತೆ. ಬಬ್ಬರ್ಯನ ಕಾಲಿನ ಆಘಾತಕ್ಕೆ ಭೂಅಂತರ್ಗತವಾದ ಆನೆಗಳು ಆನಗಳ್ಳಿಯಲ್ಲಿ ಮೇಲಕ್ಕೆದ್ದವಂತೆ.

ಆನೆಗಳನ್ನು ಭೂಮಿಗೆ ತುಳಿದಿದ್ದರಿಂದ ಬಬ್ಬರ್ಯನಿಗೆ ಮೂರ್ಡಾನೆ ಬಬ್ಬರ್ಯನೆಂದು ಹೆಸರು ಬಂದಿತಂತೆ.

(ಇ) ಪಂಜುರ್ಲಿ ದೈವದ ಕತೆ

ಬಸರೂರಿನ ಸಮೀಪದ ಎಡಕ್ಕೂರಿನ ಗರಡಿಯಲ್ಲಿ ಪಂಜುರ್ಲಿ ದೈವ ಇದ್ದಿತಂತೆ. ಅಲ್ಲಿ ದರ್ಶನ ನಡೆಯುತ್ತಿರುವಾಗ ಪಂಜುರ್ಲಿಯ ಶಕ್ತಿಯನ್ನು ಪರೀಕ್ಷೆ ಮಾಡಲು ಬಸರೂರಿನ ನಡುಮನೆ ಬಿಲ್ಲವರು ಗಳು[೧೩] ಕಡಿದು ತೆಪ್ಪಕಟ್ಟಿ ತೆಪ್ಪದ ಸಹಾಯದಿಂದ ಎಡಕ್ಕೂರನ್ನು ತಲುಪಿದರು. ತೆಪ್ಪವನ್ನು ದಡದಲ್ಲಿ ಕಟ್ಟಿ ಪಂಜುರ್ಲಿ ದರ್ಶನವಾಗುತ್ತಿರುವ ಸ್ಥಳಕ್ಕೆ ಬಂದರು. ನಾವು ನಿನ್ನೆ ರಾತ್ರಿ ಕಟ್ಟಿದ ತೆಪ್ಪ ಕಾಣಿಸುತ್ತಿಲ್ಲ ಎಂದು ಸುಳ್ಳು ಹೇಳಿ ಪಂಜುರ್ಲಿಯನ್ನು ಚೇಷ್ಟೆ ಮಾಡಿದರು. ದರ್ಶನ ಮುಗಿಸಿ ಬಿಲ್ಲವ ಸಹೋದರರು ಹೊಳೆಯ ದಂಡೆಗೆ ಬಂದಾಗ ತೆಪ್ಪ ಕಾಣಲಿಲ್ಲ. ಅಷ್ಟು ಹೊತ್ತಿಗೆ ವಾಂತಿ ಭೇದಿ ಆರಂಭವಾಗಿ ತೆಪ್ಪದಲ್ಲಿ ಬಂದ ಒಂದಿಬ್ಬರು ತೀರಿಕೊಂಡರು. ಉಳಿದವರು ಹೇಗೊ ಸಾವರಿಸಿಕೊಂಡು ಊರಿಗೆ ಬಂದು ಮನೆ ದೈವದ ದರ್ಶನ ಮಾಡಿಕೇಳಿದರು. ಪಂಜುರ್ಲಿಗೆ ಅವಮಾನ ಮಾಡಿದ್ದರಿಂದ ಹೀಗಾಯಿತು ಎಂಬ ಹುಟ್ಗತಿ[೧೪] ಬಂತು. ಎಡಕ್ಕೂರಿನ ಪಂಜುರ್ಲಿ ನಿಮ್ಮ ಬೆನ್ನು ಹಿಡಿದು ಬಂದಿದೆ ಅದಕ್ಕೆ ಸ್ಥಾನಕೊಡಬೇಕೆಂದು ನುಡಿಕೊಟ್ಟಿತು. ಮನೆದೇವರ ಆಣತಿಯಂತೆ ಬಸರೂರಿನ ಹಟ್ಟಿಕುದ್ರು ನಡುಮನೆಯಲ್ಲಿ ಪಂಜುರ್ಲಿ ಸ್ಥಾಪನೆಗೊಂಡಿತು. ಮರುದಿನ ಬೆಳಿಗ್ಗೆ ಹೊಳೆಯಲ್ಲಿ ತೆಪ್ಪ ಕಾಣಿಸಿತು. ಅನಂತರದಲ್ಲಿ ಬಸರೂರ ಗರಡಿಯ ನಿತ್ಯ ಪೂಜೆ ನೋಡಿ ತನ್ನ ಶಕ್ತಿ ತೋರಿಸಿ ಅಲ್ಲೇ ನೆಲೆಸಿತಂತೆ.

(ಈ) ಚೀನಿಯರ ಭೂತ ಮತ್ತು ಪಂಜುರ್ಲಿ

ಆಷಾಡಿ[೧೫] ತಿಂಗಳು ಜಡಿಮಳೆ ಸುರಿಯುವಾಗ ಚೀನಿಯರ ಭೂತಗಳು ದೈವದ ಮನೆಯನ್ನು ಹೊಕ್ಕು ದೈವಗಳಿಗೆ ತೊಂದರೆ ಕೊಡುತ್ತಿದ್ದವಂತೆ. ಒಂದು ದಿನ ದೈವಗಳಿಗೆ ತೊಂದರೆ ಕೊಡುತ್ತಿರುವ ಚೀನಿಯರ ಭೂತಗಳು ಕೇಕೆ ಹಾಕುತ್ತ ಹಡಗಿನಲ್ಲಿ ಹೊರಟು ಬಸರೂರನ್ನು ತಲುಪಿದವಂತೆ. ಬಸರೂರನ್ನು ಪ್ರವೇಶಿಸಿದ್ದನ್ನು ನೋಡಿದ ಪಂಜುರ್ಲಿ ಚೀನಿಯರ ಭೂತ ಇರುವ ಹಡಗಿನ ಮೇಲೆ ಕಾಲು ಹಾಕಿ ಹಡಗನ್ನು ಮುಳುಗಿಸಿ ಭೂತಗಳನ್ನು ತನ್ನ ಸೆರೆಯಲ್ಲಿ ಇಟ್ಟುಕೊಂಡಿತು. ಪಂಜುರ್ಲಿಯಿಂದಾಗಿ ದೈವಗಳಿಗೆ ಚೀನಿಯರಭೂತದ[೧೬] ಕಾಟ ತಪ್ಪಿತಂತೆ. ಸಪ್ಪೆಮೋರೆ ಹಾಕಿಕೊಂಡ ಚೀನಿಯರ ಭೂತಗಳು ಬಸರೂರಿನ ಗರಡಿಯಲ್ಲಿದೆ.(ಚಿತ್ರ ೩)

(ಉ) ಪಂಜುರ್ಲಿ ಮತ್ತು ಮಂತ್ರವಾದಿ ಹುಯ್ಯಾರು ಚಾತ್ರರು

ಪಂಜುರ್ಲಿ ಗರಡಿಯಲ್ಲಿ ಚಕ್ಕತಾಯ ಎಂಬ ಬ್ರಾಹ್ಮಣ ಗಣವಿದೆ. ಅದರ ಕುರಿತಾಗಿ

ಐತಿಹ್ಯವೊಂದಿದೆ. ಒಂದು ಕಾಲದಲ್ಲಿ ಬಸರೂರಿನಲ್ಲಿ ಪಣಿಯಮ್ಮ ಎಂಬ ಬ್ರಾಹ್ಮಣ ಮಹಿಳೆ ವಾಸವಾಗಿದ್ದಳು. ಹುಯ್ಯಾರ ಚಾತ್ರ ಎಂಬ ದೊಡ್ಡ ಮಂತ್ರವಾದಿ ಬಸರೂರಿನ ಮೂಡುಕೇರಿಯಲ್ಲಿರುವ ಫಣಿಯಮ್ಮನ ಮನೆಗೆ ಆಗಾಗ ಬರುತ್ತಿದ್ದನು. ಒಂದು ದಿನ ಮೂಡುಕೇರಿಯ ಗರಡಿ ಹತ್ತಿರ ಬರುವಾಗ ಗರಡಿಹತ್ತಿರ ವಿಶೇಷ ಪೂಜೆ ನಡೆಯುತ್ತಿದ್ದಿತು. ಗರಡಿಯ ಪೂಜೆಯ ವಿಶೇಷತೆಯನ್ನು ನೋಡಿ ಮಂತ್ರವಾದಿ ಚಾತ್ರರು ಗರಡಿಯ ಒಳಗೆ ಪ್ರವೇಶಿಸಿದರು.ಅಲ್ಲಿ ಪಂಜುರ್ಲಿಯ ದರ್ಶನ ನಡೆಯುತ್ತಿದ್ದಿತು. ತನ್ನ ಗರಡಿಗೆ ಬಂದ ಪರಗ್ರಹಸ್ಥನನ್ನು ಪಂಜುರ್ಲಿ ವಿಚಾರಿಸಿತು. ನಾನು ಮಂತ್ರವಾದಿ ನನಗೆ ನಿನ್ನ ಗರಡಿಯಲ್ಲಿರುವ ಐದು ಪ್ರಭಾವಿ ಗಣಗಳನ್ನು ಕೊಡಬೇಕೆಂದು ಕೇಳಿದನು. ಮಂತ್ರವಾದಿಯ ಕೋರಿಕೆಯಂತೆ ಐದು ಗಣಗಳನ್ನು ತೆಂಗಿನಕಾಯಿಯಲ್ಲಿ ಮಂತ್ರಿಸಿ ನೀಡಲಾಯಿತು. ಆತನು ಕಾಯಿಯನ್ನು ಎಡಕೈಯಲ್ಲಿ ಹಿಡಿದು ಇಂತಹ ಗಣ ನನ್ನಲ್ಲಿ ಬೇಕಾದಷ್ಟು ಇದೆ. ನಿನ್ನಂಥ ಪ್ರಭಾವಶಾಲಿ ಗಣ ನನಗೆ ಬೇಕಾಗಿದೆ ಎಂದು ಉದ್ಧಟತನದ ಮಾತುಗಳನ್ನಾಡಿದನು. ಪಂಜುರ್ಲಿ ಮಂತ್ರವಾದಿಯನ್ನು ಮಣಿಸಲು ಕಾಯುತ್ತಿತ್ತು. ಇದೇ ಸಂದರ್ಭವೆಂದು ಭಾವಿಸಿ ಒಪ್ಪಿಗೆ ನೀಡಿತು.ನಾನು ನಿನ್ನ ಹಿಂದಿನಿಂದ ಬರುತ್ತೇನೆ ನೀನು ಮುಂದೆ ಹೋಗು ಎಂದು ಹೇಳಿ ಕಳುಹಿಸಿಕೊಟ್ಟಿತು. ನಾನು ಮರಳಿ ಬರುವವರೆಗೆ ಗದ್ದುಗೆಯ ದೀಪವನ್ನು ಆರದಂತೆ ನೋಡಿಕೊಳ್ಳಬೇಕು ಎಂದು ಹೇಳಿ ಮಂತ್ರವಾದಿಯ ಹಿಂದೆ ಪಂಜುರ್ಲಿ ಹೊರಟಿತು. ಹೀಗೆ ಹೋದ ಪಂಜುರ್ಲಿ ಮಂತ್ರವಾದಿಯ ಶಕ್ತಿಗೆ ಸಿಗದೆ ಮನೆಯ ಹೊರಗೆ ನಿಂತು ಅವನ ನ್ಯೂನತೆಗಳನ್ನು ತಿಳಿದುಕೊಂಡು ವಶಪಡಿಸಿಕೊಳ್ಳಲು ಕಾಯುತ್ತಿತ್ತು. ಮಂತ್ರವಾದಿಗೆ ತರಗಲೆ ಹಕ್ಕಿ ಎಂದರೆ ಭಯ ಹಾಗಾಗಿ ಕಪ್ಪಿನ ಕರಡಿಗೆಯನ್ನು ಸದಾ ತನ್ನ ಜೊತೆಗೆ ಇಟ್ಟು ಕೊಂಡು ಹೋಗುತ್ತಿದ್ದನು.ಒಂದು ದಿನ ಮಂತ್ರವಾದಿ ಮಲವಿಸರ್ಜನೆಗೆ ಹೋಗಿದ್ದನು. ಕಪ್ಪಿನ ಕರಡಿಗೆಯನ್ನು ಮರೆತಿರುವುದನ್ನು ಗಮನಿಸಿದ ಪಂಜುರ್ಲಿ ತರಗೆಲೆ ಹಕ್ಕಿಯ ಹಿಂಡಿನ ರೂಪದಲ್ಲಿ ಹೆದರಿಸಿತು. ಈ ಮನೋವೇದನೆಯಿಂದ ಮಂತ್ರವಾದಿ ಕೊನೆ ಉಸಿರೆಳೆದನು. ತನಗೆ ಸವಾಲಾಗಿದ್ದ ಮಂತ್ರವಾದಿಯ ಪ್ರೇತವನ್ನು ಪಂಜುರ್ಲಿ ತನ್ನಲ್ಲೆ ಇಟ್ಟುಕೊಂಡಿತಂತೆ. ಹುಯ್ಯಾರ ಚಾತ್ರ ವಂಶದವರು ಪ್ರೇತವನ್ನು ಕೇಳಲು ಬಂದರೆ ಕೊಡಲೊಪ್ಪಲ್ಲಿಲ್ಲವಂತೆ. ಈಗಲೂ ಆ ವಂಶದವರು ವರ್ಷಕ್ಕೊಂದು ಸಾರಿ ಪಂಜುರ್ಲಿಗೆ ಭೋಗ ನೀಡುತ್ತಿದ್ದರಂತೆ.

(ಊ) ಗುಪ್ಪೆ ಸದಾನಂದ ಜೋಗಿ

ಬಹಳ ಹಿಂದೆ ಬಸರೂರಿನ ಗುಪ್ಪೆ ಹಾಡಿಯಲ್ಲಿ ಸದಾನಂದ ಜೋಗಿಯೆಂಬ ಸನ್ಯಾಸಿಯಿದ್ದನು. ಸದಾನಂದ ಜೋಗಿಯ ಮಠಕ್ಕೆ ಜಾತಿ, ಭೇದ ಮರೆತು ಎಲ್ಲರೂ ಬರುತ್ತಿದ್ದರು. ಸದಾನಂದ ಜೋಗಿಗಳಿಗೆ ಸದಾ ಒಬ್ಬಾಕೆ ಹಾಲು ತಂದುಕೊಡುತ್ತಿದ್ದಳಂತೆ.

ಒಂದು ದಿನ ಯಾವುದೋ ದುರುದ್ದೇಶದಿಂದ ಆಕೆ ಹಾಲಿನಲ್ಲಿ ವಿಷ ಬೆರೆಸಿ ಜೋಗಿಗೆ ಕೊಟ್ಟಳಂತೆ. ಹಾಲಿನಲ್ಲಿ ವಿಷ ಬೆರೆಸಿರುವುದನ್ನು ದಿವ್ಯ ಜ್ಞಾನದಿಂದ ತಿಳಿದ ಸದಾನಂದ ಜೋಗಿಗಳು ಹಾಲನ್ನು ಅವಳೆದುರೇ ಬೆಕ್ಕಿಗೆ ಹಾಕಿದರಂತೆ. ಹಾಲು ಕುಡಿದ ಬೆಕ್ಕು ಅಲ್ಲಿಯೇ ಸತ್ತುಬಿದ್ದಿತು. ಹಾಲಲ್ಲಿ ವಿಷ ಬೆರೆಸಿ ಸ್ವಾಮಿಗಳನ್ನು ಕೊಲ್ಲಲು ಉದ್ದೇಶಿಸಿದ ಹೆಂಗಸು ತನ್ನ ತಪ್ಪನ್ನು ಒಪ್ಪಿಕೊಂಡಳು. ವಿಶ್ವಾಸ ಘಾತಕತನಕ್ಕಾಗಿ ಕಲ್ಲಾಗುವಂತೆ ಆಕೆಗೆ ಶಾಪ ಕೊಟ್ಟರು. ಹಾಲಿನವಳ ದುರ್ವತನೆಯಿಂದ ಬೇಸರಗೊಂಡ ಸ್ವಾಮಿಗಳು ಗುಹೆಯೊಳಗೆ ನಡೆದರು.ಯಾವಾಗ ಮರಳಿ ಬರುತ್ತೀರಿ ಎಂದು ಭಕ್ತರು ಬೇಡಿಕೊಂಡಾಗ ಕಲ್ಲುಕೋಳಿ ಕೂಗಿದಾಗ, ಕೆಸವಿನ ಎಲೆ ಕೂಡಿದಾಗ, ಮಂಡಿಬಾಗಿಲು ಹೊಳೆ ಬತ್ತಿದಾಗ ಬರುವೆನೆಂದು ಹೇಳಿ ಅಂತರ್ಧಾನರಾದರು.ಇಂದಿಗೂ ಎಲ್ಲಾ ಜಾತಿಯ ಹೆಂಗಸರು ವರ್ಷಕ್ಕೊಂದಾವರ್ತಿ ಸ್ವಾಮಿಗಳು ಅಂತರ್ಧಾನರಾದ ಗುಹೆಯ ಹತ್ತಿರ ಹೋಗಿ ಬೇಡಿಕೊಳ್ಳುತ್ತಾರಂತೆ.

ಬಸರೂರಿನ ದೊರಕಿದ ಅಧ್ಯಯನಕ್ಕೆ ಒಳಪಡಿಸಿಕೊಂಡ ಕತೆಗಳನ್ನು, ಪುರಾಣಗಳನ್ನು, ಐತಿಹ್ಯಗಳನ್ನು ಗಮನಿಸಿದರೆ ಬಸರೂರಿನ ಭೌಗೋಳಿಕ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ಆರ್ಥಿಕ ಸ್ಥಿತಿಗತಿಗಳನ್ನು ಕಂಡುಕೊಳ್ಳಲು ಸಾಧ್ಯವಿದೆ. ಬಸರೂರಿನ ಶ್ರೀ ಮಹಾಲಿಂಗೇಶ್ವರನ ಸ್ಥಾಪನೆಯ ಹಿಂದಿನ ಪುರಾಣೈತಿಹ್ಯ ಮತ್ತು ಕತೆಗಳ ಎರಡು ಪ್ರಮುಖ ಅಂಶವನ್ನು ತಿಳಿಸುತ್ತದೆ. ವಸುಚಕ್ರವರ್ತಿ ಮರಳಿನಿಂದ ಲಿಂಗಮಾಡಿ ಪೂಜಿಸಿ ವಿಸರ್ಜಿಸುವಂತ ಕ್ರಮ,ಸಿಂಧೂ ಸಂಸ್ಕೃತಿಯ ಪ್ರಕೃತಿಯ ಪೂಜೆ. ಪ್ರಕೃತಿಯನ್ನು ಅಂತರ್ಗೊಳಿಸಿಕೊಂಡ ಶಿವಲಿಂಗದ ಆರಾಧನೆ ಬಸರೂರಿನಲ್ಲಿದ್ದ ವಿಶಿಷ್ಟ ಧಾರ್ಮಿಕ ಆಚರಣೆಯೆಂದು ತಿಳಿಯುತ್ತದೆ.ಬಸರೂರಿನ ಊರು ಕೇರಿಗಳ ಹೆಸರು ಹೇಗೆ ಬಂದಿತು ಎಂಬುದು ತಿಳಿಯುತ್ತದೆ. ಬಸರೂರಿನ ಶ್ರೀ ಮಹಾಲಿಂಗೇಶ್ವರನ ಸ್ಥಾಪನೆ ಮತ್ತು ಧರ್ಮಸ್ಥಳದ ಮಂಜುನಾಥನ ಸ್ಥಾಪನೆ ಹಿಂದಿರುವ ಐತಿಹ್ಯಗಳು ಬಸರೂರು ಒಂದು ಕಾಲಕ್ಕೆ ಶೈವ ತಾಂತ್ರಿಕ ಶಾಖೆಯಾದ ನಾಥ ಪಂಥದ ಸಂಪೂರ್ಣ ಹಿಡಿತಕ್ಕೆ ಒಳಗಾದ ಪ್ರದೇಶವೆಂಬುದು ತಿಳಿಯುತ್ತದೆ.ಬಸರೂರಿನ ಆದಿನಾಥ ಎಂಬ ಹೆಸರು ಮತ್ತು ಅಲ್ಲಿಯೆ ಹತ್ತಿರವಿರುವ ಬೌದ್ಧ ಸ್ತೂಪ ಮಾದರಿಯ ಕಾಲಭೈರವನ ಗುಡಿಯ ಭೌತಿಕ ರಚನೆ ಬಸರೂರಿನ ನಾಥದ ಪ್ರಭಾವವನ್ನು ಗಟ್ಟಿಗೊಳಿಸುತ್ತದೆ. ದಾಸಯ್ಯ ಊದಿದ ಶಂಖ ಧರ್ಮಸ್ಥಳದ ಶಂಖವಾಗಿರಲಿಲ್ಲ ಎಂಬುದು ನಾಥದ ಪ್ರಭಾವವನ್ನು ಅಲ್ಲಗಳೆಯುವ ಪ್ರಯತ್ನದಂತೆ ಕಾಣುತ್ತದೆ. ಬಸರೂರು ಪಂಚಾಯತಿಕೆ ಬಸರೂರಿನವರು ಎಲ್ಲರನ್ನು ಸಂಭಾಳಿಸಿಕೊಂಡು ಹೋಗುವ ನ್ಯಾಯ ತೀರ್ಮಾನದಂತೆ ಕಾಣುತ್ತದೆ. ವರದೇಂದ್ರ ಸ್ವಾಮಿಗಳು ಕೆರೆಯ ನೀರನ್ನು ತನ್ನ ಹೊಟ್ಟೆಯಲ್ಲಿ ತುಂಬಿಕೊಂಡು ಅಹಂಕಾರಿಗೆ ಬುದ್ಧಿಕಲಿಸಿದ ಐತಿಹ್ಯದಿಂದ ಮೂಡುಕೇರಿಯಲ್ಲಿರುವ ಕೆರೆಗೆ ಅಗಸ್ತ್ಯಕೆರೆ ಎಂಬ ಹೆಸರು ಬಂತು ಎಂಬುದು ತಿಳಿಯುತ್ತದೆ.

ಅಗಸ್ತ್ಯ ಋಷಿ ಸಮುದ್ರವನ್ನೇ ಕುಡಿದ ಕತೆಯನ್ನು ಈ ಘಟನೆಗೆ ಸಂಬಂಧ ಕಲ್ಪಿಸಿರುವುದು ಬಸರೂರಿನಲ್ಲಿ ವೈದಿಕ ಸಂಸ್ಕೃತಿ ತನ್ನ ಅಸ್ಥಿತ್ವವನ್ನು ಗಟ್ಟಿಗೊಳಿಸಲು ಮಾಡಿದ ಪ್ರಯತ್ನ ಎಂಬುದು ತಿಳಿಯುತ್ತದೆ. ಇಲ್ಲಿ ಬಸರೂರಿನ ಪಂಚಾಯತಿದಾರರ ಬುದ್ಧಿವಂತಿಕೆಯ ಜೊತೆಗೆ ಹೆಡ್ಡತನವು ಪ್ರಕಟಗೊಳ್ಳುತ್ತದೆ. ಆದರೆ ಶಾಸನಗಳಲ್ಲಿ ಬಸರೂರು ಪಂಚಾಯಿತಿಕೆಯ ನಿಷ್ಠುರತನ, ನಿಸ್ಪ್ರಹತೆ ಎದ್ದು ಕಾಣುವ ಅಂಶವಾಗಿದೆ.

ಬಸರೂರಿನ ಚಪ್ಪೆಕಾರ ನಾಯಕರ ಬಗೆಗಿನ ಕತೆಗಳು ಅವರ ವಲಸೆಯನ್ನು ತಿಳಿಸುತ್ತದೆ. ಇದೇ ಬಗೆಯ ಕತೆ ಬಳ್ಳಾರಿ ಜಿಲ್ಲೆಯ ಮುದ್ದೆಕಂಬಾರರಲ್ಲಿಯೂ ಕಾಣುತ್ತದೆ. ಬಸರೂರಿನ ಗೌಡಸಾರಸ್ವತರ ಬಗೆಗಿನ ಕತೆಗಳು ಬಸರೂರಿಗೆ ಅವರ ವಲಸಿಗರು ಎಂಬುದನ್ನು ತಿಳಿಸುವುದರ ಜೊತೆಗೆ ಅವರು ಬುದ್ಧಿವಂತಿಕೆಯಿಂದ ಇಲ್ಲಿನ ಜನರೊಡನೆ ಬೆರೆತ ರೀತಿಯನ್ನು ತಿಳಿಸುತ್ತದೆ. ಕರಣಿಕರ ಕತೆಯಲ್ಲಿ ವೈದಿಕ ಮತ್ತು ಅವೈದಿಕ ಘರ್ಷಣೆ ಮತ್ತು ಪ್ರತಿಕಾರವನ್ನು ಕಾಣಬಹುದು.ಹುಯ್ಯಾರ ಚಾತ್ರ ಮತ್ತು ಪಂಜುರ್ಲಿ ಐತಿಹ್ಯವು ಅವೈದಿಕ ಮತ್ತು ವೈದಿಕ ಸಂಘರ್ಷ ಮತ್ತು ವೈದಿಕದ ಶರಣಾಗತಿ ಕಾಣುತ್ತದೆ. ಚೀನಿಯರ ಭೂತದ ಐತಿಹ್ಯ ಚೀನಿಯರು ಬಸರೂರಿಗೆ ಬಂದಿರುವ ಸಾಧ್ಯತೆಗಳು ಮತ್ತು ಅವರು ಸಮುದ್ರದಲ್ಲಿ ಅಪಾಯಕ್ಕೊಳಗಾದ ಐತಿಹಾಸಿಕ ಅಂಶಗಳ ಮೇಲೆ ಬೆಳಕು ಬೀರುತ್ತದೆ.ದೇವದಾಸಿಯರು ಮತ್ತು ವೀರಭದ್ರನ ಐತಿಹ್ಯಗಳು ದೇವದಾಸಿಯರ ಸ್ಥಾನಮಾನವನ್ನು ತಿಳಿಸಿಕೊಡುತ್ತದೆ. ಬಸರೂರಿನ ಮೇಲಾದ ಟಪ್ಪುವಿನ ದಾಳಿಯ ಕಾರಣವನ್ನು ಮರೆಮಾಚುವ ಮತ್ತು ಟಿಪ್ಪುವನ್ನು ಬಸರೂರಿನ ಜನ ಸ್ವೀಕರಿಸಿದ ಬಗೆ ಇದರಿಂದ ತಿಳಿಯುತ್ತದೆ. ಈ ದಾಳಿಯ ಬಗ್ಗೆ ಇವರಿಗೆ ಬೇಸರ ಇದ್ದಂತೆ ಕಾಣುವುದಿಲ್ಲ.

ಬಸರೂರಿನ ಸಾಂಸ್ಕೃತಿಕ ಅಧ್ಯಯನದಲ್ಲಿ ಗಮನಿಸಿದ ಐತಿಹ್ಯ, ಪುರಾಣ, ಕತೆಗಳು, ನೈಜಕತೆಗಳ ಸಹಜ ನಿರೂಪಣೆಯಾಗಿರಲಿ ವೈಭವಿಕೃತ ನಿರೂಪಣೆಯಾಗಿರಲಿ ಘಟನೆಯ ವ್ಯಾಖ್ಯಾನವಾಗಿರಲಿ ಅವುಗಳಲ್ಲಿ ವಾಸ್ತವದ ಎಳೆ ಅಡಗಿಕೊಂಡಿದೆ. ಇವುಗಳ ಅಧ್ಯಯನದಿಂದ ಬಸರೂರಿನ ಒಳನೋಟಗಳು ಹೊರಹೊಮ್ಮಿದೆ.

೪.೧.೪. ಜನಪದ ಗೀತೆಗಳು (ಬಸರೂರನ್ನು ಅನುಲಕ್ಷಿಸಿ)

ಜನಪದ ಗೀತೆಗಳು ಮೌಖಿಕ ಸಾಹಿತ್ಯದ ಪ್ರಮುಖ ಪ್ರಕಾರ.ಜನಜೀವನದ ಭಾಗವಾಗಿ ಬರುವ ಇವುಗಳು ಒಂದು ಪ್ರದೇಶದ ಸಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ ಬಹುಮುಖ್ಯ ಆಕರಗಳಾಗುತ್ತದೆ. ಸಾಮಾನ್ಯ ಜನರು ರಚಿಸಿರುವ ಜನಪದ ಗೀತೆಗಳು ಪ್ರಾದೇಶಿಕ ತಳಹದಿಯ ಮೇಲೆ ರೂಪಿತವಾಗಿದೆ. ಒಂದು ಪ್ರದೇಶದ ಜನಪದಗೀತೆಗಳು ಆ ಪ್ರದೇಶದ ಪ್ರಾಕೃತಿಕ, ಸಾಮಾಜಿಕ, ಧಾರ್ಮಿಕ ಪರಿಸರದ ಪ್ರಭಾವಕ್ಕೊಳಗಾಗಿರುತ್ತದೆ.ಈ ಜನಪದ ಗೀತೆಗಳಿಂದ ಒಂದು ಪ್ರದೇಶದ ಭೌಗೋಳಿಕ ಅಂಶಗಳು, ನಂಬಿಕೆಗಳು, ಸಂಪ್ರದಾಯಗಳು,

ಹಬ್ಬ ಹರಿದಿನಗಳು, ಜನಸಮುದಾಯದ ಕಸುಬು, ಮುಂತಾದ ಪ್ರಾದೇಶಿಕ ಸಂಸ್ಕೃತಿಯೂ ಅನಾವರಣಗೊಳ್ಳುತ್ತದೆ. ಬಸರೂರಿನ ಸಾಂಸ್ಕೃತಿಕ ಅಧ್ಯಯನಕ್ಕೆ ಬಸರೂರಿನ ಕುರಿತಾಗಿರುವ ಜನಪದ ಸಾಹಿತ್ಯವನ್ನು ಅನುಲಕ್ಷಿಸಿ ಸಂಸ್ಕೃತಿಯ ವಿವೇಚನೆ ಮಾಡಲಾಗಿದೆ.

ಬಸರೂರು ಕ್ರಿಸ್ತಪೂರ್ವದಿಂದಲೂ ವ್ಯಾಪಾರದ ಮೂಲಕ ಸಾಗರೋತ್ತರ ಪ್ರಸಿದ್ಧಿಯನ್ನು ಪಡೆದ ಪಟ್ಟಣಯೆಂಬುದಕ್ಕೆ ಐತಿಹಾಸಿಕ ಆಧಾರಗಳಿವೆ. ಅರಬ್ ದೇಶ, ಏಡನ್, ಚೀನಾ ಮೊದಲಾದ ರಾಷ್ಟ್ರಗಳಿಂದಲೂ ವ್ಯಾಪಾರಕ್ಕಾಗಿ ಜನ ಬಸರೂರಿಗೆ ಬರುತ್ತಿದ್ದರು. ಈ ಬಗೆಯ ಇತಿಹಾಸದ ಆಧಾರಗಳಿಗೆ ಸಮಪಾತಳಿಯಲ್ಲಿ ಜನಪದ ಸಾಹಿತ್ಯವು ನಿಂತಿರುವುದನ್ನು ಕಾಣಬಹುದು. ಬಸರೂರಿನ ಜನಪ್ರಿಯತೆಯನ್ನು ತಿಳಿಸುವ ಜನಪದ ಗೀತೆ ಹೀಗೆನ್ನುತ್ತದೆ,

ಬಸರೂರು ಎಂಬುದು ಹೆಸರಾದ ಪಟ್ಟಣ
ಹಸಿದ್ಯಾಕೊ ಬಂದೆ ಹೆರಿಯಣ್ಣ
ಕುಸಿಯಾಗಿ[೧೭] ಹೊರಗೆ ಹೋಗಣ್ಣ

ಬಸರೂರನ್ನು ಆಳಿದ ಅರಸರುಗಳು, ಆಡಳಿತಾಧಿಕಾರಿಗಳು ದೇವಾಲಯ ಮತ್ತು ಮಠಗಳಿಗೆ ಸಾಕಷ್ಟು ಉಂಬಳಿಯನ್ನು ಬಿಟ್ಟಿದ್ದರು. ದೇವಾಲಯದ ನಿತ್ಯ ಪೂಜೆ, ಅನ್ನದಾಸೋಹಗಳು ಸಮರ್ಪಕವಾಗಿ ನಡೆಯುವಂತೆ ನೋಡಿಕೊಳ್ಳುತ್ತಿದ್ದರು. ಅನ್ನ ಛತ್ರವನ್ನು ನಡೆಸುವ ಅನೇಕ ಮಠಗಳು ಬಸರೂರಿನಲ್ಲಿದ್ದು, ಇಲ್ಲಿಗೆ ಬಂದವರ ಹಸಿವನ್ನು ಹೋಗಲಾಡಿಸುವ ಕೆಲಸವನ್ನು ಮಾಡುತ್ತಿದ್ದವು. ಈ ಕುರಿತಾಗಿ ಜನಪದ ಸಾಹಿತ್ಯದ ಆಧಾರ ಮಾತ್ರವಲ್ಲದೆ ಶಾಸನಗಳ ಆಧಾರವು ಇದೆ. ಇನ್ನೊಂದು ಜನಪದ ಗೀತೆ ಬಸರೂರಿನ ಪೂರ್ವ ಇತಿಹಾಸವನ್ನು ಸೂಕ್ಷ್ಮವಾಗಿ ತೆರೆದಿಡುತ್ತದೆ. ಬಸರೂರು ಒಂದು ಪಟ್ಟಣವಾಗಿದ್ದು ಅಲ್ಲಿನ ವಿಶಾಲವಾದ ಹಾದಿ-ಬೀದಿ, ವಿದೇಶಿಯರು ನಡೆದಾಡುವ ಪ್ರತ್ಯೇಕ ರಸ್ತೆ ಇವುಗಳ ಬಗೆಗೆ ವಿದೇಶಿ ಪ್ರವಾಸಿಗರ ಬರೆಹಗಳು ಮಾಹಿತಿ ನೀಡಿದೆ. ಅದೇ ಬಗೆಯ ಮಾಹಿತಿಯನ್ನು ಈ ತ್ರಿಪದಿ ತಿಳಿಸುತ್ತದೆ.

ಕ್ವಾಟಿ ಕೋಟೆಸುರೊ[೧೮] ನಾಟ್ಕದ ಗಂಗೊಳ್ಳಿ
ಪ್ಯಾಟಿ ಪಟ್ಟಣದ ಬಸರೂರ ಹೆಣ್ಮಕ್ಳ
ನಾಟಕದ ನಗೆಯ ನಗುವರು

ಈ ತ್ರಿಪದಿ ಬಸರೂರು, ಕೋಟೇಶ್ವರ, ಗಂಗೊಳ್ಳಿಯ ಮಹತ್ವವನ್ನು ತಿಳಿಸಿಕೊಡುತ್ತದೆ. ಈ ಮೂರು ಪ್ರದೇಶಗಳು ಒಬ್ಬನೇ ಅರಸನ ಆಡಳಿತಕ್ಕೆ ಒಳಪಟ್ಟಿದ್ದಾಗಿದೆ.ಗಂಗೊಳ್ಳಿ[೧೯] ಬಸರೂರಿನ ಅಂತರ್ಗತ ಪ್ರದೇಶವಾಗಿದೆ. ಬಸರೂರು ಆಕಾಲದಲ್ಲಿಯೇ ಕರಾವಳಿ ಕರ್ನಾಟಕದ ಪ್ರಸಿದ್ಧ ಪಟ್ಟಣವಾಗಿದ್ದಿತ್ತು. ವಿದೇಶಿಯರು ಬಸರೂರು ನಗರಕ್ಕೆ ಬಾರದೇ

ಹೋಗುತ್ತಿರಲ್ಲಿಲ. ವ್ಯಾಪಾರ ಮನೋಭಾವದ ಬಸರೂರಿನ ಜನರು ನಾಟಕದ ನಗೆಬೀರಿ ಜನರನ್ನು ತಮ್ಮತ್ತ ಸೆಳೆದುಕೊಳ್ಳುತ್ತಿದ್ದರು. ಬಸರೂರು ಆಕರ್ಷಣೆಯ ಕೇಂದ್ರವಾಗಿತ್ತು. ಬಸರೂರಿನವರ ವ್ಯಾಪಾರಿ ಬುದ್ಧಿ, ಪೇಟೆಯವರ ಅಸಹಜ ನಗೆಯನ್ನು ತಿಳಿಸುತ್ತದೆ.

ಬಸರೂರು ಅತ್ಯಂತ ಸುಂದರ ಪಟ್ಟಣವಾಗಿದ್ದಿತ್ತು. ಇಂದಿನ ಆಧುನಿಕ ಪಟ್ಟಣಕ್ಕಿಂತಲೂ ವ್ಯವಸ್ಥಿತವಾಗಿತ್ತು. ಕೆರೆಗಳು, ಕೇರಿಗಳು, ರಸ್ತೆಗಳು ಬಸರೂರಿನ ಸೌಂದರ್ಯವನ್ನು ಹೆಚ್ಚಿಸಿದ್ದವು. ಈ ಊರು ಎಲ್ಲಾ ಊರುಗಳಿಗೆ ಕಳಸಪ್ರಾಯದಂತಿತ್ತು ಮತ್ತು ಹಣೆಯಬೊಟ್ಟಿನಂತೆ ಪ್ರಮುಖವಾಗಿತ್ತು ಮತ್ತು ಆಯಕಟ್ಟಿನ ಜಾಗದಲ್ಲಿತ್ತು.

ಹುಟ್ಟು ಚೆಂದ ಬಾರ್ಕೂರು[೨೦] ಕಟ್ಟೋಣ ಚೆಂದ ಚೆರ್ಮಾರ
ಪಟ್ಣಾ ಚೆಂದ ಬಸರೂರು/ಹೆಣ್ಮಕ್ಕಳ
ಬೊಟ್ಟಿಟ್ಟರೆ ಚೆಂದ ಹಣಿಮ್ಯಾಲೆ

ಬಸರೂರು ಹೊಸಪಟ್ಟಣ ಎಂದು ಪ್ರಸಿದ್ಧಿ ಪಡೆದಿದೆ. ಸುತ್ತಮುತ್ತಲಿನ ಮಾಗಣೆಯ ಜನ ಬಸರೂರು ಪೇಟೆಗೆ ವ್ಯಾಪಾರಕ್ಕೆ ಬರುತ್ತಿದ್ದರು. ದೇಶಿಯರಿಗೆ ಮತ್ತು ವಿದೇಶಿಯರಿಗೆ ಸಂಚರಿಸಲು ಬೇರೆ ಬೇರೆ ಮಾರ್ಗಗಳಿದ್ದವು. ಇಲ್ಲಿ ಎಲ್ಲವು ಚೆಂದ ಮತ್ತು ಅಚ್ಚುಕಟ್ಟು ಎಂಬುದು ಗಮನಾರ್ಹವಾದುದು.

ಕೊರ್ಲ್‌ತಾತಿನ[೨೧] ಬಟ್ಟು ತೋಳಿನನಡುಕಟ್ಟು[೨೨]
ಮಾರಾಯ್ರು ನನ್ನ ಮೈದಿನ–ಬಸರೂರಿಗೆ
ಬರುವರು ಹಾರಿ ಓಕುಳಿ

ಬಸರೂರಿನ ಓಕುಳಿ ಆಟ ಅತ್ಯಂತ ಪ್ರಸಿದ್ಧವಾದದ್ದು. ಮಹಾಲಿಂಗೇಶ್ವರನ ರಥೋತ್ಸವ ಮುಗಿದ ಮರುದಿನ ಗೋಧೂಳಿಯಲ್ಲಿ ಓಕುಳಿಯಾಟ ಆರಂಭವಾಗುತ್ತದೆ. ಹಲರು ಶೆಟ್ಟರು ಎಂದು ಕರೆಯಲಾಗುವ ಬಂಟ ಸಮುದಾಯದ ಯುವಕರು ಓಕುಳಿಯಾಟದಲ್ಲಿ ಉತ್ಸಾಹದಿಂದ ಪಾಲ್ಗೋಳ್ಳುತ್ತಾರೆ. ಇವರ ಕೊರಳಿಗೆ ತಾಯತವನ್ನು ಕಟ್ಟಿಕೊಳ್ಳುತ್ತಿದ್ದರು. ಸೊಂಟಕ್ಕೆ ಶಾಲನ್ನು ಸುತ್ತಿ ಓಕುಳಿ ಹಾರಲು ಸಿದ್ಧರಾಗಿ ಬರುತ್ತಿದ್ದರು. ಓಕುಳಿಗೆ ಮುನ್ನ ಯುವಕರೆಲ್ಲ ತಮ್ಮ ಉತ್ಸಾಹ ಮತ್ತು ಸಾಮರ್ಥ್ಯ ತೋರಿಸಲು ಕೇರಿಕೇರಿಯಲ್ಲಿ ಮೆರವಣಿಗೆ ಹೊರಡುತ್ತಾರೆ. ಹಿಂದೆಲ್ಲಾ ದೇವದಾಸಿಯರ ಮನೆಯಲ್ಲಿ ಯುವಕರು ಅಡಗಿ ಕುಳಿತುಕೊಳ್ಳುತ್ತಿದ್ದರಂತೆ. ಅಂತವರನ್ನು ಓಕುಳಿ ಹೊಂಡಕ್ಕೆ ಹೊತ್ತು ತಂದು ಹಾಕುತ್ತಿದ್ದರು. ಓಕುಳಿ ಆಟ ಬಸರೂರಿನ ಬಂಟರ ಅಸ್ಥಿತ್ವ ಮತ್ತು ಪೌರುಷದ ಸಂಕೇತವಾಗಿದ್ದಿತ್ತು. ಅತ್ತಿಗೆಯೊಬ್ಬಳು ತನ್ನ ಮೈದುನ ಓಕುಳಿ ಆಟಕ್ಕೆ ಹಾರಿಬರಲಿ ಎಂದು ಹಾರೈಸುತ್ತಾಳೆ. ಓಕುಳಿ ಆಟಕ್ಕೆ ಹಲರು ಶೆಟ್ಟರು ಎಲ್ಲಿದ್ದರೂ ಬಸರೂರಿಗೆ ಬರುತ್ತಾರೆ.

ಬಸರೂರು ಪ್ಯಾಟಲಿ ಎತ್ತಕಟ್ಟಿ ಬಪ್ಪಂಗೆ
ಸುತ್ತಕಟ್ಟಿ ಸೂಳಿ ತಡೆದಳು–ಗ್ವಾಪಣ್ಣ
ಹಣಕಲ್ಲ ನಿನ್ನ ಗುಣಕಾಯಿ

ಬಸರೂರಿನಲ್ಲಿ ಪರಪಳ್ಳಿ ನಾಯಕ ಎಂಬ ಸಾಂಸ್ಕೃತಿಕ ನಾಯಕನಿದ್ದ ಎನ್ನುವುದು ಐತಿಹ್ಯ ಮತ್ತು ಶಾಸನಗಳಿಂದ ತಿಳಿಯುತ್ತದೆ. ಬಸರೂರಿನಲ್ಲಿ ಗೋಮಾಳ ಇಲ್ಲದನ್ನು ಕಂಡು ವ್ಯವಹಾರ ಚತುರತೆಯಿಂದ ಭೂಮಿ ಪಡೆದು ಗೋಮಾಳ ನಿರ್ಮಿಸಿದನು. ಬಸರೂರಿಗೆ ಬೇರೆ ಬೇರೆ ಊರುಗಳಿಂದ ಬೇಸಾಯದ ಕೆಲಸ ಮುಗಿದ ಮೇಲೆ ಎತ್ತು ಹೋರಿಗಳನ್ನು ಮೇಯಲು ಕಟ್ಟುತ್ತಿದ್ದರು ಎನ್ನುವುದನ್ನು ತ್ರಿಪದಿಯ ಮೊದಲ ಸಾಲು ತಿಳಿಸುತ್ತದೆ. ಈ ತ್ರಿಪದಿಯ ಆಧಾರದ ಮೇಲೆ ಬಸರೂರಿನ ಹಟ್ಟಿಕುದ್ರು[೨೩] ಗೋಮಾಳದ ಸ್ಥಳ ಎಂದು ತಿಳಿಯುತ್ತದೆ. ಬಸರೂರಿನ ದೇವದಾಸಿಯರು ಹಣ ಮೆಚ್ಚುವವರಲ್ಲ ಗುಣ ಮೆಚ್ಚುವವರು ಎಂಬುದು ಸ್ಪಷ್ಟವಾಗುತ್ತದೆ. ದೇವದಾಸಿಯರು ಸಾಂಸ್ಕೃತಿಕ ಜನವರ್ಗ[೨೪]ವೆಂಬುದು ಈ ತ್ರಿಪದಿಯಿಂದ ತಿಳಿಯುತ್ತದೆ.

ಬಸರೂರಿನ ಶ್ರೀ ಮಹಾಲಿಂಗೇಶ್ವರನ ಓಕುಳಿ ಹಬ್ಬ ಕಾಣುವುದೆ ಪುಣ್ಯ ಎಂಬುದನ್ನು ಜನಪದರು ಈ ತ್ರಿಪದಿಯಲ್ಲಿ ಹಾಡಿ ಹೊಗಳಿದ್ದಾರೆ.

ಸಂಕ್ರಾಣದಿ ಹೊಳಿಗಿಂತ[೨೫] ಬಸ್ರೂರೋಕಳಿ ಚೆಂದ
ಉಡುಪಿಯಲ್ಲಾಗೋ ಪರ್ಯಾಯ ಕಂಡರೆ
ಕಣ್ಣ ಪಾಪಗಳು ಪರಿಹಾರೋ

ಸಪ್ತಕ್ಷೇತ್ರಗಳಲ್ಲಿ ಒಂದಾದ ಶಂಕರನಾರಾಯಣದಲ್ಲಿ ಹರಿಯುವ ವಾರಾಹಿ ಹೊಳೆಯ ಅಂದವನ್ನು ನೋಡುವುದೇ ಚೆಂದ. ಘಟ್ಟದ ಪ್ರದೇಶದಿಂದ ನೀರು ಧುಮ್ಮಿಕ್ಕಿ ಬರುವುದನ್ನು ಕಾಣುವದೇ ಚೆಂದ. ಅದಕ್ಕಿಂತಲೂ ವಾರಾಹಿ ನದಿಯ ದಡದಲ್ಲಿರುವ ಬಸರೂರಿನಲ್ಲಿ ಓಕುಳಿ ಹೊಂಡಕ್ಕೆ ಹಾರುವಾಗ ನೀರು ಮೇಲೂಕ್ಕಿ ಬರುವುದನ್ನು ನೋಡುವುದೇ ಚೆಂದ. ಬಸರೂರಿನ ಓಕುಳಿ, ಉಡುಪಿಯಲ್ಲಿ ಎರಡು ವರ್ಷಗಳಿಗೊಮ್ಮೆ ನಡೆಯುವ ಪರ್ಯಾಯ ಮಹೋತ್ಸವ ಅತ್ಯಂತ ಪವಿತ್ರವಾದುದು. ಇವುಗಳನ್ನೆಲ್ಲ ಜೀವಮಾನದಲ್ಲೊಮ್ಮೆ ನೋಡಬೇಕೆಂಬ ಇಚ್ಛೆಯನ್ನು ಜನಪದರು ವ್ಯಕ್ತಪಡಿಸುವುದನ್ನು ಕಾಣಬಹುದು.

ಬಸರೂರು ಹಬ್ಬದ ಕುರಿತಾದ ಇನ್ನೊಂದು ಜನಪದ ತ್ರಿಪದಿ ಹೀಗಿದೆ.

ಅಮ್ಮ ಚೆಂದ ಕೊಲ್ಲೂರು/ತೇರ ಚೆಂದ ಸವುಕೂರು
ಓಕುಳಿ ಚೆಂದ ಬಸರೂರು/ಮಾಲಿಂಗೂ
ರಥವೇರುದು ಚೆಂದ ನಡುಪೇಟೆ

ಬಸರೂರಿನಲ್ಲಿ ಏಳು ದಿನಗಳ ತನಕ ಮಹಾಲಿಂಗೇಶ್ವರನ ಜಾತ್ರೆ ನಡೆಯುತ್ತದೆ. ಏಳು ದಿನಗಳ ಕಾಲವು ಬಸರೂರಿನ ಬೇರೆ ಬೇರೆ ಕೇರಿಗಳಲ್ಲಿ ಮೆರವಣಿಗೆ, ಕಟ್ಟೆವಸಂತ, ವಾಹನೋತ್ಸವ ಜರಗುತ್ತದೆ. ವಿವಿಧ ಊರುಗಳಿಂದ ಜನ ಜಾತ್ರೆಗೆ ಬಂದು ಸೇರುತ್ತಾರೆ.ಆರು ತಿರುಗಾಟದ ನಂತರ ಏಳನೆ ದಿನ ರಥೋತ್ಸವ ನಡೆಯುತ್ತದೆ. ಆ ದಿನ ಮಧ್ಯಾಹ್ನ ಏರು ಹಗಲಲ್ಲಿ ಶ್ರೀಮಹಾಲಿಂಗೇಶ್ವರನ ಉತ್ಸವ ಮೂರ್ತಿಯನ್ನು ವೈಭವ ಪೂರ್ಣ ಮೆರವಣಿಗೆಯಲ್ಲಿ ಹೊತ್ತು ತಂದು ತೆಂಕುಬಾಗಿಲಿನಲ್ಲಿ ಅಲಂಕರಿಸಿ ನಿಂತಿದ್ದ ರಥಕ್ಕೆ ಏರಿಸುವ ಹೊತ್ತು ಭಕ್ತರಲ್ಲಿ ಭಕ್ತಿ ಭಾವಪನ್ನು ಹೊತ್ತಿಸುತ್ತದೆ. ಇದನ್ನು ಕಂಡ ಜನಪದರ ಮನಸ್ಸು ಹಾಡಿದ ಪರಿಯಿದು. ಮತ್ತೊಂದು ತ್ರಿಪದಿ ಶ್ರೀ ಮಹಾಲಿಂಗೇಶ್ವರನ ತೇರು ಕಟ್ಟುವ ರೀತಿ ಮತ್ತು ಅದರ ಶ್ರೀಮಂತಿಕೆಯನ್ನು ವರ್ಣಿಸಿದೆ.

ತೇರಿ ತೇರನು ಕಟ್ಟಿ ತೇರಿಪತ್ತಕು[೨೬] ಕಟ್ಟಿ
ಗೂಡು ಕಟ್ಟಿದರು ತಲೆಮ್ಯಾಲಾ/ಚಿನ್ನದ
ಕಳಸವಿಟ್ಟರೂ[೨೭] ಕೊಡಿಮ್ಯಾಲೆ

ಬಸರೂರಿನ ಮಹಾಲಿಂಗೇಶ್ವರ ದೇವರ ತೇರನ್ನು ನೋಡುವುದೇ ಚೆಂದ. ಪ್ರತಿವರ್ಷವು ಜಾತ್ರೆಗೆ ತೇರನ್ನು ಕಟ್ಟುವುದು ಸುಲಭದ ಕೆಲಸವಲ್ಲ. ಈ ತೇರು ಕಟ್ಟುವ ಕೆಲಸವನ್ನು ಯಾವುದೇ ಸಂಭಾವನೆ ಪಡೆಯದೆ ಮೋಗವೀರರು ನಿರ್ವಹಿಸುತ್ತಾರೆ. ತೇರು ಕಟ್ಟುವ ಕೆಲಸ ಕೊಡಿಮರಕ್ಕೆ ಗರನ ಕಟ್ಟುವ ದಿನದಿಂದ ಆರಂಭವಾಗಿ ರಥೋತ್ಸವದ ಹಿಂದಿನ ದಿನ ಮುಗಿಯುತ್ತದೆ. ಮಂಟಪದ ಭಾಗ ಮಾತ್ರವಿರುವ ತೇರಿಗೆ ಅಂತಸ್ತನ್ನು ಕಟ್ಟಿ ಮಂಟಪದ ಭಾಗಕ್ಕೆ ಸುಂದರ ಕಮಾನು ಜೋಡಿಸುತ್ತಾರೆ. ಮಂಟಪದ ಮೇಲ್ಗಡೆ ದೇವಾಲಯದ ಗೋಪುರವನ್ನು ಹೋಲುವಂತೆ ಮಾಡಿ ಅದಕ್ಕೆ ಬಣ್ಣಬಣ್ಣದ ಪತಾಕೆ ಕಟ್ಟುತ್ತಾರೆ.ಗೋಪುರದ ತುದಿಯಲ್ಲಿ ಶಿಖರ ಹಾಗೂ ಕಳಸವನ್ನು ಕೂಡಿಸುತ್ತಾರೆ. ತೇರಿನ ಕಳಸದ ಮೇಲೆ ಬಣ್ಣದ ಛತ್ರಿಯನ್ನು ಜೋಡಿಸುತ್ತಾರೆ. ಈ ರೀತಿಯಲ್ಲಿ ತೇರು ಕಟ್ಟುವುದನ್ನು ಕಂಡ ಜನಪದರು ಈ ಬಗೆಯಲ್ಲಿ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಬಸರೂರು ವಿವಿಧ ವೃತ್ತಿ ಆಧಾರಿತ ಜನಸಮುದಾಯವು ನೆಲೆಸಿದ ಊರಾಗಿದೆ. ಅವರವರ ವೃತ್ತಿಗಳು ಸಾಂಸ್ಕೃತಿಕ ಶ್ರೀಮಂತಿಕೆಯನ್ನು ತೋರಿಸುತ್ತದೆ. ದೈವಸ್ಥಾನಗಳ ಉರುಗಳನ್ನು, ರಥವನ್ನು, ಹೂವಿನ ತೇರನ್ನು ಮುಂತಾದ ಕಲಾತ್ಮಕ ಸೂಕ್ಷ್ಮ ಕೆತ್ತನೆಯ ಕೆಲಸ ಮಾಡುವ ಗುಡಿಗಾರರು ಬಸರೂರಿನಲ್ಲಿದ್ದಾರೆ. ಅವರು ಅನ್ವರ್ಥವಾಗಿ ಗುಡಿಗಾರರು ಎಂದೆನಿಸಿಕೆಂಡಿದ್ದಾರೆ. ಮದುವೆಗೆ ಬೇಕಾದ ಬಾಸಿಂಗವನ್ನು ಗುಡಿಗಾರರೇ ತಯಾರಿಸುತ್ತಿದ್ದರು. ಬೇರೆಯವರು ಮಾಡುವ ಬಾಸಿಂಗಕ್ಕಿಂತ ಹೆಚ್ಚು ಪಾವಿತ್ರ್ಯತೆ ಬಸರೂರಿನ ಬಾಸಿಂಗಕ್ಕೆ ಇದ್ದಿತ್ತು.ಅಂತೆಯೇ ಬಸರೂರಿನ ಸುತ್ತಲಿನ ಮಾಗಣೆಯ ಶ್ರೀಮಂತರು ತಮ್ಮ ಮನೆಯಲ್ಲಿ

ನಡೆಯುವ ಮದುವೆ ಸಮಾರಂಭಗಳಿಗೆ ದೌಲತ್‌ಜಾದ(ನೋಡಿ,ಪ್ರದರ್ಶನ ಕಲೆ ಮತ್ತು ಸಂಸ್ಕೃತಿ ಅಧ್ಯಾಯದ ದೌಲತ್ಜಾದ) ನಡೆಸಲು ಬಸರೂರಿನ ಪಾತರದವರನ್ನು ಕರೆಯುತ್ತಿದ್ದರು. ಬಸರೂರು ಸಾಂಸ್ಕೃತಿವಾಗಿ ಶ್ರೀಮಂತಿಕೆಯನ್ನು ಹೊಂದಿದೆ ಮತ್ತು ಬಸರೂರಿನ ಪಾತರದವರು[೨೮] ಸಾಂಸ್ಕೃತಿಕ ಹರಿಕಾರರಾಗಿದ್ದರು ಎಂಬುದು ಈ ತ್ರಿಪದಿಯಿಂದ ತಿಳಿಯುತ್ತದೆ.

ಬಾಸಿಂಗಕ್ಕೆ ಹೇಳ್ಬನ್ನಿ ಬಸರೂರ ಗುಡಿಗಾರ್ಗೆ
ಲೇಸು ನಾರಾಯಣ್ಣ ಮದುವೆಗೆ-ಬಸರೂರ
ಪಾತರದ ಸೂಳೇರಿಗಜ್ಜನು ಬಿಡಿ

ಬಸರೂರು ಮಾತೃಪ್ರಧಾನ ಸಂಸ್ಕೃತಿಯ ಕೇಂದ್ರವಾಗಿದೆ. ಇಲ್ಲಿನ ಹೆಂಗಸರು ಮನೆಯ ವ್ಯವಹಾರವನ್ನು ಆಡಳಿತ ವ್ಯವಹಾರವನ್ನು ನೋಡಿಕೊಳ್ಳುತ್ತಿದ್ದರು. ಪತಿಯ ಶೌರ್ಯ ಪರಾಕ್ರಮಕ್ಕೆ ಇಂಬು ಕೊಡುತ್ತಿದ್ದರು. ಪತಿಯೊಡನೆ ಪ್ರಾಣಾರ್ಪಣೆ ಮಾಡಿದ ಮಹಾಸತಿಯರು[೨೯] ಬಸರೂರಿನಲ್ಲಿದ್ದರು.ಗಂಡನ ಗೆಲುವನ್ನು ಕಂಡು ಸಂತೋಷ ಪಡುವ ಮತ್ತು ಅಂತಹ ಗೆಲುವನ್ನೆ ತರಬೇಕೆಂದು ಹಾರೈಸುವ ಮಡದಿಗೆ ಬೆಳ್ಳಿಕ್ವಾಟೆಯ ಗೆದ್ದು ಬಂದ ಪತಿರಾಯ ಸಂದೇಶ ಕಳುಹಿಸುವುದನ್ನು ಈ ತ್ರಿಪದಿಯಲ್ಲಿ ಕಾಣಬಹುದು.

ಬೆಳ್ಳಿ ಕ್ವಾಟಿಯ ಗೆದ್ದು ಬಂದನೆಂದು
ಹೇಳಿಬಿಡು ಅವನ ಮಡದಿಗೆ-ಬಸರೂರಲಿ
ಕೇಳಿ ಸಂತಸವ ಬಿಡುವಳು

ಬಸರೂರಿನಲ್ಲಿ ದೀಪಾವಳಿಯ ವೈಭವವೇ ಬೇರೆ. ಬಸರೂರಿನ ಶ್ರೀ ಮಹಾಲಿಂಗೇಶ್ವರ ದೇವಾಲಯದ ಕಂಚಿನ ಗಣಪತಿ ದೀಪ ಸ್ತಂಭ, ವೆಂಕಟರಮಣ ದೇವಸ್ಥಾನದ ಕಂಚಿನ ದೀಪಸ್ತಂಭ, ಕಂಚುಗಾರರ ಕಲಾ ಪ್ರೌಢಿಮೆಗೆ ಬಸರೂರಿನ ದೀಪಾವಳಿ ಹಬ್ಬದ ಸಾಂಸ್ಕೃತಿಕ ಶ್ರೀಮಂತಿಕೆಗೆ ಸಾಕ್ಷಿಯಾಗಿದೆ. ಈ ಕಂಚಿನಕಂಬದ ಭವ್ಯತೆ, ದಿವ್ಯತೆ, ಕಲಾತ್ಮಕತೆ ಬಲೀಂದ್ರ ಹಾಡುಗಳಲ್ಲಿ ವರ್ಣಿತವಾಗಿದೆ. ಜೊತೆಗೆ ಬಸರೂರಿನ ಮತ್ತು ಸುತ್ತಮುತ್ತಲಿನ ಮಾಗಣೆಗಳ ಕೃಷಿಕರ ಸಾಂಸ್ಕೃತಿಕ ನಾಯಕ ಪರಸಂಸೆಟ್ಟಿ ಎಂಬ ವ್ಯಾಪಾರಸ್ಥ ಮತ್ತು ಸಮಾಜ ಸೇವಕನ ವಿವರಣೆ ಇದೆ. ಬಸರೂರಿನ ಜಟ್ಟಿಗರಾಯನ[೩೦] ವರ್ಣನೆ ಈ ಪದ್ಯದಲ್ಲಿ ಬರುತ್ತದೆ. ಬಸರೂರಿನ ಶ್ರೀ ಮಹಾಲಿಂಗೇಶ್ವರನಿಗೆ ಐದು ಗ್ರಾಮಗಳಲ್ಲಿ ಭೂಮಿ ಇದ್ದು ಅದನ್ನೆಲ್ಲ ಬೇಸಾಯ ಮಾಡುತ್ತಿದ್ದ ಕೃಷಿಕರು ತಮ್ಮ ಭೂಮಿಯ ಒಡೆಯನನ್ನು ಭೂಮಿಗೆ ಆಸರೆಯಾಗಿ ನಿಂತ ದೈವ ದೇವರುಗಳನ್ನು ಕೃತಜ್ಞಾಪೂರ್ವಕವಾಗಿ ನೆನೆಯುವ ಶ್ರೀಮಂತ ಹೃದಯವಂತಿಕೆ ಈ ಪದ್ಯದಲ್ಲಿದೆ.

ಹೊಲಿಗಿ ಕೊಟ್ರೊ ಬಲಿ ತಕಂಡ್ರೊ
ಬಲೀಂದ್ರ ದೇವ ಬಪ್ಪಾಗ
ಹೊನ್ನ ರಾಶಿ ನೆಲ್ಲ್‌ರಾಶಿಬಿ
ರಾಯರೆದ್ದು ಬಪ್ಪಾಗ
ವಿದ್ಯಾಬುದ್ದಿಗಾಗಿ,
ನೆಲಕೆ ನಾಗೇಂದ್ರನ ಮೇಲೆ
ದೀಪಾ ದೀಪೋಳಿ ಮೇಲೆ

ಬಸ್ರೂರ ಕಂಬಿನ ಮೇಲೆ
ಸಾಸಕ್ಕಿ ಸೂಸ ಬಿದ್ದ
ಒಂದ ಬಿತ್ತಿ ನೂರ ಬೆಳ್ದ
ಗಂಗಿ-ಗೌರೆಂಬ ತಿರಿಕಟ್ಟಿ
ಮೇಲೇಳೂ ಲೋಕೋ
ಕೆಳಗೇಳ ಲೋಕೋ
ಏಳೇಳ್ ಲೋಕೊ ಹದಿನಾಲ್ಕ್ ಲೋಕೋ
ಪರಸಂ ಸೆಟ್ಟಿ ದೇವ್ರಮೂಲ
ಹೊಲಿಕೊಟ್ರೋ ಬಲಿ ತಕಂಡ್ರೊ
ಬಲಿಂದ್ರ ದೇವ್ರ್ ತಮ್ಮ ರಾಜ್ಯಕ್ಕೆ ತಾವ್ ಬಂದ್ರ್

ಬೆಳೆ ಸಮೃದ್ಧಿ ಆಶಯ ಮತ್ತು ತಿರಿ ಎಂಬ ಭತ್ತದ ಕಣಜ ಕಟ್ಟುವ ಬಗೆಗೆ ಬೆಳಕು ಚೆಲ್ಲುತ್ತದೆ. ಬತ್ತದ ರಾಶಿ ನಮ್ಮ ಜನಪದರ ಪಾಲಿಗೆ ಚಿನ್ನದರಾಶಿ ಎಂಬ ದೈವಿಕ ಭಾವನೆ ಎದ್ದು ತೋರುತ್ತದೆ.

ಬಸರೂರಿನ ರಸಿಕ ಜನರ ಬಗೆಗೆ ಮಾಹಿತಿ ನೀಡುವ ಅನೇಕ ತ್ರಿಪದಿಗಳು 'ಮದ್ದುಂಟೆ ಜನನ ಮರಣಕ್ಕೆ' ಎಂಬ ಕೃತಿಯಲ್ಲಿದೆ. ಬಸರೂರು ಕರಾವಳಿ ಕರ್ನಾಟಕದ ಶ್ರೀಮಂತ ನಗರಗಳಲ್ಲಿ ಒಂದು. ತಾಬೂಲಕ್ಕೆ ಇಲ್ಲಿನ ಜನ ಭಟ್ಕಳ ಬಂದರಿನಿಂದ ಬಿಳಿಎಲೆ ಚಿಗುರು ವೀಳ್ಯದೆಲೆಯನ್ನು ತರಿಸಿಕೊಳ್ಳುತ್ತಿದ್ದರು ಎಂಬ ವಿಚಾರವನ್ನು ತ್ರಿಪದಿ ತಿಳಿಸುತ್ತದೆ.

ಬಿಳಿ ಎಲೆ ಮೆಲ್ಲಾರೆ ಬಸರೂರಿಗೋಗ್ಬೇಕು
ದಳಿಬಂದ ಸೀರಿ ಉಡ್ಕಾರೆ-ಎಲೆನಾರಿ
ಸರದಾರ್‍ರ ಕೈಯ ಹಿಡಿಬೇಕು.

ಬಿಳಿಎಲೆ ಮತ್ತು ದಳಿಸೀರೆ ಎರಡನ್ನು ಕಾಣಲು ಬಸರೂರಿಗೆ ಬರಬೇಕು. ಸರದಾರನ ಕೈಯ ಹಿಡಿದವರಿಗೆ ಮಾತ್ರ ದಳಿಸೀರೆ ಉಡಲು ಸಾಧ್ಯವಾಗುತ್ತದೆ. ಬಿಳಿಎಲೆ ಬಸರೂರಿನ ದೇವದಾಸಿಯರ ಅಂತಸ್ತನ್ನು, ಪರಿಶುದ್ಧತೆಯನ್ನು ಸೂಚಿಸುತ್ತದೆ. ಬಸರೂರು ವಾಣಿಜ್ಯ ನಗರಯೆನ್ನುವುದು ತಿಳಿಯುತ್ತದೆ.

ಬಸರೂರಿನ ದೇವದಾಸಿಯರ ಉಡುಗೆ–ತೊಡುಗೆಯನ್ನು ಹೊಗಳುವ ತ್ರಿಪದಿ

ಕಡಿಯಕ್ಕಿ[೩೩] ಕೂಳ್ ಚೆಂದ ಕಡೆದಮಜ್ಜಿಗೆ ಚೆಂದೂ
ಕಡಲಲ್ಲಿ ಬಪ್ಪ ತೆರೆ ಚೆಂದೂ–ಬಸರೂರ
ದೇವಿಯರ ಚಣ್ಣನೆರಿ ಚೆಂದೊ.

ಕಡಿಯಕ್ಕಿ ಕೂಳ ರುಚಿಯಾದದ್ದು ಅದಕ್ಕೆ ಕಡೆದ ಮಜ್ಜಿಗೆಯನ್ನು ಬೆರೆಸಿದರೆ ಬಲುರುಚಿ. ಸಮುದ್ರದಲ್ಲಿ ಒಂದರ ಹಿಂದೊಂದು ಬರುವ ತೆರೆಯನ್ನು ನೋಡುವುದೆ ಚೆಂದ. ಬಸರೂರ ದೇವಿಯರೆನಿಸಿಕೊಂಡಿರುವ ದೇವದಾಸಿಯರು ಸಣ್ಣಸಣ್ಣ ನೆರಿಗೆಯನ್ನು ಹಾಕಿ ಸೀರೆ ಉಡುತ್ತಾರೆ. ದೇವದಾಸಿಯರ ಉಡುಗೆ–ತೊಡುಗೆಗಳ ವಿವರ ಈ ತ್ರಿಪದಿಯಿಂದ ತಿಳಿಯುತ್ತದೆ. ಬಸರೂರಿನ ದೇವದಾಸಿಯರು ಜನಸಮುದಾಯವಲ್ಲ ಅವರು ಸಾಂಸ್ಕೃತಿಕ ಜನವರ್ಗ, ದೇವರಸೇವಕರು, ದೇವಿಯರು ಎಂಬ ಅರ್ಥವನ್ನು ನೀಡಿದೆ.

ಬಸರೂರಿನ ಮಾಲಿಂಗ ಜಾತ್ರೆಯ ಸಮಯದಲ್ಲಿ ಏಳು ಕೇರಿಗಳಲ್ಲಿ ದಿನಕ್ಕೊಂದು ವಾಹನವನ್ನು ಏರಿ ಮೆರವಣಿಗೆ ಹೋಗುವುದು ನೋಡುವುದೇ ಚೆಂದ. ದೇವರು ಕಟ್ಟೆ ಪೂಜೆಗೆ ಹೋಗುವಾಗ ದೇವಾಲಯದ ಕಟ್ಟುಕಟ್ಟಲೆಯವರು ದೇವರೊಂದಿಗೆ ಮೆರವಣಿಗೆ ಹೋಗುತ್ತಾರೆ. ಈ ರೀತಿ ನಗರೋತ್ಸವಕ್ಕೆ ದೇವರು ಹೊರಟಾಗ ದೇವಾಲಯದ ಕಟ್ಟುಕಟ್ಟಲೆಯವರು ಅನುಸರಿಸುವ ಕ್ರಮವನ್ನು ಹೇಳಲಾಗಿದೆ. ತಂತ್ರಿಗಳು, ಕಟ್ಟೆಗೆಕೋಲಿನವರು, ಪಂಚವಾದ್ಯದವರು, ಹಲಗಬಾರಿಸುವವರು. ಜಾಗಟೆಯವರು, ತಟ್ಟಿರಾಯ, ದೊಂದಿಯವರು ಮೊದಲಾದವರು ಪಲ್ಲಕ್ಕಿಯ ಜೊತೆಗಿರುತ್ತಾರೆ. ಆದರೆ ಅವರೆಲ್ಲರಿಗಿಂತ ಮುಂದೆ ಬಸರೂರಿನ ಸೂಳೆಯರ ಮೇಳ ಇರುತ್ತಿತ್ತು. ಬಸರೂರಿನ ಸೂಳೆಯರ ಮೇಳದವರಿಗಿರುವ ಧಾರ್ಮಿಕ ಮನ್ನಣೆ ಈ ತ್ರಿಪದಿಯಿಂದ ತಿಳಿಯುತ್ತದೆ.

ಸಾರ್ಗಿ ಹೋಪ್ದ್ ಚೆಂದೊ ಬಸರೂರ ಮಾಲಿಂಗ
ಸೂರಿಪನು[೩೪] ಹಿಂದೆ ಕೊಡಿಮುಂದೆ /ಮಾಲಿಂಗ
ಸೂಳಿಯರೊಡನೆ ನೆಡೆದರು.

ಈ ಮೇಲಿನ ಎಲ್ಲಾ ತ್ರಿಪದಿಗಳು ಮತ್ತು ಬಲೀಂದ್ರ ಹಾಡುಗಳು ಬಸರೂರಿನ ಬಗ್ಗೆ ಮಾಹಿತಿ ನೀಡುತ್ತದೆ. ಇವುಗಳಿಂದ ಬಸರೂರಿನ ಇತಿಹಾಸದಿಂದ ಹಿಡಿದು ಜನರ ರಸಿಕ ಭಾವದವರೆಗಿನ ಅನೇಕ ಮಜಲುಗಳು ಅನಾವರಣಗೊಳ್ಳುತ್ತವೆ.

### ೪.೧.೫. ಪಾಣಾರ ಹೊಗಳಿಕೆ

ಪಾಣಾರ ಹೊಗಳಿಕೆ ಸ್ಥಳಿಯ ದೈವಗಳಿಗೆ ಸಂಬಂಧಿಸಿದ ಆರಾಧನ ಪ್ರಕ್ರಿಯೆಯಾಗಿದೆ. ಜನರ ಅನುಭವದಿಂದ ಮೌಖಿಕ ಸಾಹಿತ್ಯವಾಗಿ ಇವುಗಳು ಹೊರಹೊಮ್ಮಿದೆ."ತುಳುನಾಡಿನ ಭೂತಗಳ ಕಲೆ,ಕಾರ್ಣಿಕ,ಉಕ್ಕು,ಸೊಕ್ಕುಗಳನ್ನು ವಿವರಿಸುವ ಪಾರ್ದನಗಳಿರುವಂತೆ ಬಡಗು ಭಾಗದ ದೈವಗಳಾದ ನಂದಿಕೋಣ, ಹಾಯ್ಗುಳಿ, ಬಾಲಚಿಕ್ಕು, ದೊಟ್ಟೆಕಾಲು ಚಿಕ್ಕು, ಇತ್ಯಾದಿಗಳ ಹುಟ್ಟು, ಪ್ರಸರಣವನ್ನು ಪಾಡ್ದನಗಳು ವಿವರಿಸುತ್ತದೆ" (ನಾವುಡ ಎ.ವಿ ಮತ್ತು ಗಾಯತ್ರಿ ನಾವುಡ;೨೦೦೭;ಪುಟ:೧೮).

(ಅ) ದೊಟ್ಟಕಾಲು ಚಿಕ್ಕು ಹೊಗಳಿಕೆ

ಬಸರೂರಿನ ಧಾರ್ಮಿಕ ಇತಿಹಾಸದೊಡನೆ ಸಾಂಸ್ಕೃತಿಕ ಸಿರಿವಂತಿಕೆಯನ್ನು ಹೇಳುವ ಮೂಡುಕೇರಿಯ ದೊಟ್ಟೆಕಾಲುಚಿಕ್ಕು ಹೊಗಳಿಕೆ ಬಸರೂರಿನಲ್ಲಿ ಜೈನರ ಇರುವಿಕೆಯನ್ನು ಅನಾವರಣಗೊಳಿಸುತ್ತದೆ. ಕೂಡು ಕುಟುಂಬವಾಗಿ ಬದುಕುತ್ತಿದ್ದ ಅಕ್ಕ ತಂಗಿಯರು ಪರಸ್ಪರ ಒಬ್ಬರನೊಬ್ಬರು ಅಗಲಲಾರದೆ ಕೆರೆಗೆಹಾರಿ ಪ್ರಾಣಾಹುತಿ ಮಾಡಿಕೊಂಡ ವಿವರಗಳನ್ನು ಪಾಡ್ದನ ತಿಳಿಸುತ್ತದೆ. ಜೊತೆಗೆ ಬಸರೂರಿನ ಭೌತಿಕ ಸಂಸ್ಕೃತಿಯ ಪರಿಕರಗಳಾದ ಗಿರಿಜೆಮಣೆ[೩೫] ಮತ್ತು ಸಾಂಸ್ಕೃತಿಕ ಮತ್ತು ಧಾರ್ಮಿಕ ಮಹತ್ವವಿರುವ ಮಂಡ್ಲಭೋಗದ[೩೬] ಬಗ್ಗೆ ವಿವರಣೆ ಒದಗಿಸುತ್ತದೆ. ಈ ಪಾಡ್ದನ ಬಸರೂರಿನ ಮೂಡುಕೇರಿಯಲ್ಲಿ ಜೈನ ಮನೆತನಗಳು ವಾಸವಾಗಿದ್ದ ಬಗ್ಗೆ ವಿವರ ನೀಡುತ್ತದೆ. ಗಿರಿಜೆಮಣೆ ಆಡಿ ಸೋತ ಅವಮಾನದಿಂದ ಅಕ್ಕ ಬಾವಿಗೆ ಹಾರಿ ಪ್ರಾಣಾಹುತಿ ಮಾಡಿಕೊಂಡಿರುವುದನ್ನು ಕಂಡು ತಂಗಿ ಮನನೊಂದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಆತ್ಮಹತ್ಯೆ ಮಾಡಿಕೊಂಡ ಅಕ್ಕ ತಂಗಿಯರೇ ಮುಂದೇ ದೊಟ್ಟೆಕಾಲಮ್ಮ ಮತ್ತು ದೊಟ್ಟೆಕಾಲುಚಿಕ್ಕು[೩೭] ದೈವಗಳಾಗುತ್ತಾರೆ. ಆದರೆ ಇಲ್ಲಿ ಹೊಡೆದಾಟವಿಲ್ಲ, ಹಿಂಸೆಯಿಲ್ಲ, ಪರಸ್ಪರ ಅಗಲುವಿಕೆಯ ನೋವು ಆತ್ಮಹತ್ಯೆಯಲ್ಲಿ ಕೊನೆಗೊಳ್ಳುತ್ತದೆ. ಈ ಪಾಡ್ದನದ ಮೇಲೆ ಜೈನರ ಅಹಿಂಸಾವಾದದ ಪ್ರಭಾವ ಕಂಡುಬರುತ್ತದೆ. ಅಕ್ಕ ತಂಗಿಯರು ಆಟವಾಡಿ ಸಾಯುವುದು ಸಿರಿಯ ಬಸರೂರಿನ ಸಂಬಂಧಕ್ಕೆ ಈ ಪಾಡ್ದನ ಹತ್ತಿರವಾಗುತ್ತದೆ. ಈ ಪಾಡ್ದನವನ್ನು ಅನುಬಂಧದಲ್ಲಿ ನೀಡಲಾಗಿದೆ.

(ಆ) ಸಿರಿ ಪಾಡ್ದನ

ಗಿಡಿಕರೆ ರಾಮಕ್ಕ ಮುಗ್ಗೇರ್ತಿ ಕಟ್ಟಿದ ಸಿರಿಪಾಡ್ದನದಲ್ಲಿ ಬಸರೂರಿನ ವಿವರಣೆ ಉದ್ದಕ್ಕೂ ಬರುತ್ತದೆ. ಸಿರಿಯ ಮದುವೆ ನಿಶ್ಚಯ, ನೆಂಟರು ಬಸರೂರಿಗೆ ಆಗಮನ, ನೀರು ತಂಬಿಸುವ ಕಲ್ಲಿನ ಮರಗಿ, ನೀರಿನ ದೊಟ್ಟೆ, ಏತದ ಮರ, ಅರಮನೆಯ ವರ್ಣನೆ, ಕಂಬಳದಗದ್ದೆ, ಮದುವೆಯ ಚಪ್ಪರ ನಿರ್ಮಾಣ, ಇಲ್ಲಿನ ಬೆಳೆ, ಕಲಬಿ, ಅಚ್ಚು ಬೆಲ್ಲ,ಓಲಬೆಲ್ಲ, ಓಲೆಚಾಪೆ, ಬಸರೂರಿನ ಸೂಳೆಸಿದ್ದು, ಬಯಕೆಯಸೀರೆ, ಗೆಜ್ಜೆಕತ್ತಿ,

ಮಸಿಗಂಜಿತೆಳಿ ಮುಂತಾದ ಸಾಂಸ್ಕೃತಿಕ ವಿವರಗಳನ್ನು ಗಮನಿಸಬಹುದು. ಈ ಮೇಲಿನ ಪದಗಳು ಕುಂದಾಪುರ ಕನ್ನಡ ಮಾತನಾಡುವ ಪ್ರದೇಶದ್ದಾಗಿದೆ. ಸಿರಿಪಾಡ್ದನದ ಉದ್ದಕ್ಕೂ ಬಸಲೂರು ಹೆಸರು ಮರುಕಳಿಸುವುದನ್ನು ಕಾಣಬಹುದು.

ದಾರಿ ಹಿಡಿದುಕೊಂಡು ಬೀದಿ ಹಿಡಿದುಕೊಂಡು ಬರುವರಂತೆ
ಇಂದಾದರೂ ಏಳು ಹೆಜ್ಜೆ ತುಸುಮುಂದೆ ಬಂದರಂತೆ
ಒಂದು ಗುಡ್ಡೆ ಬಯಲು ಹಿಡಿದರಂತೆ
ಅವನ್ನು ಬೆನ್ನಹಿಂದೆ ಹಾಕಿಕೊಂಡು ಏಳು ಹೆಜ್ಜೆ
ತುಸು ಮುಂದೆ ಹೋಗುವರು ನೆಂಟರೂ
ಓ ಬಸಲೂರ ನೆಂಟರೋ...ಓ...ಓ...ಓ

ಬಸಲೂರ ಅರಮನೆಯ ಕಂಬಳದ ದೊಡ್ಡ ಬದು ಹಿಡಿದರೂ ನೆಂಟರೂ
ಬಸಲೂರ ನೆಂಟರೂ...ಓ...ಓ...ಓ...ಓ
ಸುತ್ತು ಪಾಗಾರ ದಾಟಿದರೂ
ಆನೆ ಬಾಗಿಲು ಸರ್ರನೆ ಹೊಕ್ಕರು
ಮನೆಯ ಮೆಟ್ಟಿಲ ಸನಿಹ ತಲಪಿದರು
ಮೇಲುಚಾವಡಿ ಮೇಲೇರಿ ಹೋದರು
ತೂಗುಂದೊಟ್ಟಿನಲಿ ಆಳುವನೂ ಬಂದ ನೆಂಟನೂ ಒಂದಾಗಿ ಕುಳಿತರು
ಬಸಲೂರ ಅರಮನೆಯಲ್ಲಿ ಹೋಗಿ ಬಂದ ನೆಂಟರೂ...ಓ...ಓ...ಓ
ಬಸಲೂರು ಅರಮನೆಯಲ್ಲಿ
ಇಂದು ಒಕ್ಕಲು ಮಕ್ಕಳು ಮಂದೆ ಮಾರ್ಬಲ
ಮೇಲಿಗೆ ಮೇಲ್ ಚಪ್ಪರ ಹಾಕಿದರಂತೆ
ಕರಿಯ ಕಬ್ಬು ಕಡಿಸಿದರಂತೆ
ಕರಿಯ ಕಬ್ಬಿಂದ ಕಂಬ ಕೊಟ್ಟರಂತೆ
ಬಿಳಿಯ ಕಬ್ಬು ಕಡಿಸಿದರಂತೆ
ಬಿಳಿಯ ಕಬ್ಬಿಂದ ಅಡ್ಡಗೋಲು ಹಾಕಿದರಂತೆ
ಕರಿಯ ಲಾವಂಚ ತರಿಸಿದರಂತೆ
ಕರಿಯ ಲಾವಂಚದ ಕುಚ್ಚ ಇಳಿಸಿದರಂತೆ
ಬಸರೂರು ಅರಮನೆಯ ಸಂಕರು ಪೂಂಜೆದಿ ಓ...

ಎಂದು ಹೇಳುವ ಮೂಲಕ ಸಿರಿಯ ಬಸರೂರು ಸಂಬಂಧ ಆರಂಭವಾಗುತ್ತದೆ. ಬಸರೂರು ಮತ್ತು ಆಸುಪಾಸಿನ ಮಾಗಣೆಗಳಲ್ಲಿ ಸಿರಿನ ಬಳಿಯವರು ಬಯಕೆ ಮದಿ ಮಾಡುವುದಿಲ್ಲ.

ಸಿರಿನ ಬಳಿಯವರು ಹಗ್ಗಿನ ತಿಂಗಳಲ್ಲಿ ಶುಭಕಾರ್ಯ ಮಾಡುವುದಿಲ್ಲ, ರಂಗೋಲಿ ಬರೆಯುವುದಿಲ್ಲ, ಸುಣ್ಣ ಹೊಯ್ಯುವುದಿಲ್ಲ, ಮಂಗಳವಾರ ಗಂಡನ ಮನೆಗೆ ಕಳುಹಿಸಿಕೊಡುದಿಲ್ಲ. ಇದನ್ನೆಲ್ಲ ಗಮನಿಸಿದರೆ ಈ ತಿಂಗಳಲ್ಲಿಯೇ ಸಿರಿ ಬಸರೂರಿನ ಅರಮನೆ ನಾಶವಾಗಿ ಹೋಗಲಿ ಎಂದು ಶಾಪ ಕೊಟ್ಟರಬಹುದು. ಬಸರೂರ ಅರಮನೆಗೆ ಬೆನ್ನು ತಿರುಗಿಸಿ ಹೋದ ದಿನವೇ ಮಂಗಳವಾರ ಆಗಿರಬಹುದು ಎಂದು ಊಹಿಸಬಹುದು. ಆದರೆ ಬಸರೂರಿನ ಮತ್ತು ಸಿರಿಯ ಸಂಬಂಧ ಮುಂದಿನ ಅಧ್ಯಯನಕಾರರಿಗೆ ಸವಾಲಿನ ವಿಷಯವಾಗಿದೆ.

### ೪.೧.೬.ಗಾದೆಗಳು

ಮೌಖಿಕ ಸಾಹಿತ್ಯದಲ್ಲಿ ಜನಪದ ಗೀತೆಯಂತೆ ಗಾದೆಗಳನ್ನು ವಿವೇಚಿಸಲಾಗಿದೆ. ಗಾದೆಗಳ ಮೂಲಕ ಬಸರೂರಿನ ಜನಸಮುದಾಯದ ಸಾಂಸ್ಕೃತಿಕ ಪ್ರಜ್ಞೆಯನ್ನು ತಿಳಿದುಕೊಳ್ಳಲು ಸಾಧ್ಯವಾಗಿದೆ. ಗಾದೆಗಳು ಜನಪದರ ಬದುಕಿನ ಜೀವಾಳ. ಅವರ ಸಮಗ್ರ ಸಾಮಾಜಿಕ ಬದುಕಿನೊಡನೆ ತಳಕು ಹಾಕಿಕೊಂಡು, ಅವರ ಜೀವನ ಸಂಸ್ಕೃತಿ ಅದರೊಳಗೆ ಬೆರೆತಿದೆ. ಬಸರೂರಿನ ಸಂಸ್ಕೃತಿಯ ಒಳವಿವರಗಳನ್ನು ತಿಳಿದುಕೊಳ್ಳಲು ಗಾದೆಗಳು ಸಹಕಾರಿಯಾಗಿದೆ.

(ಅ) ಮಂದರ್ತಿ ಬಸವ ಬಸರೂರು ಸೂಳೆ

ಈ ಗಾದೆಯಲ್ಲಿ ಮಂದರ್ತಿ ಮತ್ತು ಬಸರೂರನ್ನು ತುಲನೆ ಮಾಡಲಾಗಿದೆ.ಇವೆರಡು ಪ್ರಸಿದ್ಧ ಧಾರ್ಮಿಕ ಪಟ್ಟಣವಾಗಿದ್ದು ಶಕ್ತಿ ಆರಾಧನೆಯ ಕೇಂದ್ರವು ಆಗಿರುವುದು ಅಧ್ಯಯನದಿಂದ ತಿಳಿಯುತ್ತದೆ. ಹುಟ್ಟಿದ ಮಕ್ಕಳು ಬದುಕದಿದ್ದಾಗ ಮಂದಾರ್ತಿ ದೇವರಿಗೆ ಬಿಡುವುದೆಂಬ ಧಾರ್ಮಿಕ ನಂಬಿಕೆಯಿದೆ. ಹೀಗೆ ದೇವರಿಗೆ ಬಿಟ್ಟ ಗಂಡು ಮಕ್ಕಳಿಗೆ ಬಸವ ಎಂದು ಕರೆಯುವುದುಂಟು. ಇವರು ದೇವರಿಗೆ ತುಂಬಾ ಹತ್ತಿರದವರು ಮತ್ತು ಪ್ರೀತಿ ಪಾತ್ರರು. ಅವರು ಬದುಕಿದಷ್ಟು ಕಾಲ ಮಂದರ್ತಿ ದೇವರ ಹಬ್ಬಕ್ಕೆ ಹೋಗಿ ರಥದ ಮಿಣಿಯನ್ನು ಹಿಡಿದು ರಥ ಎಳೆಯಬೇಕು. ಅಂತೆಯೆ ಬಸರೂರಿನಲ್ಲಿ ದೇವರಿಗೆ ಬಿಟ್ಟವರು ಎಂದರೆ ದೇವದಾಸಿಯರು ಇವರನ್ನು ಬಸವಿಯರು ಎಂದು ಕರೆಯುವುದು ವಾಡಿಕೆ.ಮೈನೆರೆದ ದೇವದಾಸಿಕನ್ಯೆ ತನ್ನ ಜೀವನವನ್ನು ಮಹಾಲಿಂಗೇಶ್ವರನಿಗೆ ಅರ್ಪಿಸಿಕೊಂಡು ದೇವಾಲಯದ ಅಂಗಭೋಗ ರಂಗಭೋಗವನ್ನು ಜೀವನವಾಗಿಸಿಕೊಂಡಿದ್ದಾರೆ. ಪ್ರತಿದಿನ ದೇವಾಲಯದಲ್ಲಿ ತಟ್ಟೆಚಾಕರಿ ಮಾಡುವ ಇವರು ನವರಾತ್ರಿ, ರಥೋತ್ಸವದ ಸಂದರ್ಭದಲ್ಲಿ ಪಲ್ಲಕ್ಕಿಯ ಮುಂದೆ ನೃತ್ಯ ಸೇವೆ ಮಾಡುತ್ತಾರೆ. ಮಂದಾರ್ತಿಯ ಬಸವ, ಬಸರೂರಿನ ಸೂಳೆ ಇಬ್ಬರು ಹಬ್ಬಕ್ಕೆ ಮೆರುಗನ್ನು ನೀಡುತ್ತಾರೆ.

### ೪.೨. ಗ್ರಂಥ ಸಾಹಿತ್ಯ

ಗ್ರಂಥ ಸಾಹಿತ್ಯವು ಆಧುನಿಕ ಪ್ರಕಾರಕ್ಕೆ ಸೇರಿದರು ಕೂಡಾ ಒಂದು ಪ್ರದೇಶದ ಸಂಸ್ಕೃತಿಯ ಅಧ್ಯಯನದಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಬಸರೂರಿನ ಪಂಚಮಾಗಣೆಯಲ್ಲಿ ಶಿಷ್ಟ ಸಾಹಿತ್ಯ ಹೇರಳವಾಗಿ ದೊರಕದಿದ್ದರೂ ಈ ಐತಿಹಾಸಿಕ ಪಟ್ಟಣದ ಬಗ್ಗೆ ಬಸರೂರಿನ ಹೊರಗಿನವರು ಅನೇಕ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಈ ಕೃತಿಗಳು ಬಸರೂರಿನ ಐತಿಹಾಸಿಕ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಮತ್ತು ಜನಾಂಗೀಯ ವಿಚಾರವನ್ನು ಅವಲಂಬಿಸಿಕೊಂಡು ರಚಿತವಾದ ಕೃತಿಗಳಾಗಿವೆ. ಬಸರೂರಿನ ಜನಪದರ ಬದುಕನ್ನು ಚಿತ್ರಿಸಿದ ವಿದೇಶಿ ಬರೆಹಗಳಿದ್ದರು ಅಧ್ಯಯನದ ದೃಷ್ಟಿಯಿಂದ ದೇಶಿಯ ಬರೆಹಗಳನ್ನು ಮಾತ್ರ ಅನುಲಕ್ಷಿಸಲಾಗಿದೆ. ಈ ನೆಲೆಯಲ್ಲಿ ಕೆಳದಿ ಲಿಂಗಣ್ಣ ಕವಿಯ ಕೆಳದಿ ನೃಪವಿಜಯ, ನಾರಾಯಣ ಉಪ್ಪೂರರ ಬಸರೂರು ಭಾಗ್ಯ, ಶಿವರಾಮ ಕಾರಂತರ ಮೈಮನದ ಸುಳಿಯಲ್ಲಿ ಕೃತಿಯನ್ನು ಸ್ಥೂಲವಾಗಿ ಅಭ್ಯಸಿಸಲಾಗಿದೆ.

#### ೪.೨.೧. ಕೆಳದಿಯ ನೃಪವಿಜಯ

ಬಸರೂರಿನ ಬಗ್ಗೆ ಅಮೂಲ್ಯ ಮಾಹಿತಿಯನ್ನು ನೀಡುತ್ತದೆ. ಈ ಕೃತಿಯು ಬಸರೂರಿನೊಂದಿಗೆ ಕೆಳದಿಯ ಅರಸರು ಹೊಂದಿದ ಆಡಳಿತಾತ್ಮಕ ಸಂಬಂಧವನ್ನು, ಪ್ರಭಾವವನ್ನು ಬಸರೂರಿನ ಸ್ಥಳನಾಮವನ್ನು ಮಾತ್ರ ಅಧ್ಯಯನ ಮಾಡಲು ಪೂರಕವಾಗಿದೆ.

#### ೪.೨.೨. ಬಸರೂರ ಭಾಗ್ಯ

ಈ ಯಕ್ಷಗಾನ ಕೃತಿ ಬಸರೂರಿನ ಧಾರ್ಮಿಕ, ಸಾಂಸ್ಕೃತಿಕ, ವಿವರವನ್ನು ವರ್ಣನಾತ್ಮಕವಾಗಿ ನೀಡುವ ಕೃತಿಯಾಗಿದೆ. ಬಸರೂರಿನ ಭಾಗ್ಯ ಕೃತಿಯಲ್ಲಿ

ತರಳರ ಪಡೆಯಲು।ಹರಕೆಯ ಕೋಟೇಶ್ವರನಿಗೆ
ಅರ್ಪಿಸೆ ಫಲವಾಯ್ತು।ಹರಕೆಯ ತೆರದೊಳು।ಹರ
ದೇಗುಲವಸು।ಪುರದ ವಿರಚಿತ ತಾನಾಯ್ತು
ವಿಪ್ರವರ್ಗ ಕುಂಬಳಿಯ ಬಿಟ್ಟ ಕಂ।ದರ್ಪರಿಯ
ಪೂಜಿಸಲೆನುತಾ।ಒಪ್ಪುವೆ ಚೆಲುವಿನ ದೇವ
ದಾಸಿಯರ।ನೊಪ್ಪಿಸಿದನು ನರ್ತನಕನುಕಾಲ

ಬಸರೂರನ್ನು ಆಳಿದನೆನ್ನುವ ವಸುಚಕ್ರವರ್ತಿಯ ಹರಕೆ ಬಸರೂರಿನ ವಿಪ್ರವರ್ಗ ಅವರಿಗೆ ಉಂಬಳಿ ಬಿಟ್ಟ ವಿಚಾರ ಮತ್ತು ವೀರಭದ್ರನ ಕುರಿತಾದ ಮಾಹಿತಿಯನ್ನು ನೀಡುತ್ತದೆ.ಈ ಕೃತಿ ಯಕ್ಷಗಾನದ ಪಠ್ಯವಾಗಿರುವುದರಿಂದ ಇಲ್ಲಿ ದೊರೆಯುವ ಮಾಹಿತಿಗಳಲ್ಲಿ ವಸ್ತು ನಿಷ್ಠತೆಯನ್ನು ಹುಡುಕುವುದು ಕಷ್ಟವಾಗಿದೆ.

೪.೨.೩. ಮೈಮನದ ಸುಳಿಯಲ್ಲಿ

ಕೋಟ ಶಿವರಾಮ ಕಾರಂತರ ಮೈಮನದ ಸುಳಿಯಲ್ಲಿ ಕಾದಂಬರಿ ಬಸರೂರಿನ ವೇಶ್ಯಯರ ಬದುಕನ್ನು ಚಿತ್ರಿಸುತ್ತದೆ. "ಹಳೆಯ ಕಾಲದ ಸಂಸ್ಕೃತಿಯನ್ನು ಹೊತ್ತು ಬಂದಂತ ಪಟ್ಟಣವಾದ ಮೊದಲಿನ ವಸುಪುರ. ೧೭ನೇಶತಮಾನದಲ್ಲಿ ಕರಾವಳಿಯ ವ್ಯಾಪಾರಕ್ಕೆ ಬರುತ್ತಿದ್ದ ಇಂಗ್ಲೀಷರು, ಪೋರ್ಚುಗೀಸರಿಗೆ, ಡಚ್ಚರಿಗೆ ಪ್ರಮುಖ ಆಕರ್ಷಣೆ. ಇಂದಿನ ಬಸರೂರಿನಲ್ಲಿ ನೆಲೆಸಿದ್ದ ವೇಶ್ಯೆಯರು ಅವರ ವೃತ್ತಿ ಪರಂಪರೆಯಿಂದ ಬಂದುದು ಎಂಬ ಕೀರ್ತಿಯನ್ನು ಹೊತ್ತಿದೆ. ಹಳೆಯ ಕಾಲದ ರಾಜಾಶ್ರಯ, ವೀರಾಶ್ರಯ, ರಸಿಕಾಶ್ರಯಗಳಿಂದ ಪೋಷಿತವಾದ ಈ ವೃತ್ತಿ ನಾಡಿನ ರಸಿಕ ಜೀವನದ ಒಂದು ಕುರುವಾಗಿತ್ತೇ ಹೊರತು, ನಿಂದನೆಗೆ ಗುರಿಯಾದಂತೆ ಕಾಣುವುದಿಲ್ಲ. ಅವರು ಗಳಿಸಿದ ಮರ್ಯಾದೆ, ಸಂಪತ್ತು, ಪ್ರಭಾವ ಯಾವುದು ಕಡಿಮೆಯಾಗಿಲ್ಲ. ದಿನ ಕಳೆದಂತೆ ಇದು ತನ್ನ ಬೆಲೆಯನ್ನು ಕಳೆದುಕೊಳ್ಳತೊಡಗಿತು.ಅಗ್ಗದ ಕಸುಬಾಯ್ತು ಆದುದರಿಂದ ನಂತರದ ದಿನಗಳಲ್ಲಿ ಬಸರೂರಿನ ಹೆಸರು ವ್ಯಂಗ್ಯಕ್ಕೆ ಕಾರಣವಾಯಿತು".ಈ ಕೃತಿ ಬಸರೂರಿನ ದೇವದಾಸಿಯರ ಸಾಂಸ್ಕೃತಿಕ ಬದುಕಿನ ಒಳ ಹೊರಗನ್ನು ವಿಶ್ಲೇಷಿಸುತ್ತದೆ. ಅಷ್ಟೇ ಅಲ್ಲದೆ ೧೭ನೇ ಶತಮಾನದಲ್ಲಿ ಬಸರೂರು ಬದಲಾದ ಬಗೆಯನ್ನು ವಿವರಿಸುತ್ತದೆ.

ಈ ಅಧ್ಯಾಯದಲ್ಲಿ ಬಸರೂರಿನ ಮೌಖಿಕ ಮತ್ತು ಜನಪದ ಸಾಹಿತ್ಯವನ್ನು ಗಮನಿಸಿ ಬಸರೂರಿನ ಸಂಸ್ಕೃತಿಯ ಪರಿಚಯ ಮಾಡಲಾಗಿದೆ. ಇಲ್ಲಿನ ಮೌಖಿಕ ಸಾಹಿತ್ಯದ ಕಾಲಘುಟ್ಟದ ಕಡೆಗೆ ಗಮನಹರಿಸಿದೆ ಅವುಗಳು ನಿರೂಪಿಸಿರುವ ಬಸರೂರಿನ ಸಂಸ್ಕೃತಿ ಒಳ ಹೂರಣವನ್ನು ಅರಿಯಲು ಪ್ರಯತ್ನಿಸಲಾಗಿದೆ. ಗ್ರಂಥಸ್ಥ ಸಾಹಿತ್ಯದಲ್ಲಿ ಕಾಲಘಟ್ಟವನ್ನು ನಿರ್ಧರಿಸಿಕೊಂಡು ಅಧ್ಯಯನ ನಡೆಸಿದೆ. ಬಸರೂರಿನ ಸಾಂಸ್ಕೃತಿಕ ಅಧ್ಯಯನವು ಬಸರೂರಿನ ಪೂರ್ವಪರಂಪರೆಗೆ ಹೆಚ್ಚು ಒತ್ತು ನೀಡಿದೆ. ಇಲ್ಲಿ ಅನುಲಕ್ಷಿಸಿದ ಸಾಹಿತ್ಯವು ಬಸರೂರಿನ ಸ್ಥಳ ಪುರಾಣ, ಕೇರಿಯ ಹೆಸರು, ಜನಸಮುದಾಯದ ಜಾಣತನ, ಕುಶಲಕರ್ಮಿಗಳ ಕೌಶಲ್ಯ, ದೇವದಾಸಿಯರ ಸಾಂಸ್ಕೃತಿಕಮನ್ನಣೆ, ಬಸರೂರಿನ ಓಕುಳಿ, ರಥೋತ್ಸವ, ಬಸರೂರಿನ ದೈವ ದೇವರುಗಳ ಶಕ್ತಿ, ಬಸರೂರಿನವರ ಸಮಾಜಸೇವೆ, ಬಸರೂರಿನ ನಗರ ಸೌಂದರ್ಯಗಳನ್ನು ತಿಳಿಸಿಕೊಡುತ್ತದೆ.

## ಕೊನೆ ಟಿಪ್ಪಣಿ

೧. ಶಾಸನಗಳು ಜನಸಾಮಾನ್ಯರ ಬದುಕನ್ನು ಚಿತ್ರಿಸದೆ ದಾನ, ಯುದ್ಧ ಮುಂತಾದ ವಿಚಾರಗಳನ್ನು ಮಾತ್ರ ಒಳಗೊಳ್ಳುತ್ತದೆ.ಸಾಹಿತ್ಯವು ಜನಸಾಮಾನ್ಯರ ಬದುಕನ್ನು ಚಿತ್ರಿಸುತ್ತದೆ.

೨. ಉಡುಪಿ ಮತ್ತು ಕುಂದಾಪುರ ತಾಲೂಕಿನ ಕೆಲವೆಡೆ ಈತನಿಗೆ ಸಂಬಂಧಿಸಿದ ಐತಿಹ್ಯಗಳಿವೆ. ಉಪ್ಪೂರಿನಲ್ಲಿ ದೊರೆತ ಕ್ರಿ.ಶ. ೧೨೫೮ ಕ್ಕೆ ಸೇರುವ ಶಾಸನದಲ್ಲಿ ಪರಪಳ್ಳಿ ನಾಯಕನೆಂಬುವನು ಸುವರ್ಣದಾನ ಮಾಡಿದ ಉಲ್ಲೇಖವಿದೆ. ಬಸರೂರಿನ ಸಮೀಪದ ಹಂದಾಡಿಯಲ್ಲಿ ಈತ ನಿರ್ಮಿಸಿದ್ದ ಎಂದು ಹೇಳುವ ನಾಯಕರ ಮಠವಿದೆ.

೩. ಕನ್ನಡದ ಉಪಭಾಷೆಯಾದ ಕುಂದಾಪ್ರ ಕನ್ನಡದಲ್ಲಿ ಕೆಲಸ ಎನ್ನುವ ಅರ್ಥವಿದೆ.

೪. ಎಸರಿಗೆ ಅಕ್ಕಿ ಹಾಕುವುದೆಂದರೆ ಅನ್ನ ಮಾಡುವ ಮಡಿಕೆಗೆ ಅಕ್ಕಿ ಹಾಕಿ ಬೇಯಿಸುವುದು.

೫. ಪಾತ್ರಿಯ ಮೇಲೆ ದೈವ ಆವಾಹನೆಯಾಗುವುದನ್ನು ದರ್ಶನ ಎನ್ನುವರು.

೬ ಬಸರೂರಿನ ಸುತ್ತಮುತ್ತಲ ಪ್ರದೇಶದಲ್ಲಿ ದೈವಸ್ಥಾನವನ್ನು ಬಿಟ್ಟು ಬೇರೆಕಡೆ ದರ್ಶನ ಮಾಡುವಾಗ ಮಣೆಯ ಮೇಲೆ ದೈವದ ಕಾಲುಕಡಿ, ಪಟ್ಟೆ ಇಟ್ಟು ದೈವವನ್ನು ತಾತ್ಕಾಲಿವಾಗಿ ಸ್ಥಾಪಿಸುವುದನ್ನು ಗದ್ದುಗೆ ಎಂದು ಕರೆಯುವುದು.

೭ ಗೋಂದೋಳು ಪೂಜೆ ಮರಾಠ ಪ್ರಾಂತದಿಂದ ಬಂದವರ ಶಕ್ತಿ ಆರಾಧನೆಯಾಗಿದೆ. ಮೂಲತಃ ಶೈವ ತಾಂತ್ರಿಕಾಚರಣೆಯೊಂದಿಗೆ ನಿಕಟ ಸಂಬಂಧ ಹೊಂದಿದೆ. ಇದು ಒಂದು ಬಗೆಯ ಮಾರಿ ದೇವತೆಯೆಂಬುದು ಜನಪದರ ಭಾವನೆ.

೮. ಬಿಸಿ ಪಾತ್ರೆ ಇಡಲು ಭತ್ತದ ಹುಲ್ಲಿನಿಂದ ಮಾಡಿದ ವೃತ್ತಾಕಾರದ ವಸ್ತು.

೯. ಬಸರೂರಿನಿಂದ ಬಳ್ಕೂರು ಕಡೆಗೆ ಹೋಗುವ ಮಾರ್ಗದಲ್ಲಿ ಉಳ್ಳೂರು ಕಾರ್ತಿಕೇಯ ದೇವಸ್ಥಾನಕ್ಕೆ ತಿರುಗುವ ರಸ್ತೆಯ ಸಮೀಪದಲ್ಲಿ ಪಾನಕದ ಕಟ್ಟೆ ಇದೆ.

೧೦. ಇವರು ಕ್ರಿಶ ೧೫೬೦ ರ ನಂತರ ಪೋರ್ಚುಗೀಸರು ಗೋವೆಯನ್ನು ಬಲವಂತವಾಗಿ ಸೆಳೆದುಕೊಂಡ ನಂತರ ತುಳುನಾಡಿಗೆ ಬಂದರು. ಇವರು ಮೂಲತಃ ಗೌಡ ದೇಶದವರು. ಗೌಡ ಎಂದರೇ ಈಗೀನ ಬಂಗಾಳ ಮತ್ತು ಅದರ ಸುತ್ತಮುತ್ತಲಿನ ಪ್ರದೇಶ. ಕೊಂಕಣಕ್ಕೆ ಬಂದು ನೆಲೆಸಿದ್ದರಿಂದ ಗೌಡ ಸಾರಸ್ವತ ಬ್ರಾಹ್ಮಣರು ಎಂದಾಯಿತು. ಬಸರೂರಿನಲ್ಲಿ ಇವರ ಎಲ್ಲಾ ಆಚರಣೆಗಳು ಪ್ರತ್ಯೇಕವಾಗಿದೆ.

೧೧. ಕರಡ ಎಂದರೆ ಕುಂದಾಪುರ ಕನ್ನಡದಲ್ಲಿ ಕೊಳವೆಯಾಕಾರದ ಹುಲ್ಲು ಎಂದರ್ಥ.

೧೨. ಬಸರೂರಿನಲ್ಲಿ ಋತುಮತಿಯಾದ ದೇವದಾಸಿ ಹುಡುಗಿಗೆ ಆಕೆಯನ್ನು ಬಯಸಿದ ಶ್ರೀಮಂತರು ಹಣಕೊಟ್ಟು ಶೋಭಾನ ಪ್ರಸ್ತ ಮಾಡಿಸುತ್ತಿದ್ದರು. ಶೋಭಾನ ಪ್ರಸ್ತದ ದಿನ ಪುರೋಹಿತರಿಂದ ಹೋಮ ನಡೆಯುತ್ತದೆ. ಹೋಮದ ಜೊತೆಯಲ್ಲಿ ತೆಂಗಿನಕಾಯಿ ಇಟ್ಟು ಪೂಜಿಸುತ್ತಿದ್ದರು. ಬಳಿಕ ತೆಂಗಿನಕಾಯಿಯೊಂದಿಗೆ ಮದುಮಗಳು ಊರಿನ ದೇವಸ್ಥಾನಕ್ಕೆ ಮೆರವಣಿಗೆ ಹೋಗುತ್ತಾಳೆ. ಅಲ್ಲಿ ಪೂಜೆ ಮುಗಿದ ಬಳಿಕ ತೆಂಗಿನ ಕಾಯಿಯ ಜೊತೆಯಲ್ಲಿ ಆಕೆಗೆ ಆರತಿ, ಊಟ, ಶಯನ.

೧೩. ಗಳು ಎಂದರೆ ಬಿದಿರು ಎಂದರ್ಥ.

೧೪. ದೈವದ ನುಡಿಯನ್ನು ಹುಟ್ಗತಿಯೆನ್ನುವುದು.

೧೫. ಸೌರಮಾನದ ನಾಲ್ಕನೆಯ ತಿಂಗಳು ಕರ್ಕಾಟಕ ಮಾಸ. ಈ ಮಾಸವನ್ನು ಕುಂದಾಪ್ರ ಕನ್ನಡದಲ್ಲಿ ಆಷಾಡಿ ತಿಂಗಳು ಎನ್ನುವರು.

೧೬. ಬಸರೂರಿನ ಗರಡಿಯಲ್ಲಿರುವ ಸಪ್ಪೆ ಮೋರೆ ಹಾಕಿಕೊಂಡಿರುವ ಶಿಲ್ಪಗಳೇ ಚೀನಿಯರ ಭೂತಗಳು. ಸಪ್ಪೆ ಮೋರೆ ಅವಲಕ್ಷಣದ ಸಂಕೇತವೆಂದು ಭಾವಿಸಿ ಈಗ ಶಿಲ್ಪವನ್ನು ಬದಲಾಯಿಸಿದ್ದಾರೆ.

೧೭. ಸಂತೋಷ.

೧೮. ಕೋಟೇಶ್ವರ ಮತ್ತು ಬಸರೂರಿಗೆ ಸಂಬಂಧವಿದೆ. ಕೋಟೇಶ್ವರ ಹಬ್ಬದ ಹಿಂದಿನ ದಿನ ಬಸರೂರ ಮಹಾಲಿಂಗೇಶ್ವರನು ವನಭೋಜನಕ್ಕೆ ಹೋಗುತ್ತಾನೆ.

೧೯. ಪೋರ್ಚುಗೀಸರು ಗಂಗುಳಿ ಎಂಬ ದ್ವೀಪವನ್ನು ನಿರ್ಮಿಸಿದ್ದರು ಎಂಬ ಉಲ್ಲೇಖವಿದೆ.

೨೦. ಭೂತಾಳ ಪಾಂಡ್ಯನು ಹನ್ನೆರಡು ಮಂದಿ ಜೈನ ಸ್ತ್ರೀಯರನ್ನು ಮದುವೆಯಾಗಿದ್ದನು. ಆ ಕಾರಣದಿಂದ ಬಾರಕನೂರು ಎಂದಾಯಿತು. ಮುಂದೆ ಬಾರಕೂರು ಎಂದು ಕರೆಯಲ್ಪಟ್ಟಿತು. (ಗುರುರಾಜ ಭಟ್ ಪಾದೂರು;೧೯೭೫;ಪುಟ:೧೭೧)

೨೧. ತಾಯತ.

೨೨. ಸೊಂಟದ ಬಟ್ಟೆ.

೨೩. ಹಟ್ಟಿಕುದ್ರು ಬಸರೂರಿಗೆ ಸೇರಿದ ಒಂದು ಗ್ರಾಮವಾಗಿದೆ. ಕುದ್ರು ಎಂದರೆ ಸುತ್ತಲೂ ನೀರಿನಿಂದ ಆವರಿಸಿದ ಎಂಬರ್ಥವಿದೆ. ಹಟ್ಟಿ ಎಂದರೆ ದನವನ್ನು ಕಟ್ಟುವ ಜಾಗ. ಕೃಷಿಕರು ಬೇಸಾಯದ ಕೆಲಸ ಮುಗಿದ ಕೂಡಲೆ ಎತ್ತು ಹೋರಿಗಳನ್ನು ಮೇಯಲು ಕಟ್ಟುವ ಗೋಮಾಳ ಇದು. ಈ ಕಾರಣದಿಂದ ಹಟ್ಟಿಕುದ್ರು ಎಂದಾಗಿದೆ. (ಹೆಚ್ಚಿನ ವಿವರಗಳಿಗೆ ಸ್ಥಳನಾಮ ವಿವೇಚನೆ ಹಟ್ಟಿಕುದ್ರು ನೋಡಿ)

೨೪. ಬಸರೂರ ದೇವದಾಸಿಯರು ಯಾವುದೇ ಒಂದು ಜಾತಿ ಅಥವಾ ಜನಸಮುದಾಯವಲ್ಲ. ದಕ್ಷಿಣ ಕನ್ನಡ, ಉಡುಪಿ ಜಿಲ್ಲೆಯಲ್ಲಿ ಮಾದರು, ದೇವಾಡಿಗರು, ಬೆಸ್ತರು ದೇವದಾಸಿಯರಾದ ಉಲ್ಲೇಖವಿದೆ ಮತ್ತು ಬಸರೂರಿನ ಕೀರ್ತಿಯನ್ನು ಮಾಗಣೆ ದಾಟಿಸಿದರು. ದೌಲತ್‌ಜಾದದ ಮೂಲಕ ಸ್ತ್ರೀ ನಾಟಕ ಮಂಡಳಿ ಮೂಲಕ ಸಂಸ್ಕೃತಿ ಪ್ರಸರಣ ಮಾಡಿದವರು.

೨೫. ಸಪ್ತ ಕ್ಷೇತ್ರಗಳಲ್ಲಿ ಒಂದಾದ ಶಂಕರನಾರಾಯಣದಲ್ಲಿ ಹೊಳೆಯ ನೀರು ಉಕ್ಕಿಉಕ್ಕಿ ಬರುತ್ತದೆ. ಎತ್ತರದಿಂದ ನೀರು ಬರುವುದನ್ನು ನೋಡಲು ಮನೋಹರವಾಗಿರುತ್ತದೆ.

೨೬. ತೇರಿನ ಗಾಲಿ ಮತ್ತು ಗಡ್ಡಿಯ ಭಾಗದ ಮೇಲೆ ಮಂಟಪ ಕಟ್ಟಲು ಅಡ್ಡ ಪಟ್ಟಿಗಳನ್ನು ಕಟ್ಟುತ್ತಾರೆ. ಅದರ ಮೇಲೆ ಗೂಡನ್ನು ಕಟ್ಟಿದ ನಂತರ ಸೆಟ್ಟಿಕಾರರು ಬಣ್ಣಬಣ್ಣದ ಪತಾಕೆಯನ್ನು ತೇರಿನ ಗೂಡಿಗೆ ಜೋಡಿಸುತ್ತಾರೆ. ಇದನ್ನು ಪತಾಕಿ ಹಾಕುವುದು ಎನ್ನುತ್ತಾರೆ.

೨೭. ಕ್ರಿ.ಶ. ೧೪೪೪ಕ್ಕೆ ಸೇರುವ ಶಾಸನವೊಂದರಲ್ಲಿ ಚಿನ್ನದ ಕಳಸವಿದ್ದ ಬಗ್ಗೆ ಉಲ್ಲೇಖವಿದೆ.

೨೮. ಕೋಟ ಪ್ರದೇಶದ ಶ್ರೀಮಂತರ ಮದುವೆಗಳಲ್ಲಿ ಬಸರೂರಿನ ಗಣಿಕೆಯರ ನರ್ತನದ ಕಾರ್ಯಕ್ರಮ ವಿಶೇಷ ಆಕರ್ಷಣೆಯಾಗಿರುತ್ತದೆ. ಗಣಿಕೆಯರೊಂದಿಗಿನ ಸಂಪರ್ಕ ಪ್ರತಿಷ್ಠೆಯ ವಿಷಯವಾಗಿದ್ದ ಕಾಲದಲ್ಲಿ ಶ್ರೀಮಂತರ ಮದುವೆಯ ಭಾಗವಾಗಿ ಗಣಿಕೆಯರ ನರ್ತನ ಕಾರ್ಯಕ್ರಮವಿರುತ್ತಿತ್ತು.

ಮದುವೆಗೆ ಬಂದ ಗಣಿಕೆಯರ ಮೇಳ ಹಾಡು ಕುಣಿತಗಳಿಂದ ಶ್ರೀಮಂತರನ್ನು ರಂಜಿಸಿ ದೌಲತ್ಜಾದಾ ಎಂದು ವಂದಿಸಿ, ಗಂಧ ಪನ್ನೀರುಗಳಿಂದ ಅವರನ್ನು ಸತ್ಕರಿಸಿ ಶ್ರೀಮಂತರಿಂದ ಹಣ ಪಡೆಯುತ್ತಿದ್ದರು. (ಪಾ.ನ.ಮಯ್ಯ:೯೯೫;ಪುಟ:೧೦೬) ದೇವಸ್ಥಾನದಲ್ಲಿ ನರ್ತನ ಸೇವೆ ಮಾಡುವವರನ್ನು ಪಾತ್ರದವರು ಎಂದು ಕರೆಯುತ್ತಾರೆ. ಅನಂತರದಲ್ಲಿ ಮೇಳದವರು ಎಂದಾಯಿತು.

೨೯. ಬಸರೂರಿನ ಶಾರದ ಕಾಲೇಜಿನಲ್ಲಿ ಎದುರಿನಲ್ಲಿ ಸತಿಶಿಲ್ಪವಿದೆ. ಬಸರೂರು ಮತ್ತು ಬಾರಕೂರು ರಾಜಮನೆತನದೊಳಗೆ ನೆಂಟಸ್ತಿಕೆ ಸಂಬಂಧ ಇದ್ದಿತ್ತು. ಈ ಎರಡು ರಾಜ ಕುಟುಂಬಗಳ ಮನಸ್ತಾಪದಿಂದ ಬಾರಕೂರು ಮತ್ತು ಬಸರೂರು ಸೇನೆಗಳು ಕುಂದಾಪುರದಲ್ಲಿ ಎದುರಾದವು. ಈ ಕಾಳಗದಲ್ಲಿ ಬಸರೂರಿನ ಸೇನಾನಿ ಪ್ರಾಣವನ್ನು ಕಳೆದುಕೊಂಡನು. ವಡೇರಹೋಬಳಿಯ ಒಡೆಯರ ಮುತ್ಸದ್ದಿತನದಿಂದ ಕಾಳಗವು ಕೊನೆಗೊಂಡಿತು. ಆದರೆ ಸಂಜೆಯ ವೇಳೆಗೆ ಸೇನಾನಿಯ ಶವ ಚಿತೆಯೇರಿತು. ಅಂದು ಸೇನಾನಿಯ ಸಂತಾನರಹಿತ ಮಡದಿ ತನ್ನ ಪತಿಯ ಚಿತೆಯನ್ನೇರಿ ಆತ್ಮಾರ್ಪಣೆ ಮಾಡಿಕೊಂಡಳು. ಈ ಸ್ಥಳವೇ ಕುಂದಾಪುರದ ಮಾಸ್ತಿಕಟ್ಟೆ, ಅವಳ ನೆನಪಿನ ಶಿಲ್ಪವೆ ಈ ಮಾಸ್ತಿಕಲ್ಲು ಆಗಿರಬಹುದು.

೩೦. ಜಟ್ಟಿಗನನ್ನು ಸಾಮಾನ್ಯವಾಗಿ ಕೃಷಿ ಸಂಬಂಧಿ ದೈವವಾಗಿ ಪೂಜಿಸುತ್ತಾರೆ. ಜಾನುವಾರು ಮತ್ತು ಮಕ್ಕಳಿಗೆ ತೊಂದರೆ ಆಗಬಾರದೆಂದು ಕೋಳಿ ಬಲಿ ಕೊಡುತ್ತಾರೆ. ಕಂಬಳದ ಸಂದರ್ಭದಲ್ಲಿ ಆತನಿಗೆ ವಿಶೇಷ ಪೂಜೆ ಸಲ್ಲುತ್ತದೆ. ಆದರೆ ಈಗ ಜಟ್ಟಿಗರಾಯನಾಗಿ ಸಂಸ್ಕೃತಿಕರಣ ಹೊಂದಿದೆ.

೩೧. ಕಟಾವು ಮಾಡಿ ರಾಶಿ ಹಾಕಿಟ್ಟ ಭತ್ತದ ರಾಶಿಯನ್ನು ಹೊಲಿ ರಾಶಿ ಎನ್ನುವರು.

೩೨. ಬೀಜದ ಭತ್ತವನ್ನು ನೆಲ್‌ರಾಶಿ ಎನ್ನುವರು.

೩೩ ಅಕ್ಕಿಯನ್ನು ಗೆರಸಿಯಲ್ಲಿ ಹಾಕಿ ಗೇರಿದಾಗ ಉಳಿಯುವ ತಲೆಅಕ್ಕಿಯನ್ನು ಕಡಿಅಕ್ಕಿ ಎನ್ನುವುದು. ಇದು ತುಂಡಾದ ಅಕ್ಕಿ.

೩೪. ಒಂದು ಕಾಲಕ್ಕೆ ತಂತ್ರಿಗಳಲ್ಲದೆ ಅಷ್ಟವದಾನಿಗಳು ಮೆರವಣಿಗೆಯಲ್ಲಿ ಜೊತೆಗಿರುತ್ತಿದ್ದರು. ಕಟ್ಟೆ ಪೂಜೆಗಳಲ್ಲಿ ಅಷ್ಟವದಾನ ನಡೆಯುತ್ತಿತ್ತು.

೩೫. ಗಿರಿಜೆಮಣೆ ಎಂದರೆ ಚೆನ್ನೆಮಣೆ ಎಂದರ್ಥ. ಸಾಮಾನ್ಯವಾಗಿ ಚೆನ್ನೆಮಣೆ ವೃತ್ತಾಕಾರವಾಗಿ ಕೆತ್ತಿದ ಏಳು-ಏಳು ಮನೆಗಳನ್ನು ಎರಡು ಬದಿಯಲ್ಲಿ ಹೊಂದಿರುತ್ತದೆ. ಇಲ್ಲಿ ಗಿರಿ ಎಂದರೆ ಏಳು ಎನ್ನುವ ಅರ್ಥವನ್ನು ಹೊಂದಿದೆ. ಈ ಆಟಕ್ಕೆ ಚೆನ್ನೆಮರದ (ಹಂಗಾರ) ಬೀಜವನ್ನು ಉಪಯೋಗಿಸುವುದರಿಂದ ಚೆನ್ನೆಮಣೆ ಆಗಿದೆ. ಈ ಪಾಡ್ದನದಲ್ಲಿ ಬಳಸಿದ ಗಿರಿಜೆಮಣೆ ಅದು ಚೆನ್ನೆ ಮಣೆಯೆಂದು ಕರೆಯುವ ಒಳಾಂಗಣ ಕ್ರೀಡೆಯೆಂದು ಆ ಆಟವನ್ನು ಬಸರೂರಿನ ಸುತ್ತಮುತ್ತಲ ಮಾಗಣೆಗಳಲ್ಲಿ ಶ್ರಾವಣ ಮಾಸದಲ್ಲಿ ಆಡುತ್ತಾರೆ. ಈ ಆಟವನ್ನು ಆಡುವಾಗ ಕೆಲವು ವಿಧಿ-ನಿಷೇಧಗಳಿವೆ. ಚೆನ್ನೆ ಮಣೆಯನ್ನು ಸೋಣೆ ತಿಂಗಳಲ್ಲಿ ಮಾತ್ರ ಆಡಬೇಕು. ಬೇರಾವ ತಿಂಗಳು ಆಡಬಾರದು. ಚೆನ್ನೆಮಣೆ ಆಟದಲ್ಲಿ ಸುಳ್ಳುಹೇಳಬಾರದು ಮತ್ತು ಜೂಜು ಕಟ್ಟಬಾರದು. ಅಕ್ಕ-ತಂಗಿಯರು, ಗಂಡ-ಹೆಂಡಿರು ಈ ಆಟವನ್ನು ಆಡಬಾರದೆಂದು ನಿಷೇಧವಿದೆ. ಚೆನ್ನೆಮಣೆ ಜನಪದರ ಬದುಕಿಗೆ ನೀತಿಯ ಮಾರ್ಗವನ್ನು ನಿರ್ದೇಶಿಸುವ ಆಟವಾಗಿದೆ.

೩೬. ಡಕ್ಕೆ ಬಲಿಯನ್ನೇ ಮಂಡಲ ಭೋಗ ಎಂದು ಕರೆಯುವುದು. ಮಂಡಲ ಎಂದರೆ ಸುತ್ತವರಿದು ಕುಣಿಯುವುದು ಎಂಬರ್ಥವನ್ನು ನೀಡುತ್ತದೆ.

೩೭. ಅಕ್ಕ ಅಬ್ಬಗ ತಂಗಿ ದಾರಗ ಚೆನ್ನೆಯಾಟ ಆಡಿದರು. ಒಂದಾಟವಾಯಿತು. ಅಕ್ಕ ಅಬ್ಬಗ ಸೋತಳು. ತಂಗಿ ದಾರಗ ಗೆದ್ದಳು. ಚೆನ್ನೆ ಮಣೆಯ ಬದುವನ್ನು ಅದಲು ಬದಲು ಮಾಡಿ ತಂಗಿ ದಾರಗನ ನಡುನೆತ್ತಿಗೆ ಹೊಡೆಯುವಂತೆ ಸೋತ ಅಬ್ಬಗೆ ಬ್ರಾಹ್ಮಣರು ಹೇಳಿದರು. ಅಕ್ಕ ಅಬ್ಬಗ ಸೋತ ಮೂಲೆಯನ್ನು ಗೇಲಿನ ಮೂಲೆಯಾಗಿ ಮಾಡಿದಳು. ಗೆದ್ದ ಮೂಲೆಯನ್ನು ಸೋಲಿನ ಮೂಲೆಯಾಗಿರಿಸಿದಳು. ಮಣೆ ಎತ್ತಿ ತಂಗಿ ದಾರಗನ ನಡುನೆತ್ತಿಗೆ ಕುಕ್ಕಿದಳು. ದಾರಗ ಕುಳಿತಲ್ಲಿಯೆ ಮುಗ್ಗರಿಸಿದಳು. ತಂಗಿಯ ಸಾವನ್ನು ಕಂಡು ಹೆದರಿದ ಅಬ್ಬಗ ತಂಗಿ ದಾರಗನನ್ನು ಹೆಗಲಮೇಲೆ ಹಾಕಿಕೊಂಡು ಹೋಗಿ ಕೆರೆಗೆ ಎಸೆದಳು. ತಾನು ಆ ಕೆರೆಗೆ ಹಾರಿ ಪ್ರಾಣಬಿಟ್ಟಳು. (ನಾವುಡ ಎ.ವಿ ಸಿರಿ ಪಾಡ್ದನ;೧೯೯೯ಪುಟ:೮೭)

★★★

## ಅಧ್ಯಾಯ ಐದು

# ಪ್ರದರ್ಶನಕಲೆ ಮತ್ತು ಸಂಸ್ಕೃತಿ

೫.೧. ಹೋಳಿ ಕುಣಿತ

೫.೨. ಹೂವಿನ ಕೋಲು

೫,೩. ಚುಣ್ಣನ ಕುಣಿತ

೫.೪. ದೇವದಾಸಿಯರ ಕುಣಿತ

೫.೫. ಹೌಂದ್ರಾಯನ ವಾಲಗ

# ಅಧ್ಯಾಯ ಐದು

# ಪ್ರದರ್ಶನಕಲೆ ಮತ್ತು ಸಂಸ್ಕೃತಿ

ಆಚರಣೆ ಸಂಪ್ರದಾಯಗಳು ಒಂದು ಸಮುದಾಯದ ಸಮ್ಮತಿ ಪಡೆದು ತಲೆ ತಲಾಂತರದಿಂದ ಅನುಸರಿಸಲಾಗುತ್ತಿರುವ ಒಂದು ನಡಾವಳಿಯಾಗಿದೆ. ಮಾನವನ ಜೀವನ ವ್ಯವಸ್ಥಿತವಾಗಿ ರೂಪುಗೊಳ್ಳುವಲ್ಲಿ ಸಂಪ್ರದಾಯಗಳು, ಆಚರಣೆಗಳು ಮಹತ್ವದ ಪಾತ್ರ ವಹಿಸುತ್ತವೆ. ಮಾನವ ತನ್ನ ಅನುಭವಗಳಿಂದ, ನಂಬಿಕೆಗಳಿಂದ ಋತುಮಾನಕ್ಕನುಗುಣವಾದ ನೂರಾರು ಸಂಪ್ರದಾಯಗಳನ್ನು ತನ್ನ ಬದುಕಿನಲ್ಲಿ ಅಳವಡಿಸುತ್ತಾ ಬಂದಿದ್ದಾನೆ. ನಂಬಿಕೆಗಳೇ ಸಂಪ್ರದಾಯಗಳಿಗೆ ಮೂಲ. ನಂಬಿಕೆಗಳ ಗರ್ಭದಲ್ಲಿ ಭ್ರೂಣಾವಸ್ಥೆಯಲ್ಲಿ ಸುಪ್ತಗೊಂಡಿರುವ ಸಂಪ್ರದಾಯಗಳು ಕಾಲಕ್ರಮೇಣ ಅನುಕೂಲ ಸನ್ನಿವೇಶಗಳು ಒದಗಿದ ಕೂಡಲೆ ಮೂರ್ತಿವತ್ತಾಗಿ ಪ್ರಕಟಗೊಳ್ಳುತ್ತವೆ. ಸಾಮಾನ್ಯವಾಗಿ ಎಲ್ಲಾ ಸಮುದಾಯಗಳು ಆಚರಣೆ ಸಂಪ್ರದಾಯಗಳನ್ನು ಹೊಂದಿಕೊಂಡೆ ಬಂದಿವೆ. ಹುಟ್ಟು ಸಾವಿನ ಮಧ್ಯೆ ಬದುಕಿನ ಅನೇಕ ಸಂದರ್ಭಗಳಲ್ಲಿ ವಿಧಿ, ಸಂಪ್ರದಾಯ, ಸಂಸ್ಕಾರಗಳನ್ನು ಚಾಚೂ ತಪ್ಪದೆ ಆಚರಿಸುವ ಪರಂಪರೆ ಎಲ್ಲಾ ಸಮುದಾಯಗಳಲ್ಲೂ ಕಂಡುಬರುತ್ತದೆ. ಈ ಆಚರಣೆ ಸಂಪ್ರದಾಯಗಳಿಲ್ಲದ ಬದುಕನ್ನು ಯಾವ ಸಮುದಾಯವೂ ಊಹಿಸಲಾರದು. ಸಂಪ್ರದಾಯ ಮತ್ತು ಆಚರಣೆಗಳೇ ಪ್ರದರ್ಶನ ಕಲೆಗಳಾಗಿ ಹೊರಹೊಮ್ಮಿದೆ.

ಮಾನವನು ಮೊದಲು ಭಾವನೆಗಳನ್ನು ಆಂಗೀಕ ಚಲನೆಯ ಮೂಲಕ ಪ್ರದರ್ಶಿಸುತ್ತಿದ್ದನು. ಅನಂತರದಲ್ಲಿ ಮಾತು ಹುಟ್ಟಿರಬೇಕು. ಮನುಷ್ಯನ ಹುಟ್ಟು ಮತ್ತು ಸಾವಿನ ನಡುವೆ ಅನೇಕ ಬಗೆಯ ಸಂವೇದನೆಗೆ ಒಳಗಾಗುತ್ತಾನೆ. ಆ ಎಲ್ಲಾ ಸಂವೇದನೆಗಳನ್ನು ಮತ್ತೊಬ್ಬರಿಗೆ ತಿಳಿಸಿ ಹೇಳುವ ಮತ್ತು ಮರುಪ್ರತಿಕ್ರಿಯಿಸುವ ನಿಟ್ಟಿನಲ್ಲಿ ಕುಣಿತ ಹುಟ್ಟಿದೆ. ಮುಂದೆ ದೇವರುಗಳನ್ನು ಆರಾಧಿಸಲು ಒಲಿಸಲು ಕುಣಿತವನ್ನು ಮಾಧ್ಯಮವಾಗಿ ಬಳಸಿದನು. ಒಂದು ಕಾಲಕ್ಕೆ ಧಾರ್ಮಿಕ ಮಹತ್ವವನ್ನು ಪಡೆದ ಆಚರಣೆಗಳು ಈಗ ಸಾಂಸ್ಕೃತಿಕ ಆಚರಣೆಗಳಾಗಿ ಪ್ರದರ್ಶನಗೊಳ್ಳುತ್ತಿದೆ. ಇವುಗಳ ಮೂಲಕ ಜನಪದರ ಜೀವನಾನುಭವಗಳು

ಸಹಜವಾಗಿ ಅಭಿವ್ಯಕ್ತಗೊಳ್ಳಲಾರಂಭಿಸಿತು.

ಬಸರೂರು ಅನೇಕ ಜನಸಮುದಾಯಗಳ ನೆಲೆ. ಇಲ್ಲಿ ವಾಸಿಸುವ ಜನಸಮುದಾಯ ತಮ್ಮದೆ ಆದ ಆಚರಣೆ ಆರಾಧನೆಗಳನ್ನು ನಡೆಸಿಕೊಂಡು ಬಂದಿದ್ದಾರೆ. ಈ ಪ್ರದೇಶದ ಜನಸಮುದಾಯದ ಸಾಂಸ್ಕೃತಿಕ ಜಗತ್ತು ವಿಶಿಷ್ಟವಾದುದು. ಇದನ್ನೇ ಬಸರೂರಿನ ಸಂಸ್ಕೃತಿ ಎಂಬ ನೆಲೆಯಲ್ಲಿ ಅಧ್ಯಯನ ನಡೆಸಿದೆ. ನಾಡಿನ ಆಧುನಿಕ ಸಂಸ್ಕೃತಿಯೆಡೆಗೆ ತೀವ್ರಗತಿಯಲಿ ಸಾಗುತ್ತಿರುವ ಇಲ್ಲಿನ ಜನಸಮುದಾಯದ ಆಚರಣೆಗಳು, ಆರಾಧನ ಕ್ರಮಗಳು, ಪ್ರದರ್ಶನಾತ್ಮಕ ಆಚರಣೆಗಳು ಬದಲಾವಣೆಯ ಸಂಕ್ರಮಣ ಕಾಲದಲ್ಲಿ ವಿಶ್ಲೇಷಿಸಲು ಪ್ರಯತ್ನಿಸಿದೆ.

ಈ ಅಧ್ಯಾಯದಲ್ಲಿ ಬಸರೂರಿನ ಹೂವಿನಕೋಲು, ಕೊರಗರ ಚುಣ್ಣನ ಕುಣಿತ, ಚಪ್ಪೆಕಾರ ಬಂಡಾರಿ ನಾಯಕರ ಹೋಳಿಕುಣಿತ, ದೇವದಾಸಿಯರಕುಣಿತ, ಬಿಲ್ಲವರ ಹೌಂದ್ರಾಯನ ವಾಲ್ಗುವಾದಂತಹ ಪ್ರದರ್ಶನಕಲಾ ಪ್ರಕಾರಗಳನ್ನು ವಿವೇಚಿಸಲಾಗಿದೆ. ಇವೆಲ್ಲಾ ಒಂದೊಂದು ಜನಸಮುದಾಯದ ಆರಾಧನೆ, ಆಚರಣೆಯ ಕ್ರಮಗಳಾದರೂ ಪ್ರಾದೇಶಿಕ ಸಂಸ್ಕೃತಿಯ ಅಧ್ಯಯನದ ಸಂದರ್ಭದಲ್ಲಿ ಒಂದು ಪ್ರದೇಶದ ಜನಸಮುದಾಯದ ಜೀವನ ಕ್ರಮಗಳ ಮೊತ್ತವೇ ಸಂಸ್ಕೃತಿ ಎನಿಸಿಕೊಳ್ಳುತ್ತದೆ.

### ೫.೧. ಹೋಳಿಕುಣಿತ

ಬಸರೂರಿನ ಸುತ್ತಮುತ್ತಲಿನ ಮಾಗಣೆಯಲ್ಲಿ ಮರಾಠಿ ನಾಯ್ಕರ ಪ್ರಮುಖವಾದ ಹಬ್ಬಗಳಲ್ಲಿ ಹೋಳಿಯೂ ಒಂದು. ಇಲ್ಲಿನ ಮರಾಠಿ ನಾಯ್ಕರು ಮತ್ತು ಕೊಂಕಣಖಾರ್ವಿಗಳು ಸಂಭ್ರಮ ಸಡಗರದಿಂದ ಆಚರಿಸುತ್ತಾರೆ. (ಚಿತ್ರ ೪)

ಬಸರೂರಿನ ನಾವಡರ ವೂಳಲು, ಪಾನಕದ ಕಟ್ಟೆ, ಖಾರಿಕುದ್ರುಗಳಲ್ಲಿ ವಾಸವಾಗಿರುವ ಚಪ್ಪಟೆಕಾರ ನಾಯಕ್ ಜನಸಮುದಾಯವು ಮರಾಠಿ ನಾಯಕರ ಒಳಪ್ರಬೇಧವಾಗಿದ್ದು ಇವರನ್ನು ಚಪ್ಪೆಕಾರ್‌ಬಂಡಾರಿ ನಾಯಕರು ಎಂದು ಕರೆಯುತ್ತಾರೆ. ಐದು, ಹತ್ತು ದಿನಗಳ ಪರ್ಯಂತ ತಿರುಗಾಟ ನಡೆಸಿ ಹೋಳಿಹುಣ್ಣಿಮೆಯನ್ನು ವಿಶೇಷವಾಗಿ ಆಚರಿಸುತ್ತಾರೆ. ಹೋಳಿಹುಣ್ಣಿಮೆಗೆ ಒಂದು ವಾರವಿರುವಾಗ ಮಾಗಣೆಯ ಜಾತಿ ಬಾಂಧವರೆಲ್ಲ ಗುರ್ಕಾರರ ಮನೆಯಲ್ಲಿ ಒಟ್ಟು ಸೇರಿಕೊಂಡು ಹೋಳಿಕುಣಿತಕ್ಕೆ ದಿನ ನಿರ್ಧರಿಸುತ್ತಾರೆ. ಗುಮ್ಮಟೆ ಪೂಜೆ ಮಾಡುವ ಗುರ್ಕಾರನ ಮನೆಯ ಪಡಸಾಲೆಯಲ್ಲಿರುವ ಅಮ್ನೋರ ಗದ್ದುಗೆ ಮತ್ತು ಪಂಜುರ್ಲಿ ಗದ್ದುಗೆಗೆ ಪೂಜೆಯಾದ ಬಳಿಕ ತುಳಸಿಕಟ್ಟೆಯಲ್ಲಿ ಗದ್ದುಗೆ ಮಾಡಿ ದೀಪ ಹಚ್ಚಿ ಸಿಪ್ಪೆಕಾಯಿ ಮತ್ತು ಅಕ್ಕಿ ಇಟ್ಟು, ಗುಮ್ಮಟೆಗೆ ಗುರ್ಕಾರನು ಪೂಜೆ ಮಾಡಿದ ನಂತರ ಹೋಳಿ ಕುಣಿತಕ್ಕೆ ಹೊರಡುತ್ತಾರೆ. ಹೋಳಿ ಕುಣಿತಕ್ಕೆ ಹೋಗುವವರು ಕಾಯಿ ಮುಟ್ಟಿ ಪ್ರಮಾಣ ಮಾಡುತ್ತಾರೆ. ಅಂದು ಅಮ್ನೋರ ದರ್ಶನ ಮಾಡಿಸಿ ಹೋಳಿಹುಣ್ಣಿಮೆಯ

ಯಶಸ್ಸಿಗೆ ಪ್ರಾರ್ಥಿಸುತ್ತಾರೆ. ಅನಂತರದಲ್ಲಿ ಕುಣಿತ ಆರಂಭವಾಗುತ್ತದೆ. ಗುಮ್ಮಟೆ ಮತ್ತು ಕೋಲಾಟಕ್ಕೆ ಸಂಬಂಧಿಸಿದ ಎಲ್ಲಾ ಪದ್ಯಗಳನ್ನು ಆ ದಿನ ಹಾಡಬೇಕು. ಈ ಕುಣಿತದಲ್ಲಿ ಗುರಿಕಾರರು ನೇತೃತ್ವವಹಿಸುತ್ತಾರೆ. ಕೂಡುಕಟ್ಟಿನವರೆಲ್ಲರೂ ಭಾಗವಹಿಸುತ್ತಾರೆ. ಗುಮ್ಮಟೆಯ ಪೆಟ್ಟಿಗೆ ಹಾಡಿನ ಲಯಕ್ಕೆ, ತಾಳದ ಗತಿಗೆ ತಕ್ಕಂತೆ ಕುಣಿಯುತ್ತಾರೆ. ಗುಮ್ಮಟೆ ತಂಡದಲ್ಲಿ ಕನಿಷ್ಠ ಐದು ಮಂದಿ ಇರುತ್ತಿದ್ದರು. ಮೂರು ಜನ ಗುಮ್ಮಟೆಯನ್ನು ಇಬ್ಬರು ತಾಳವನ್ನು ಹಿಡಿದಿರುತ್ತಾರೆ.

ಹೋಳಿಕುಣಿತವೆಂದರೆ ಗುಮ್ಮಟೆ ಮತ್ತು ಬಣ್ಣದ ಕೋಲಿನೊಂದಿಗೆ ಕುಣಿಯುವುದಾಗಿದೆ. ಹೋಳಿ ಹಬ್ಬದಲ್ಲಿ ಗುಮ್ಮಟೆಯಕುಣಿತ ಪ್ರಧಾನವಾಗಿದ್ದು ಕೋಲಾಟ ಮನರಂಜನೆಗೆ ಮಾತ್ರವಾಗಿರುತ್ತದೆ. ಗುಮ್ಮಟೆ ಮತ್ತು ಬಣ್ಣದ ಕೋಲಿನೊಂದಿಗೆ ಅಮ್ಮೋರನ್ನು ಹಾಡಿ ಹೊಗಳುತ್ತ ತಮ್ಮ ಕುಣಿತವನ್ನು ಆರಂಭಿಸುತ್ತಾರೆ. ಗುಮ್ಮಟೆ ಮೇಳದವರು ಬಂದಾಗ ಪ್ರತಿಮನೆಯವರು ಜೋಡು ತೆಂಗಿನಕಾಯಿ ಒಂದು ಸೇರು ಅಕ್ಕಿಯನ್ನು ವೀಳ್ಯದೊಂದಿಗೆ ಹೆಡಿಗೆಯಲ್ಲಿ ನೀಡುತ್ತಾರೆ. ಬಸರೂರಿನ ಹೋಳಿ ಆಚರಣೆ ಒಂದೇ ಕೂಡುಕಟ್ಟಿನ ನಡುವೆ ಆಚರಣೆಯಾಗುತ್ತದೆ. ಐದು ಅಥವಾ ಹತ್ತು ದಿನಗಳ ತಿರುಗಾಟ ಮುಗಿದು ಫಾಲ್ಗುಣ ಮಾಸದ ಹುಣ್ಣಿಮೆಯ ದಿನ ಹೋಳಿಕುಣಿತದ ಅಂತಿಮ ದಿನ. ಅಂದು ಗುರಿಕಾರನ ಚಾವಡಿಯಲ್ಲಿ ಕೂಡುಕಟ್ಟಿಗೆ ಸಂಬಂಧಿಸಿದವರೆಲ್ಲರೂ ಸೇರುತ್ತಾರೆ. ಐದು ಅಥವಾ ಹತ್ತು ದಿನಗಳಲ್ಲಿ ಊರೂರು ಸುತ್ತುತ್ತಾ ಕುಣಿಯತ್ತಾ ದೇವರ ಸೇವೆಯಲ್ಲಿ ನಿರತರಾಗಿದ್ದ ಕುಣಿತದವರು ಅಂದು ರಾತ್ರಿ ಗುರಿಕಾರನ ಮನೆಯಲ್ಲಿ ಸೇರುತ್ತಾರೆ. ತಮ್ಮ ವೇಷಭೂಷಣವನ್ನು ತೆಗೆದು ತಮ್ಮ ತಮ್ಮ ಮನೆಯಲ್ಲಿ ಮಧ್ಯಾಹ್ನದ ಊಟ ಮುಗಿಸಿ ಮತ್ತೆ ವೇಷಭೂಷಣ ಧರಿಸುತ್ತಾರೆ. ಗುರ್ಕಾರನ ಮನೆಯ ಚಪ್ಪರದಲ್ಲಿ ಹಾಡು ಕುಣಿತ ಗುಮ್ಮಟೆಗಳು ಪ್ರತಿಧ್ವನಿಸುತ್ತವೆ. ತುಳಸಿಯ ಸನ್ನಿಧಿಯಲ್ಲಿ ಭಜನೆ, ಕುಣಿತಗಳೊಂದಿಗೆ ತಿರುಗಾಟದ ಮೊದಲ ದಿನದಂತೆ ಪಾತ್ರಿಯಲ್ಲಿ ಅಮ್ಮೋರು ಆವಾಹಿತಳಾಗಿ ಭಕ್ತರಿಂದ ಕಾಣಿಕೆ ಪಡೆದು ಅಭಯ ನೀಡುತ್ತಾಳೆ. ದರ್ಶನವಾದ ನಂತರ ಪುನಃ ಗುಂಮ್ಟೆಗಳನ್ನು ಬಾರಿಸಿ ಹಾಡಿನೊಂದಿಗೆ ಕುಣಿತ ಆರಂಭವಾಗುತ್ತದೆ. ಸಂಪ್ರದಾಯದ ಪ್ರಕಾರ ಕೋಲಾಟ, ಗುಂಮ್ಟೆಗಳಿಗೆ ಸಂಬಂಧಿಸಿದ ಹಾಡುಗಳನ್ನೆಲ್ಲ ಅಂದು ಹಾಡಿ ಕುಣಿಯಬೇಕು. ಆ ದಿನವೇ ಹೋಳಿ ಸುಡುವ ಕಾರ್ಯಕ್ರಮವಿರುತ್ತದೆ. ಅಮ್ಮೋರ ದರ್ಶನವಾದ ಕೂಡಲೇ ಕೊನೆ ಬಂದ ಬಾಳೆ ಗಿಡವನ್ನು ಐದು ಜನ ಹೊತ್ತು ಕೊಂಡು ಹೋಗುತ್ತಾರೆ. ಅವರ ಹಿಂದೆ ಅಮ್ಮೋರ ಪಾತ್ರಿ ಮತ್ತು ಹೋಳಿಕುಣಿಕೆಯವರು ಗುಮ್ಮಟೆಯನ್ನು ಬಾರಿಸುತ್ತ, ಹಾಡುತ್ತ ಊರಿನ ಮಧ್ಯಬಾಗದಲ್ಲಿ ಸೇರುತ್ತಾರೆ. ಅಲ್ಲಿ ಕೂಡಿಟ್ಟ ಕಟ್ಟಿಗೆ ರಾಶಿಯ ಮಧ್ಯದಲ್ಲಿ ಬಾಳೆಗಿಡವನ್ನು ನಿಲ್ಲಿಸಿ ಬೆಂಕಿ ಹಚ್ಚುತ್ತಾರೆ. ಹೋಳಿ ಸುಟ್ಟ ನಂತರ ಹೊಳೆಯಲ್ಲಿ ಸ್ನಾನ ಮುಗಿಸಿ ವಾಪಾಸ್ಸು ಬಂದು ಗುರಿಕಾರನ ಮನೆಯಲ್ಲಿ ಸೇರಿ ಗುಮ್ಮಟೆ, ಕೋಲು ಮುಂತಾದವುಗಳನ್ನು

ತೆಗೆದಿರಿಸುತ್ತಾರೆ. ಹೋಳಿಸುಟ್ಟ ಮೇಲೆ ಹಬ್ಬ ಮುಕ್ತಾಯವಾಗುತ್ತದೆ.

ಮರುದಿನ ಬೆಳಿಗ್ಗೆಯಿಂದ ಅಮ್ನೋರ ದರ್ಶನ ಹರಕೆ ನಡೆಯುತ್ತದೆ. ಆ ದಿನ ಗದ್ದುಗೆಯಲ್ಲಿದ್ದ ಕಾಯಿಯನ್ನು ಒಡೆಯಲಾಗುತ್ತದೆ. ಆದರೇ ಮರುದಿನ ಗುಮ್ಮಟೆ ಬಾರಿಸಬಹುದು ಪದ್ಯ ಹಾಡುವ ಹಾಗಿಲ್ಲ. ಅಮ್ನೋರ ಗದ್ದುಗೆಗೆ ಪೂಜೆ ಸಲ್ಲಿಸಿದ ನಂತರ ಕಟ್ಟುಕಟ್ಟಲೆ[೧] ಸೇವೆ ನಡೆಯುತ್ತದೆ. ಮುಹೂರ್ತ ಸಮೀಪಿಸುತ್ತಿದ್ದಂತೆ ಗುಂಮ್ಟೆಯ ನಾದ ದೇವರ ನಾಮಗಳೊಂದಿಗೆ ಗುರಿಕಾರರು ಸೇರಿದ ಸಮಸ್ತರ ಒಪ್ಪಿಗೆ ಪಡೆದು ತುಳಸಿಯ ಸನ್ನಿಧಿಯಲ್ಲಿ ಹೋಳಿಕುಣಿತವನ್ನು ನಿಲ್ಲಿಸುತ್ತಾರೆ. ಗುಂಮ್ಟೆ, ಕೋಲು ಮತ್ತು ಧಿರಿಸುಗಳಿಗೆ ಪೂಜೆಮಾಡಿ ಜೋಪಾನವಾಗಿ ತೆಗೆದಿರಿಸಲಾಗುತ್ತದೆ. ಸರ್ವರಿಗೂ ಭೋಜನಾತಿಥ್ಯ ನಡೆದು ಹೋಳಿಹಬ್ಬದ ಕುಣಿತ ಕೊನೆಗೊಳ್ಳುತ್ತದೆ.

ಬಸರೂರಿನ ಚಪ್ಟೆಕಾರ್‌ಬಂಡಾರಿ ನಾಯ್ಕರ್ ಗುಮ್ಮಟೆ ಕುಣಿತದಲ್ಲಿ ಹಾಡು ಮತ್ತು ಕುಣಿತ ಪ್ರಧಾನವಾಗಿರುತ್ತದೆ. ಗುಮ್ಮಟೆಯನ್ನು ಆವೆ ಮಣ್ಣಿನಿಂದ ತಯಾರಿಸುತ್ತಾರೆ. ಮೇಲ್ಭಾಗಕ್ಕೆ ಉಡದಚರ್ಮವನ್ನು ಹೊದಿಸಲಾಗುತ್ತದೆ. ಈ ಚರ್ಮವಾದ್ಯ ಇವರ ಕುಣಿತದ ಸಾಧನವಾಗಿದೆ. ಎದೆಗೆ ಬಿಳಿಯ ಬಣ್ಣದ ನಿಲುವಂಗಿಯನ್ನು ಧರಿಸಿ ಸೊಂಟಕ್ಕೆ ಬಣ್ಣದ ಶಾಲೊಂದನ್ನು ಅಡ್ಡಕಟ್ಟಿರುತ್ತಾರೆ. ಬಿಳಿಯ ಅಂಗಿಯ ಮುಂಭಾಗದಲ್ಲಿ ಇಳಿಬಿಟ್ಟ ಕೆಂಪು ಬಣ್ಣದ ಶಾಲು ಇರುತ್ತದೆ. ತಲೆಗೆ ಕೆಂಪು ಪಟ್ಟಿಯ ಬಿಳಿ ಮುಂಡಾಸು ಧರಿಸಿ ಮುಂಡಾಸಿನ ಸುತ್ತ ಅಬ್ಬಲಿಗೆಹೂವಿನ ದಂಡೆಯನ್ನು ಸುತ್ತಿರುತ್ತಾರೆ.

ಹೋಳಿಕುಣಿತದಲ್ಲಿ ಪ್ರಧಾನ ಕುಣಿತಗುಮ್ಮಟೆ. ಗುಮ್ಮಟೆ ಕುಣಿತದಲ್ಲಿ ಭಾಷೆ ಮತ್ತು ಕ್ರಿಯೆ ಒಂದಕ್ಕೊಂದು ಪೂರಕವಾಗಿದ್ದು ಹಾಡಿನ ಲಯಕ್ಕನುಗುಣವಾಗಿ ಗುಮ್ಮಟೆಯನ್ನು ಬಾರಿಸುತ್ತ ಸರಳ ರೇಖಾಕೃತಿ, ಚಕ್ರಾಕಾರದ ರೀತಿ, ಮಧ್ಯಮ ತೀವ್ರಗತಿಯಲ್ಲಿ ಕುಣಿಯುತ್ತಾರೆ. ಈ ಕುಣಿತದಲ್ಲಿ ಗುಮ್ಮಟೆ ಪೆಟ್ಟಿಗನುಗುಣವಾಗಿ ಆಂಗೀಕ ಚಲನೆ ಇರುತ್ತದೆ. ಒಂದಿಷ್ಟು ಏಕತಾನತೆ ಇಲ್ಲದೆ ವೈವಿಧ್ಯಪೂರ್ಣವಾಗಿ ಸಾಗುವ ಗುಮ್ಮಟೆ ಕುಣಿತ ಮನೋರಂಜನೆಯ ಮಾಧ್ಯಮವು ಆಗಿದೆ. ಗುಮ್ಮಟೆ ಕುಣಿತದ ಬಳಿಕ ಕೋಲಾಟ ಆರಂಭಿಸುತ್ತಾರೆ. ಕೋಲಾಟವು ಆರಂಭದಲ್ಲಿ ನಿಧಾನಗತಿಯಲ್ಲಿದ್ದು ಆನಂತರ ತೀವ್ರಗತಿಯನ್ನು ಪಡೆದುಕೊಳ್ಳುತ್ತದೆ. ಗುಮ್ಮಟೆ ಮತ್ತು ಕೋಲಾಟ ಧಾರ್ಮಿಕಾಂಶದೊಂದಿಗೆ ಮನೋರಂಜನೆಯನ್ನು ನೀಡುತ್ತದೆ. ಆದರೂ ಗುಮ್ಮಟೆ ಕುಣಿತ/ಕೋಲಾಟ ಮಾಡುವವರಿಗೆ ಕೆಲವು ನಿಷೇಧಗಳಿವೆ. ಇದು ಹರಕೆಯ ತಿರುಗಾಟವಾಗಿದ್ದು ತಿರುಗಾಟದಲ್ಲಿ ಭಾಗವಹಿಸುವವರು ಮದ್ಯ ಮಾಂಸಗಳಿಂದ ದೂರವಿರಬೇಕು. ಕಾಲಿಗೆ ಚಪ್ಪಲಿ ಧರಿಸಿ ಗುಮ್ಮಟೆ ಕುಣಿಯಬಾರದು. ಮುಟ್ಟು ಮೈಲಿಗೆ ಇರುವವರು ಗುಮ್ಮಟೆ ಮುಟ್ಟಬಾರದು.

ಚಪ್ಟೆಕಾರಬಂಡಾರಿ ನಾಯ್ಕರು ಕೃಷಿಕರು ಮತ್ತು ಕೃಷಿ ಕೂಲಿಕಾರ್ಮಿಕರಾಗಿದ್ದು

ಕೃಷಿ ಚಟುವಟಿಕೆಗಳ ನಡುವಿನ ವೇಳೆಯಲ್ಲಿ ಗುಮ್ಮಟೆ ಕುಣಿತವನ್ನು ತಮ್ಮದೆ ಜಾತಿ ಬಾಂಧವರ ಮನೆಯಲ್ಲಿ ಮಾತ್ರ ಪ್ರರ್ದಶಿಸುತ್ತಾರೆ. ಇವರ ಕುಣಿತವು ಧಾರ್ಮಿಕ ಮನೋಭಾವನೆಯನ್ನು ಮಾತ್ರವಲ್ಲದೆ ಮನೋರಂಜನೆಯನ್ನು ಕೂಡಾ ನೀಡುತ್ತದೆ.

ಬಸರೂರಿನ ಚಪ್ಪೆಕಾರಬಂಡಾರಿ ನಾಯ್ಕರ್ ಕುಟುಂಬ ಬೆಳ್ಳಾಳ ಮತ್ತು ಕುಳ್ಳಂಬಳ್ಳಿಗಳಲ್ಲಿ ಹೋಗಿ ನೆಲೆಸಿದ್ದಾರೆ. ಆದರೂ ಹೋಳಿ ಹುಣ್ಣಿಮೆಗೆ ಬಸರೂರಿಗೆ ಬಂದು ತಮ್ಮ ಕುಟುಂಬದ ಮೂಲವನ್ನು ನೆನಪಿಸಿಕೊಂಡು ಕುಲದೇವತೆ ಅಮ್ನೋರ ಗದ್ದುಗೆ ದರ್ಶನ ಮಾಡಿಕೊಂಡು ಆಶೀರ್ವಾದ ಬೇಡುತ್ತಾರೆ. ಗುರಿಕಾರನ ಮನೆಯಲ್ಲಿ ಆ ದಿನ ಊಟದ ವ್ಯವಸ್ಥೆ ಮಾಡಿರುತ್ತಾರೆ. ಮರಾಠಿ ಮಿಶ್ರಿತ ಕೊಂಕಣಿ ಮಾತನಾಡುವ ಈ ಜನಸಮುದಾಯ ಮರಾಠ ಪ್ರಾಂತ್ರದಿಂದ ಬಸರೂರಿಗೆ ಉದ್ಯೋಗ ಅರಸುತ್ತ ಬಂದು ನೆಲೆನಿಂತವರು. ಇಂದು ಬಸರೂರಿನ ಜನಸಮುದಾಯದೊಂದಿಗೆ ಬೆರೆತು ಸಂಸ್ಕೃತಿಕರಣ ಹೊಂದಿದ್ದಾರೆ. ಮರಾಠಿ ಕೊಂಕಣಿ ಮಾತೃಭಾಷೆಯಾಗಿದ್ದರು ಕನ್ನಡವನ್ನು ಹೆಚ್ಚಾಗಿ ಮಾತನಾಡುತ್ತಾರೆ. ಗುಮ್ಮಟೆ ಪದವನ್ನು ಕನ್ನಡದಲ್ಲೂ ಹಾಡುತ್ತಾರೆ. ಹಿರಿಯ ತಲೆಮಾರಿನವರು ಮರಾಠಿ ಭಾಷೆಯಲ್ಲಿ ಪದಗಳನ್ನು ಹಾಡಿದರೆ ಹೊಸಪೀಳಿಗೆಯ ಯುವಕರು ಕನ್ನಡ ಮತ್ತು ಕೊಂಕಣಿ ಹಾಡುಗಳನ್ನು ಹೇಳುತ್ತಾರೆ.

ಗುಮ್ಮಟೆ ಶಬ್ಧವು ಊರಿನ ಮಾರಿಯನ್ನು ಕಳೆಯುತ್ತದೆ ಎಂಬ ಭಾವನೆ ಚಪ್ಪೆಕಾರ್ ಬಂಡಾರಿ ನಾಯ್ಕ್ ಜನಸಮುದಾಯಕ್ಕಿದೆ. ತಿರುಗಾಟದ ಆರಂಭದಲ್ಲಿ ಅಮ್ನೋರ ಗದ್ದುಗೆಗೆ ಹರಕೆ ಹೊತ್ತುಕೊಳ್ಳುವ ಚಪ್ಪೆಕಾರರು ತಿರುಗಾಟ ಮುಗಿದ ಮೇಲೆ ಹರಕೆ ತೀರಿಸುತ್ತಾರೆ. ಗುಮ್ಮಟೆ ಕುಣಿತ ಕೂಡ ಒಂದು ಬಗೆಯಲ್ಲಿ ಊರಿನ ಮಾರಿಯನ್ನು ಕಳೆಯುವ ಆಚರಣೆಯಾಗಿದೆ. ಸಾಹಿತ್ಯ ಸಂಗೀತ ನರ್ತನಗಳ ಸಂಮ್ಮಿಳನವಾಗಿರುವ ಗುಮ್ಮಟೆ ಕುಣಿತವು ಧಾರ್ಮಿಕ ವಿಧಿ-ವಿಧಾನಗಳನ್ನು ಹೊಂದಿದೆ. ಜನಪದ ಕಲಾರಂಗದಲ್ಲಿ ತನ್ನದೆ ಆದ ಸಾಂಸ್ಕೃತಿಕ ಅನನ್ಯತೆಯನ್ನು ಪಡೆದಿದೆ.

ಬಸರೂರಿನ ಹೋಳಿ ಕುಣಿತ ಸಾಂಕೇತಿಕವಾಗುತ್ತಿದೆ. ಬಸರೂರಿನಲ್ಲಿದ್ದ ಚಪ್ಪೆಕಾರ್ ಬಂಡಾರಿ ನಾಯ್ಕರು ಬೇರೆಕಡೆ ವಲಸೆ ಹೋಗಿದ್ದಾರೆ. ಇಲ್ಲಿರುವವರು ವಿದ್ಯಾವಂತರಾಗಿ ಬೇರೆ ಬೇರೆ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಈ ಮೊದಲು ಕುಣಿತದ ತಂಡ ಇಡೀ ಊರನ್ನು ಸುತ್ತುತ್ತಿತ್ತು. ಈಗ ಅವರ ಜಾತಿಸಮುದಾಯದವರ ಮನೆಯಲ್ಲಿ ಮಾತ್ರ ಹೋಳಿ ಕುಣಿಯುತ್ತಾರೆ. ಈ ಕಲೆಯ ಬಗ್ಗೆ ಇತ್ತೀಚಿನ ತಲೆಮಾರಿಗೆ ಅಸಡ್ಡೆ ಆರಂಭವಾಗಿದೆ. ಯಕ್ಷಗಾನದ ಪ್ರಭಾವದಿಂದಾಗಿ ಸಂಪ್ರದಾಯಬದ್ಧ ಉಡುಗೆಗಳು ಬದಲಾಗಿದೆ. ಬಣ್ಣ ಬಣ್ಣದ ಉಡುಗೆ ಬರಲಾರಂಭಿಸಿದೆ. ಜೊತೆಗೆ ಬಸರೂರಿನ ಚಪ್ಪೆಕಾರರ ಬಂಡಾರಿ ನಾಯ್ಕರು ವರ್ಣಸಂಕರಗೊಳ್ಳುತ್ತಿದ್ದಾರೆ. ಇದರಿಂದ ಹೋಳಿಕುಣಿತ ತನ್ನ

ಮೊದಲಿನ ಧಾರ್ಮಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಕಳೆದುಕೊಳ್ಳುತ್ತಿದೆ.

**೫.೨. ಹೂವಿನಕೋಲು**

ಹೂವಿನಕೋಲು ಒಂದು ಸಂಕೀರ್ಣಜಾತಿಯ ಕಿರು ಕಲಾಪ್ರಕಾರ. ೨೧ನೇ ಶತಮಾನದವರೆಗೂ ಬಸರೂರಿನಲ್ಲಿ ಶ್ರೀಮಹಾಲಿಂಗೇಶ್ವರ ಯಕ್ಷಗಾನ ಮಂಡಳಿ ಎಂಬ ಹೆಸರಿನಿಂದ ಹೂವಿನಕೋಲಿನ ಮೇಳ ನಡೆಯುತ್ತಿದ್ದಿತ್ತು. ಹೂವಿನಕೋಲು ತಾಳ ಮದ್ದಲೆಯ ಸ್ವರೂಪದಂತಿರುವ ಒಂದು ಕಿರು ಪ್ರದರ್ಶನಕಲೆ. ಇಬ್ಬರು ಬಾಲಕರು ಕೈಯಲ್ಲಿ, ಬಿದಿರು ಬೆಂಡು ಮತ್ತು ಬಣ್ಣದ ಕಾಗದಗಳಿಂದ ತಯಾರಿಸಿದ ಒಂದಡಿ ಉದ್ದದ ಹೂವಿನಕೋಲು ಹಿಡಿದುಕೊಂಡು ಪ್ರದರ್ಶನ ನೀಡುತ್ತಾರೆ. ಹೂವಿನಕೋಲನ್ನು ಮುಂದಿಟ್ಟುಕೊಂಡು ಪ್ರದರ್ಶನ ನೀಡುವುದರಿಂದ ಹೂವಿನಕೋಲು ಎಂದಾಗಿದೆ. ಬಸರೂರಿನಲ್ಲಿ ಈ ಹೂವಿನಕೋಲು ನವರಾತ್ರಿಯ ಮೇಳವಾಗಿದೆ. ಇದು ಸಾಮಾನ್ಯವಾಗಿ ಒಂದು ವಾರದ ಮೇಳವಾಗಿದ್ದು ನವರಾತ್ರಿ ಆರಂಭದಿಂದ ವಿಜಯದಶಮಿಯವರೆಗೆ ಮಾತ್ರ ಸಂಚರಿಸುವ ಕಲಾ ತಂಡವಾಗಿದೆ. ಮೊದಲ ನವರಾತ್ರಿಯ ದಿನ ಭಾಗವತರು, ಮದ್ದಳೆಗಾರರು, ಶ್ರುತಿಯವರು ಮತ್ತಿಬ್ಬರು ಬಾಲಕರು ಈ ಮೇಳದೊಂದಿಗೆ ಹೊರಡುತ್ತಾರೆ. ಬಾಲಕರು ಕೈಯಲ್ಲಿ ಹೂವಿನಕೋಲು ಹಿಡಿದು ಒಂದೇ ಬಗೆಯ ಸಮವಸ್ತ್ರ ಧರಿಸಿ ತಲೆಗೆ ಬಿಳಿಯ ಗಾಂಧಿ ಟೊಪ್ಪಿಯನ್ನು ಧರಿಸಿರುತ್ತಾರೆ. ಹೂವಿನಕೋಲಿನ ಮೊದಲ ಪ್ರದರ್ಶನ ಶ್ರೀಮಹಾಲಿಂಗೇಶ್ವರನ ಸನ್ನಿಧಿಯಲ್ಲಿ ನಡೆಯುತ್ತದೆ. ಅನಂತರದಲ್ಲಿ ದೇವಾಲಯದ ಮುಕ್ತೇಶ್ವರರ ಮನೆಯಲ್ಲಿ, ಭೂಮಾಲಕರ ಮನೆಯಲ್ಲಿ, ವ್ಯಾಪಾರಿಗಳ ಮತ್ತು ಜಾತಿ ಬಾಂಧವರ ಮನೆಯಲ್ಲಿ ಪ್ರದರ್ಶನಗೊಳ್ಳುತ್ತಿತ್ತು. ದಶಮಿಯಂದು ಪುನಃ ದೇವಾಲಯದಲ್ಲಿ ಪ್ರದರ್ಶಿಸಿ ಮೇಳವನ್ನು ಕೊನೆಗೊಳಿಸುತ್ತಿದ್ದರು. ಸಾಮಾನ್ಯವಾಗಿ ಐದು ಜನರಿರುವ ತಂಡವಾಗಿದ್ದು ಬರುಬರುತ್ತ ಈ ಸಂಖ್ಯೆ ಕಡಿಮೆಯಾಗಿ ಮೇಳವೇ ಕೊನೆಗೊಳ್ಳುತ್ತಿದ್ದವು. ಬಸರೂರಿನಲ್ಲಿ ಈ ಮೇಳವನ್ನು ಮೂರು ಜನರೇ ನಡೆಸಿಕೊಂಡು ಹೋಗಿರುವುದು ವಿಶೇಷವಾಗಿದೆ. ಇಲ್ಲಿ ಭಾಗವತಿಕೆ, ಮದ್ದಳೆನುಡಿಸುವುದು, ಶ್ರುತಿಪೆಟ್ಟಿಗೆಯನ್ನು ಒಬ್ಬರೇ ನಿಭಾಯಿಸಿಕೊಂಡು ಹೋಗುತ್ತಿದ್ದಾರೆ.

ಪ್ರದರ್ಶನಕ್ಕೆ ಮನೆಯೊಳಗೆ ಪ್ರವೇಶಿಸುವಾಗ ಮೊದಲು ಹೂವಿನಕೋಲು ಹಿಡಿದ ಬಾಲಕರು ಹೋಗುತ್ತಾರೆ. ಅನಂತರದಲ್ಲಿ ಭಾಗವತರು, ಹಿಮ್ಮೇಳದವರು, ಹೊರೆಹೊರುವವರು ಹೋಗುತ್ತಾರೆ. ಬಸರೂರಿನ ಮೇಳ ಈ ಮಾಗಣೆಗಷ್ಟೇ ಸೀಮಿತವಾದ ಮೇಳವಾಗಿದೆ. ಇದನ್ನು ಬಸರೂರಿನ ಗುಪ್ಪೆ ಆಚಾರ್ಯರು ನಡೆಸಿಕೊಂಡು ಬರುತ್ತಿದ್ದರು. ಅವರ ಕಾಲದ ನಂತರ ಹೂವಿನಕೋಲು ತನ್ನ ಅಸ್ತಿತ್ವವನ್ನು ಬಸರೂರಿನಲ್ಲಿ ಕಳೆದುಕೊಂಡಿತು[೨]. ಹೂವಿನಕೋಲು ಮನೆಯೊಳಗೆ ಪ್ರವೇಶಿಸಿದ ಕೂಡಲೇ ಮೇಳಕ್ಕೆ ಚಾಪೆ ಹಾಸುತ್ತಿದರು.

ಹೂವಿನಕೋಲಿನವರನ್ನು ಬರಿ ನೆಲದ ಮೇಲೆ ಕೂರಿಸುತ್ತಿರಲ್ಲಿಲ್ಲ. ಹೂವಿನಕೋಲನ್ನು ಹಿಡಿದ ಹುಡುಗರು ಆರಂಭದಲ್ಲಿ ಹರಕೆಯ ಪದ್ಯಗಳನ್ನು ಹೇಳುತ್ತಾರೆ.

ನಾರಾಯಣಾಯ ನಮೋ ನಾರಾಯಣಾಯ
ನಾಭಿಕಮಲಕೆ ಶರಣು ನಾರಾಯಣಾಯ
ಗುರುದೈವ ಗಣಪತಿಗೆ ಶರಣು ಶರಣೆಂದು
ಕರಗಳೆರಡು ಮುಗಿದು ಶಿರವೆರಗಿನಿಂದು
ಆಶ್ವೀಜ ಶುದ್ಧ ಮಾನವಮಿ ಬರಲೆಂದು
ಐಶ್ವರ್ಯ ಸಕಲ ಸಂಪದ ಹೆಚ್ಚಲೆಂದು

ಹೀಗೆ ಗಣಪತಿಯನ್ನು ಸ್ತುತಿಸಿ ಮನೆಗೆ ಸಂತಾನ ಮತ್ತು ಸಮೃದ್ಧಿಯನ್ನು ಬೇಡುತ್ತಾರೆ.

ಗಣಪತಿ ಸ್ತುತಿ ಮುಗಿದ ಕೂಡಲೆ ಭಾಗವತರು ಚಿಕ್ಕ ಯಕ್ಷಗಾನದ ಪ್ರಸಂಗವನ್ನು ಎತ್ತಿಕೊಂಡು ಪದ ಆರಂಭಿಸುತ್ತಾರೆ. ಬಾಲಕರು ಎದುರು ಬದರಾಗಿ ಕುಳಿತು ಸಂಭಾಷಣೆ ನಡೆಸುತ್ತಾರೆ. ಅದೊಂದು ಹತ್ತು ನಿಮಿಷದ ಪ್ರದರ್ಶನ ಆಗಿರುತ್ತಿತ್ತು. ಊರಿನ ಹಿರಿಯರು ಶ್ರೀಮಂತರ ಮನೆಗಳಲ್ಲಿ ಒಂದಿಷ್ಟು ಸಮಯ ಹೆಚ್ಚಿಗೆ ತೆಗೆದುಕೊಳ್ಳುತ್ತಿದ್ದರು. ಪ್ರಸಂಗವನ್ನು ಕಲ್ಯಾಣದಿಂದ ಅಥವಾ ಯುದ್ಧದಿಂದ ಸಾಮಾನ್ಯವಾಗಿ ಮುಗಿಸುತ್ತಿದ್ದರು. ಪ್ರಸಂಗ ಮುಗಿದ ಕೂಡಲೇ ಮನೆಯ ಯಜಮಾನರು ಅಕ್ಕಿ, ಕಾಯಿ, ವೀಳ್ಯ ನೀಡಿ ಗೌರವಿಸುತ್ತಾರೆ.

ಬಸರೂರಿನ ಶ್ರೀಮಹಾಲಿಂಗೇಶ್ವರ ಮೇಳವು ಹೂವಿನಕೋಲಿನಲ್ಲಿ ನೂತನ ಪ್ರಯೋಗಗಳನ್ನು ಮಾಡಿಕೊಂಡು ಬಸರೂರಿನ ಪ್ರದರ್ಶನ ಕಲಾಪ್ರಕಾರವನ್ನು ಇಪ್ಪತ್ತೊಂದನೇಯ ಶತಮಾನದ ಮೊದಲ ದಶಕದವರೆಗೂ ನಡೆಸಿಕೊಂಡು, ಉಳಿಸಿಕೊಂಡು ಬಂದಿದೆ. ಇದೊಂದು ನವರಾತ್ರಿಯ ಧಾರ್ಮಿಕ ಆಚರಣೆಯ ಭಾಗವಾಗಿ ನಡೆದುಕೊಂಡು ಬಂದಿದ್ದು ಬಸರೂರು ಯಾವುದೇ ಬಗೆಯಲ್ಲಿ ಜಾಗತೀಕರಣಕ್ಕೆ, ನಗರೀಕರಣಕ್ಕೆ ತೆರೆದುಕೊಂಡರು ಹೂವಿನಕೋಲಿನ ಪ್ರದರ್ಶನವನ್ನು ಆಸ್ವಾದಿಸುವವರ ಸಂಖ್ಯೆ ಕಡಿಮೆಯಾಗಿಲ್ಲ. ಈ ತಂಡದವರು ಮನೆಮನೆಗೆ ಹೋಗಿ ಸಂತಾನ, ಸಮೃದ್ಧಿ, ಮಳೆ, ಬೆಳೆ, ಹಾಲು, ತುಪ್ಪವೃದ್ಧಿಗೆ ಪ್ರಾರ್ಥಿಸುತ್ತಾರೆ. ಬಸರೂರು ಕೃಷಿ ಸಂಸ್ಕೃತಿಯನ್ನು ಹೊಂದಿರುವ ಪ್ರದೇಶ. ಇಲ್ಲಿನ ಜನರಿಗೆ ಹೂವಿನಕೋಲು ಮನರಂಜನೆಯೊಂದಿಗೆ ಧಾರ್ಮಿಕ ಅನುಭೂತಿಯನ್ನು ನೀಡುತ್ತದೆ.

**೫.೩. ಚುಣ್ಣನಕುಣಿತ**

ಬಸರೂರಿನ ಮೂಡ್ಲಕಟ್ಟೆ ಕಡೆಗಳಲ್ಲಿ ಕೊರಗ ಜನಸಮುದಾಯದವರು ಈ ಕುಣಿತ ಮಾಡುತ್ತಾರೆ. ಮೊದಲ ಕೊಯ್ಲಿನ ವೇಳೆ ಕೊರಗರು ಡೋಲು ಬಡಿದುಕೊಂಡು

ಮನೆಮನೆ ಸುತ್ತುತ್ತಾರೆ ಇದನ್ನು ಭತ್ತದಪಡಿ[೩] ಎಂದು ಕರೆಯುತ್ತಾರೆ. ಕಂಬಳ ನಡೆಯುವ ಸಂದರ್ಭದಲ್ಲಿ ಕೊರಗರು ಚುಣ್ಣನ್[೪] ವೇಷವನ್ನು ಹಾಕಿಕೊಂಡು ಡೋಲಿನ ತಾಟು ಮತ್ತು ಕೊಳಲಿಗೆ ಲಯಕ್ಕನುಗುಣವಾಗಿ ಕುಣಿಯುತ್ತಾರೆ. ಇದನ್ನು ಚುಣ್ಣನಕುಣಿತವೆಂದು ಕರೆಯುವುದು ವಾಡಿಕೆ. ಕಂಬಳದ ಸಂದರ್ಭದ ಈ ಕುಣಿತಕ್ಕೆ ಸಾಂಸ್ಕೃತಿಕ ನೆಲೆಗಿಂತ ಮುಖ್ಯವಾಗಿ ಆಚರಣಾತ್ಮಕ ಧಾರ್ಮಿಕ ಮಹತ್ತಿಕೆ ಹೆಚ್ಚು. ಈ ಧಾರ್ಮಿಕ ಆಚರಣೆ ಕೊಡಿ ತಿಂಗಳಲ್ಲಿ ಬರುವ ಮಾರಣಕಟ್ಟೆ[೫] ಹಬ್ಬದಂದು ಪ್ರಾರಂಭವಾಗಿ ಸುಗ್ಗಿ ತಿಂಗಳಲ್ಲಿ ಮುಗಿಯುತ್ತದೆ.

ಬಸರೂರಿನಲ್ಲಿ ಮೂಡ್ಲಕಟ್ಟೆ ಕಂಬಳದ ದಿನ ಚುಣ್ಣನಕುಣಿತದ ಕ್ರಮವಿದೆ. ಮತ್ತು ಕೋಣದ ಯಜಮಾನರು, ಕೋಣಗಳೊಂದಿಗೆ ಚುಣ್ಣನನ್ನು ಕರೆತರುತ್ತಾರೆ. ಕೊರಗರು ಆ ದಿನ ಕಂಬಳ ಗದ್ದೆಯ ಸುತ್ತ ಡೋಲು ಬಡಿಯುತ್ತ ಚುಣ್ಣನೊಂದಿಗೆ ತಿರುಗುತ್ತಾರೆ. ಕೆಲವು ಕಡೆಗಳಲ್ಲಿ ಚುಣ್ಣ ಡೋಲಿನ ಮೇಲೆ ಕುಳಿತಿರುತ್ತಾನೆ. "ಚುಣ್ಣನಕುಣಿತ ಧಾರ್ಮಿಕ ಮತ್ತು ಆಚರಣಾತ್ಮಕ ಕಲೆಯಾಗಿದೆ" (ಶಿವರಾಮ ಶೆಟ್ಟಿಬಿ;೨೦೦೭;ಪುಟ:೩೦೧).

ಚುಣ್ಣ ಸಾಂಸ್ಕೃತಿಕ ಕಲಾತಂಡವಲ್ಲ. ಆದರೆ ಅವರ ಕುಣಿತಕ್ಕೆ ಧಾರ್ಮಿಕ ಮಹತ್ತಿಕೆಯಿದೆ. ಈ ತಂಡದಲ್ಲಿ ಆರರಿಂದ ಎಂಟು ಮಂದಿಯಿರುತ್ತಾರೆ. ಸಣ್ಣ ಬಟ್ಟೆಯನ್ನು ಸೊಂಟಕ್ಕೆ ಕಟ್ಟಿಕೊಂಡು, ಅದರ ಮೇಲೆ ನುಕ್ಕಿಯ ಸೊಪ್ಪನ್ನು, ಮಾವಿನ ಸೊಪ್ಪನ್ನು ಕಟ್ಟಿಕೊಂಡಿರುತ್ತಾರೆ. ಮೈಗೆ ಗದ್ದೆಯ ಕೆಸರನ್ನು ಮೆತ್ತಿಕೊಂಡು ಅದರ ಮೇಲೆ ಮಸಿಯಿಂದ ಕಪ್ಪು ಚುಕ್ಕಿ ಇಟ್ಟುಕೊಂಡು ತಲೆಗೆ ಮಂಡೆಹಾಳೆ[೬] ಧರಿಸಿರುತ್ತಾರೆ. ಚುಣ್ಣನ ವೇಷಧಾರಿಯು ಕೈಯಲ್ಲಿ ಮರದ ಕತ್ತಿ ಮತ್ತು ಗೆರಸಿಯನ್ನು[೭] ಹಿಡಿದಿರುತ್ತಾನೆ. ತಂಡದ ಉಳಿದವರು ಡೋಲು, ಚೆಂಡೆ, ತಾಳ, ಕೊಳಲು ಬಾರಿಸುತ್ತ ಕುಣಿಯುತ್ತ ಮೆರವಣಿಗೆ ಹೋಗುತ್ತಾರೆ. ಈ ಕುಣಿತದಲ್ಲಿ ಯಾವುದೇ ಸಾಹಿತ್ಯವಿಲ್ಲ, ಡೋಲಿನ ತಾಟಿಗನುಗುಣವಾಗಿ ಚುಣ್ಣನ ವೇಷಧಾರಿ ಕುಣಿಯುತ್ತಾನೆ. ಚುಣ್ಣನ ವೇಷ ಕಟ್ಟುವುದನ್ನು ಬೇರೆಯವರು ನೋಡಬಾರದು ಎಂಬ ನಿಟ್ಟಿನಲ್ಲಿ ಕಂಬಳದ ಮನೆಯ ಹಿಂದೆ ಅಥವಾ ಜನರಿಂದ ಮರೆಯಾದ ಜಾಗದಲ್ಲಿ ವೇಷ ಕಟ್ಟುತ್ತಾರೆ. (ಚಿತ್ರ ೫)

ಕಂಬಳದ ಹಿಂದಿನ ದಿನ ಹನಿಕಾಯುವ ಕೆಲಸ ಮಾಡುವ ಕೊರಗರು ಕಂಬಳದ ಮನೆಯವರು ನೀಡಿದ ಅನ್ನ ಪದಾರ್ಥವನ್ನು ಎಡೆ ಹಾಕಿ ಕಂಬಳ ಗದ್ದೆಯ ಅಂಚಿನ ಮೇಲೆ ತಮ್ಮ ದೈವಗಳಿಗೆ(ಚುಣ್ಣ) ಎಡೆ ಬಡಿಸಿ ಕಂಬಳದ ಯಶಸ್ಸಿಗೆ ಪಾರ್ಥಿಸುತ್ತಾರೆ. ಕೊರಗರು ರಾತಿಯೆಲ್ಲಾ ಕಳ್ಳು ಕುಡಿಯುತ್ತಾ, ಚಳಿ ಕಾಯಿಸುತ್ತಾ ಮನೆಯವರೊಂದಿಗೆ ಅಲ್ಲಿ ಹನಿಕಾಯುತ್ತ ಸಂಭ್ರಮಿಸುತ್ತಾರೆ. ಬೆಳಗ್ಗಿನ ಜಾವದಲ್ಲಿ ಕಂಬಳಗದ್ದೆಯ ಕೆಸರಲ್ಲಿ ಅಣುಕು ಕಂಬಳ ಪ್ರದರ್ಶಿಸಿ ಕಂಬಳಕ್ಕೆ ಎದುರಾಗುವ ದುರಿತಗಳನ್ನು ಕಳೆಯುತ್ತಾರೆ.

ಅನಂತರ ಚುಣ್ಣ ಕಟ್ಟುವವನು ಸ್ನಾನ ಮುಗಿಸಿ, ವೇಷ ಕಟ್ಟಿಕೊಂಡು ಕಂಬಳದ ಯಜಮಾನರ ಮನೆಯ ಮುಂದಿರುವ ಬಬ್ಬರ್ಯನಿಗೆ ನಮಸ್ಕರಿಸಿ, ಹೆಬ್ಬಾಗಿಲಿನ ಎದುರುಗಡೆ ಡೋಲಿನ ತಾಟಿಗೆ ತಕ್ಕಂತೆ ಕುಣಿಯುತ್ತಾರೆ. ಅವನೊಡನೆ ಅನೇಕರು ಹೆಜ್ಜೆ ಹಾಕುತ್ತಾರೆ. ಮನೆಯ ಒಡತಿ ಕಪ್ಪು ಹಾನವನ್ನು ಮಾಡಿ ಚುಣ್ಣನ ಕಾಲಿಗೆ ಚೆಲ್ಲುತ್ತಾರೆ. ಚುಣ್ಣ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಹೀಗೆ ಮನರಂಜನಾತ್ಮಕವಾಗಿ ಕುಣಿತ ಸಾಗುತ್ತದೆ. ಕಂಬಳದ ಖರ್ಚಿಗೆ ದುಡ್ಡು ಕೇಳುತ್ತಾನೆ. ಬಟ್ಟೆ, ಎಣ್ಣೆ, ಅನ್ನ ಕೇಳುತ್ತಾನೆ. ಬಗೆಬಗೆಯ ತಾಟುಗಳಿಂದ ಚುಣ್ಣನೊಡನೆ ತಂಡದವರು ಕುಣಿಯುತ್ತಾರೆ. ಹಣ, ವಸ್ತ್ರವನ್ನು ಕಂಬಳದ ಯಜಮಾನರು ನೀಡಿ ಗೌರವಿಸುತ್ತಾರೆ.

ಕಂಬಳದ ಗದ್ದೆಯ ಎದುರು, ಹೆಬ್ಬಾಗಿಲಿನಲ್ಲಿ ಕುಣಿತ ಮುಗಿದ ಮೇಲೆ ಚುಣ್ಣನ ಸವಾರಿ ಕಂಬಳದ ಹೇಳಿಕೆಗೆ ಹೊರಡುತ್ತದೆ. ಕಂಬಳಕ್ಕೆ ಕರೆಯಲು ಬಂದ ಕುಣಿತದ ತಂಡಕ್ಕೆ ಪ್ರತಿಮನೆಯವರು ಭತ್ತ, ಅಕ್ಕಿ, ಕಾಯಿ, ಎಣ್ಣೆ, ಹಣ ಕೊಡುತ್ತಾರೆ. ಕಂಬಳ ಆರಂಭಗೊಳ್ಳುವುದಕ್ಕೆ ಮುನ್ನ ಚುಣ್ಣ ಕಂಬಳಗದ್ದೆಯ ಎದುರು ನಿಲ್ಲುತ್ತಾನೆ. ಮನೆಯಹೋರಿಗೆ[೮] ಗೋರಿ[೯] ಹಾಕುವಾಗ ಕೋಣದೊಂದಿಗೆ ಚುಣ್ಣ ಕಂಬಳಗದ್ದೆಗೆ ಇಳಿಯುತ್ತಾನೆ.

ಚುಣ್ಣನ ಕಟ್ಟುವವರು ಐದು ದಿನಗಳ ತನಕ ವಿಶೇಷ ನೇಮ ನಿಷ್ಠೆಯಿಂದ ಇರಬೇಕು. ಈ ಚುಣ್ಣನನ್ನು ಬಸರೂರಿನ ಕೊರಗರು ತಮ್ಮ ಆರಾಧ್ಯ ದೈವವಾದ ಕೀಲು-ರಾಹು ಎಂದು ಭಾವಿಸುತ್ತಾರೆ. ಬಸರೂರಿನ ಸುತ್ತಲಿನ ಹಳ್ಳಿಯಲ್ಲಿ ಇಂದಿಗೂ ಚುಣ್ಣನ ಕೈಯಲ್ಲಿ ಪ್ರಸಾದ ಪಡೆದು ಹಟ್ಟಿಗಳಿಗೆ ಹಾಕುವ ಕ್ರಮ ಇಟ್ಟುಕೊಂಡಿದ್ದಾರೆ. ದನಗಳಿಗೆ ತಗಲುವ ರೋಗ ಒಣಗು[೧೦] ಮುಂತಾದವುಗಳನ್ನು ಚುಣ್ಣ ನಿವಾರಿಸುತ್ತಾನೆ ಎಂಬ ನಂಬಿಕೆ ಇದೆ. ಚುಣ್ಣ ಕೃಷಿಕರ ಸಂಪತ್ತನ್ನು ಕಾಯುವ ದೈವ ಎಂಬ ನಂಬಿಕೆ ಈ ಪ್ರದೇಶದಲ್ಲಿ ಬಲವಾಗಿದೆ.

ಚುಣ್ಣ ಕೊರಗರ ಪಾಲಿನ ಆರಾಧ್ಯ ದೈವವಾಗಿದೆ. ತುಳುನಾಡಿನಲ್ಲಿ ಕುಂಬಳತ್ತಾಯ ಎಂಬ ಭೂತವನ್ನು ಕಂಬಳದ ಅಂಗವಾಗಿ ಆರಾಧಿಸುತ್ತಾರೆ. ಈ ಭೂತವು ಗದ್ದೆಯ ಬೆಳೆಯನ್ನು ರಕ್ಷಿಸುತ್ತದೆ ಮತ್ತು ಕೋಣಗಳಿಗೆ ಬರುವ ಆಪತ್ತನ್ನು ತಡೆಯುತ್ತದೆ. ಈ ನಿಟ್ಟಿನಲ್ಲಿ ಚುಣ್ಣ ಗದ್ದೆಯ ಬೆಳೆಯನ್ನು ಮತ್ತು ಕೋಣವನ್ನು ಆಪತ್ತಿನಿಂದ ರಕ್ಷಿಸುವ ದೈವ ಎಂದು ಹೇಳಬಹುದು. ಕಂಬಳದ ದಿನ ಚುಣ್ಣ ಕಂಬಳಗದ್ದೆಯ ಕಡುವಿನಲ್ಲಿ ಡೋಲಿನ ಮೇಲೆ ಕುಳಿತುಕೊಂಡಿರುತ್ತಾನೆ. ಮನೆಯ ಹೋರಿಗೆ ಗೋರಿ ಹಾಕಿದ ಮೇಲೆ ಸಂಜೆ ಯಜಮಾನರೊಡನೆ ಕಂಬಳ ಗದ್ದೆಗೆ ಇಳಿದು ಗದ್ದೆಯ ಕೊನೆಯಲ್ಲಿ ದೀಪ ಇಟ್ಟು ಮುಂಡಕನ ಕಾಂಡವನ್ನು ನೆಟ್ಟು ಬೆಳೆಗಾಗಿ ಪ್ರಾರ್ಥಿಸುತ್ತಾನೆ. ಅನಂತರ ಚುಣ್ಣ ಕಂಬಳದ

ಯಜಮಾನರ ಹೆಬ್ಬಾಗಿಲಿನ ಮುಂದೆ ಕುಣಿಕೆ ಹಾಕಿ, ದೇವರನ್ನು ಪ್ರಾರ್ಥಿಸಿ ವೇಷ ಬಿಡಿಸಿ ಕಂಬಳ ಗದ್ದೆಯ ಹತ್ತಿರದಲ್ಲಿರುವ ಮರಕ್ಕೆ ಕಟ್ಟುವುದರೊಂದಿಗೆ ಚುಣ್ಣನಕುಣಿತ ಕೊನೆಗೊಳ್ಳುತ್ತದೆ.

### ೫.೪. ದೇವದಾಸಿಯರ ಕುಣಿತ

ಬಸರೂರಿನ ದೇವದಾಸಿಯರನ್ನು ಜನಸಮುದಾಯ ಅಥವಾ ಜಾತಿ ಎಂದು ಸಂಬೋಧಿಸದೆ ಅವರನ್ನು ಸಾಂಸ್ಕೃತಿಕ ಜನವರ್ಗ ಎಂಬ ನೆಲೆಯಿಂದ ಅವರ ಕುಣಿತವನ್ನು ಅಧ್ಯಯನ ಮಾಡುವ ಅಗತ್ಯವಿದೆ. ದೇವದಾಸಿಯರು ಯಾವುದೇ ಒಂದು ಜಾತಿಗೆ ಸೇರಿದವರಲ್ಲ. ಈ ಪ್ರದೇಶದಲ್ಲಿ ಒಂದು ಕಾಲಕ್ಕೆ ಮಾದರು, ದೇವಾಡಿಗರು, ಮೊಗವೀರರು ದೇವದಾಸಿಯರಾದ ಉಲ್ಲೇಖವಿದೆ. ಇವರು ಸಂಗೀತ, ನಾಟಕ, ನೃತ್ಯದ ಮೂಲಕ ಬಸರೂರಿನ ಸಂಸ್ಕೃತಿಯನ್ನು ಮಾಗಣೆ ದಾಟಿಸಿದ್ದಾರೆ. ಶ್ರೀಮಂತರ ಮನೆಯಲ್ಲಿ ನಡೆಯುವ ಮದುವೆಯ ಕಾರ್ಯಕ್ರಮಕ್ಕೆ ಮೇಳದವರನ್ನು ಕರೆಯಿಸಿ ಅವರಿಂದ 'ದೌಲತ್‌ಜಾದ' ಮಾಡಿಸಿಕೊಳ್ಳುತ್ತಿದ್ದರು. ಸಾವಿರದಒಂಬೈನೂರಎಪ್ಪತ್ತೆಂಟರಲ್ಲಿ ಬಸರೂರಿನಲ್ಲಿ ಅಣಕು ದೇವದಾಸಿ ನೃತ್ಯಕಾರ್ಯಕ್ರಮ ನಡೆದ ಬಗ್ಗೆ THE ILLUSTRATED WEEKLY OF INDIAದಲ್ಲಿ ವರದಿಯಾಗಿತ್ತು (ಸಂತೋಷ ಕುಮಾರ ಗುಲ್ವಾಡಿ; ೧೯೭೮; ಪುಟ: ೧೯–೨೦). ಇದನ್ನು ಬಿಟ್ಟರೆ ದೇವದಾಸಿ ಕುಣಿತ ಅನಂತರದಲ್ಲಿ ಎಲ್ಲೂ ನಡೆದಿಲ್ಲ. ಬಸರೂರಿನ ದೇವದಾಸಿಯರಲ್ಲಿ ಎರಡು ಬಗೆಯ ನೃತ್ಯ ಪ್ರಕಾರವನ್ನು ಗುರುತಿಸಬಹುದು.

#### (ಅ) ತಟ್ಟೆಚಾಕರಿ ನೃತ್ಯ

ಬಸರೂರಿನ ದೇವಾಲಯ ಮತ್ತು ದೈವಸ್ಥಾನಗಳಲ್ಲಿ ನರ್ತಿಸುವವರು ದೇವದಾಸಿಯರು. ಬಸರೂರಿನ ಮಹಾಲಿಂಗೇಶ್ವರ ದೇವಸ್ಥಾನದಲ್ಲಿ ನಿತ್ಯಪೂಜೆಯಾದ ಬಳಿಕ ದೇವದಾಸಿಯರು ಹಾಡಿ ಕುಣಿದು ಮಾಡುವ ಸೇವೆಯೇ ತಟ್ಟೆಚಾಕರಿನೃತ್ಯ. ಇದನ್ನು ನರ್ತನಸೇವೆ ಎಂದು ಕರೆಯುತ್ತಾರೆ. ಮಗ್ಗದ ಸೀರೆಯನ್ನು ಸಣ್ಣ ನೆರಿಗೆಮಾಡಿ ಉಟ್ಟುಕೊಳ್ಳುತ್ತಿದ್ದರು. ಹಣೆಗೆ ಕಾಸಗಲದ ಕುಂಕುಮ ಇಟ್ಟು ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಹಾರ್ಮೋನಿಯಂ ಮೇಳದವರಿಗೆ ವಂದಿಸಿ ಪಾಟಾಳಿಯು ಬಸವನ ಮಂಟಪದಲ್ಲಿಟ್ಟ ಆರತಿಯ ತಟ್ಟೆಗಳನ್ನು ಕೈಗೆತ್ತಿಕೊಂಡು ಐದು ಮಂದಿ ದೇವದಾಸಿಯರು ದೇವರ ಮುಂದೆ ಸರಳರೇಖಾಕೃತಿಯಲ್ಲಿ ನಿಲ್ಲುತ್ತಾರೆ. ದೇವರದೀಪದಿಂದ ನೀಲಾಂಜನ ಬೆಳಗಿಸಿ 'ತತ್ತಾಂ ತತಾಂ ದಿಗ್ಡತಾಂ, ದಿಗ್‌ಡ್‌ದೀಂದೀಂ, ದಿಕುತಕ ತೋಂ ದಿಕುತಕತೋಂ ತಾತೈಯಾಂ ದಿಕಂತಕ ತಾ ತತ್ತತ್ತಾ ತೈ ತತ್ತತ್ತಾ........' ಹಿಮ್ಮೇಳಕ್ಕೆ ಅನುಗುಣವಾಗಿ ಆರತಿ ಬೆಳಗುತ್ತಾ ಹಿಂದೆ ಮುಂದೆ ಕುಣಿಯುತ್ತಾರೆ. ಕುಣಿಯುವಾಗ ಅರ್ಥಕ್ಕೆ ಸರಿಯಾಗಿ ಕೈಯಲ್ಲಿ ಅಭಿನಯ ಮಾಡುತ್ತ, ಹಾಡುತ್ತ ಮುಖಭಾವ ಪ್ರದರ್ಶಿಸುತ್ತಾರೆ. ಈ ಬಗೆಯ ಕುಣಿತ ಬಸರೂರಿನ

ಶ್ರೀಮಹಾಲಿಂಗೇಶ್ವರನಲ್ಲಿ ಪ್ರತಿದಿನ ನಡೆಯುತ್ತಿದ್ದಿತ್ತು. ಬಸರೂರು ಹಬ್ಬದಲ್ಲಿ ಏಳು ದಿನವು ಕಟ್ಟೆ ವಸಂತದಲ್ಲಿ ನರ್ತನಸೇವೆ ನಡೆಯುತ್ತಿದ್ದಿತ್ತು. ರಾಮನವಮಿ ಮತ್ತು ನವರಾತ್ರಿಯಲ್ಲಿ ಶ್ರೀದೇವಿಅಮ್ಮನವರ ದೇವಸ್ಥಾನ ಮತ್ತು ತಿರುಮಲ ವೆಂಕಟರಮಣ ದೇವಾಲಯದಲ್ಲಿ ನರ್ತನ ಸೇವೆ ನಡೆಯುತ್ತಿತ್ತು. ಇವರ ಸೇವೆಗೆ ನಲವತ್ತು ವರಹ ಮತ್ತು ಐದು ಮುಡಿ ಅಕ್ಕಿ ದೊರಕುತ್ತಿತ್ತು. ನಿತ್ಯ ಪೂಜೆಯ ಬಳಿಕ ಮಹಾಲಿಂಗೇಶ್ವರನಿಗೆ ಅರ್ಪಿಸಿದ ಕಜ್ಜಾಯವನ್ನು ದೇವದಾಸಿಯರು ಪ್ರಸಾದ ರೂಪದಲ್ಲಿ ಪಡೆಯುತ್ತಿದ್ದರು.

(ಆ) ದೌಲತಜ್ಯಾದಾ ನೃತ್ಯ

ದೌಲತಜ್ಯಾದಾ ಮಾಡುವವರನ್ನು ಮೇಳದವರು ಎಂದು ಕರೆಯುವುದಾಗಿದೆ. ಮೇಳದಲ್ಲಿ ಹಾಡುವ ಹಾಡುಗಳೆ ಬೇರೆ, ಕುಣಿತದ ವೈಖರಿಯೇ ಬೇರೆಯಾಗಿರುತ್ತಿತ್ತು. ಮೇಳದಲ್ಲಿರುವವರು ಅಲಂಕಾರ ಮಾಡಿಕೊಂಡಿರುತ್ತಾರೆ. ದೌಲತಜ್ಯಾದವು ಸಭಾ ಕಾರ್ಯಕ್ರಮವಾಗಿದ್ದು ದೇವದಾಸಿಯರು ನರ್ತನ ಮಾಡುತ್ತಿರುವಾಗ ಶ್ರೀಮಂತರೊಬ್ಬರು ಪ್ರಮುಖರ ಹೆಸರನ್ನು ಹೇಳಿ ದೌಲತ್‌ಜ್ಯಾದಾ ಎಂದು ಹಣ ಎಸೆಯುತ್ತಿದ್ದರು. ಆಗ ನರ್ತಿಸುತ್ತಿದ್ದವರು ಪ್ರಮುಖರ ಬಳಿ ಹೋಗಿ ಗಂಧಅಕ್ಷತೆ, ಪನ್ನೀರು ಹಾಕಿ ಉಪಚರಿಸಿ ಅವರ ತೊಡೆಯ ಮೇಲೆ ಕುಳಿತುಕೊಳ್ಳುತ್ತಿದ್ದರು.

"ದೇವದಾಸಿಯರಿಗೆ ಹಾಡಿನಷ್ಟೆ ಕುಣಿತವೂ ಪ್ರಧಾನ. ಹಾಡಿನಲ್ಲಿ ಕರ್ನಾಟಕ ಸಂಗೀತದ ಹಿನ್ನೆಲೆ ಇರುವಂತೆ, ಕುಣಿತದಲ್ಲಿ ಭರತ ನಾಟ್ಯದ ಹಿನ್ನೆಲೆ ಇದೆ. ತಾಳಕ್ಕನುಗುಣವಾಗಿ ಅವರು ಕುಣಿಯುತ್ತಿದ್ದರು. ಹಿಮ್ಮೇಳವಿಲ್ಲದ ಕುಣಿತವನ್ನು ಬೋಳುಕಾಲಿನ ಕುಣಿತ ಎನ್ನುವರು" (ವಾದಿರಾಜ ಭಟ್ ಕನರಾಡಿ;೧೯೮೭;ಪುಟ:೬೮)

ಬಸರೂರಿನ ದೇವದಾಸಿಯರ ಕುಣಿತವು ಗುರುತು ಕೂಡಾ ಸಿಗದ ರೀತಿಯಲ್ಲಿ ಕಣ್ಮರೆಯಾಗಿದೆ. ದೇವದಾಸಿ ಕುಟುಂಬದ ಕೊನೆಯ ಮಹಿಳೆ ಇಂದಿಗೂ ಬಸರೂರಿನಲ್ಲಿ ಇದ್ದಾಳೆ. ದೇವರು ಕಟ್ಟೆಪೂಜೆಗೆ ಹೋಗುವಾಗ ಹಳೆಯ ನೆನಪುಗಳು ಅವಳನ್ನು ಕಾಡುತ್ತದೆ. ರಾಹುತಕೇರಿಗೆ ಮೆರವಣಿಗೆ ಬಂದಾಗ ಆಕೆ ಮುದಿ ವಯಸ್ಸಿನಲ್ಲಿಯೂ ಮೆರವಣಿಗೆಯನ್ನು ಭಕ್ತಿಯಿಂದ, ಅರ್ಪಣಾ ಭಾವದಿಂದ ನೋಡುತ್ತಾಳೆ. ಆದರೆ ಬಸರೂರಿನ ವಕ್ತೃಗಳು ದೇವದಾಸಿಯರು ಯಾರು ಇಲ್ಲ ಎಂಬ ಮಾತನ್ನು ಹೇಳುತ್ತಾರೆ.

೫.೫ ಹೌಂದ್ರಾಯನ ವಾಲ್ಗವಾ

ಬಸರೂರಿನ ಹೌಂದ್ರಾಯನ ವಾಲಗದ ತಂಡ ಅತ್ಯಂತ ಪ್ರಸಿದ್ಧವಾದ ತಂಡವಾಗಿದ್ದು, ತಂಡದಲ್ಲಿ ಹನ್ನೆರಡು ಮಂದಿ ಪುರುಷರು ಇರುತ್ತಾರೆ. ಇವರು ಕೆಂಪು ಪಟ್ಟೆಯನ್ನು ಕಚ್ಚೆ ಹಾಕುತ್ತಿದ್ದರು. ಕೆಲವು ಪ್ರದೇಶದಲ್ಲಿ ಬಿಳಿ ಪಂಚೆಯಿಂದ ಕಚ್ಚೆ ಹಾಕಿಕೊಳ್ಳುತ್ತಾರೆ. ಆದರೆ

ಬಸರೂರಿನ ತಂಡದವರು ಕೆಂಪು ಪಂಚೆಯಲ್ಲಿ ಕಚ್ಚೆಹಾಕುವುದು ವಿಶಿಷ್ಟವಾಗಿದೆ. ತಲೆಗೆ ಕೆಂಪು ಪಟ್ಟೆಯ ಮುಂಡಾಸು ಸುತ್ತಿಕೊಳ್ಳುತ್ತಿದ್ದರು. ಸೊಂಟಕ್ಕೆ ಪಂಚೆಯ ಮೇಲೆ ಕೆಂಪು ಬಟ್ಟೆಯನ್ನು ದಟ್ಟಿಯಂತೆ ಬಿಗಿದುಕೊಳ್ಳುತ್ತಿದ್ದರು. ಕಾಲಿಗೆ ಪ್ರತಿಯೊಬ್ಬರು ಕಾಲುಕಡಿ[೧೧] ಧರಿಸಿರುತ್ತಾರೆ ಕುಣಿಯಲು ಯಾವದೇ ವಾದನ ಬಳಸುವುದಿಲ್ಲ. ಕುಣಿಯಲು ಸಿದ್ಧರಾದ ಕುಣಿತಗಾರರು ತುಳಸಿಕಟ್ಟೆಯ ಮುಂದೆ ವೃತ್ತಾಕಾರವಾಗಿ ನಿಲ್ಲುತ್ತಾರೆ. ಈ ಕುಣಿತ ಸಾವಿರಹಣ್ಣಿನವಸಂತ[೧೨] ಸೇವೆಯ ಮತ್ತೊಂದು ಅಂಗವಾಗಿದೆ. ತುಳಸಿಕಟ್ಟೆಯ ಮುಂದೆ ಕೊಡಿ ಬಾಳೆಎಲೆಯಲ್ಲಿ ಹಸಿ ಹೆಸರುಬೇಳೆಯ ಪಂಚಕಜ್ಜಾಯ, ಬಾಳೆಹಣ್ಣು ಎಡೆ ಇಟ್ಟಿರುತ್ತಾರೆ. ಅದರ ಮೇಲೆ ಒಂದು ಕಳಸ ಇಟ್ಟು ಬಿಲ್ಲವ ಪೂಜಾರಿ ಧೂಪಹಾಕಿ ಮಂಗಳಾರತಿ ಮಾಡುತ್ತಾನೆ. ಪ್ರತಿಯೊಬ್ಬ ಕುಣಿತಗಾರನಿಗೂ ಸಿಂಗಾರದ ಎಸಳು ನೀಡುತ್ತಾನೆ ನಂತರ ಕುಣಿತ ಆರಂಭವಾಗುತ್ತದೆ. ಪದ್ಯ ಹೇಳುವವನು ತಂಡದಲ್ಲಿ ಒಬ್ಬನಿರುತ್ತಾನೆ. ಉಳಿದವರು ಅವರ ಹೇಳುವ ಪದ್ಯದ ಗತಿಗೆ ತಕ್ಕಂತೆ ಪಲ್ಲವಿ ಹಾಡುತ್ತ ಕುಣಿಯುತ್ತಾರೆ. ಹೋ...ಹೋ... ವಾಲ್ಗುವಾ, ಹೌಂದೇರಾಯನ ವಾಲ್ಗುವಾ. ಹೋ...ಹೋ...ಬ್ಯಾಟಿಯಾ... ಹೌಂದೇರಾಯನ ಬ್ಯಾಟಿಯಾ ಎಂದು ಸಮೂಹವಾಗಿ ಹಾಡುತ್ತಾರೆ. ಕುಣಿತದ ತಂಡದಲ್ಲಿರುವ ಸಮ ಸಂಖ್ಯೆಯ ಕುಣಿತಗಾರರು ಜೋಡಿ ಜೋಡಿಯಾಗಿ ಕೆಲವು ಸಂಧಿಗೆ ಕುಣಿದರೆ, ಇನ್ನು ಕೆಲವು ಸಂಧಿಗೆ ಎದುರಾಗಿ ಕುಣಿಯುತ್ತಾರೆ. ಪ್ರತಿಯೊಂದು ಸಂಧಿಗೂ ಬೇರೆ ಬೇರೆ ಬಗೆಯಲ್ಲಿ ಕುಣಿಯುತ್ತಾರೆ. ಆರಂಭದಲ್ಲಿ ನಿಧಾನವಾಗಿದ್ದ ಕುಣಿತ ತೀವ್ರಗತಿಯನ್ನು ಪಡೆದುಕೊಂಡು ನಂತರ ನಿಧಾನಗತಿಗೆ ಇಳಿಯುತ್ತದೆ. ಕೋಡಂಗಿ ಸಂಧಿಯಲ್ಲಿ ಗುಂಪಿನಲ್ಲಿ ಒಬ್ಬ ಕೊಡಂಗಿಯಾಗಿ ಕೆಂಪುಪಟ್ಟೆ ಉಟ್ಟು ಬರಿಮೈಯಲ್ಲಿರುತ್ತಾನೆ. ಅವನು ಕುತ್ತಿಗೆಗೆ ಹೂಮಾಲೆ ಹಾಕಿಕೊಂಡು ಹಿಂದಕ್ಕೆ ಕುಣಿಯುತ್ತ ಹೋಗುತ್ತಾನೆ. ಉಳಿದವರು ಅವನಿಗೆ ಎದುರಾಗಿ ಕುಣಿಯುತ್ತಾರೆ. ಹೌಂದ್ರಾಯನ ವಾಲ್ಗುವಾ ಮುಕ್ತಾಯವಾಗುವುದು ಕೋಲ್‌ಸಂಧಿಯಲ್ಲಿ. ಕೋಲಾಟ ಸಂಧಿಯಲ್ಲಿ ಕೋಲಾಟ ಅತ್ಯಂತ ರೋಮಾಂಚನಕಾರಿಯಾಗಿರುತ್ತದೆ. ಕೋಲಾಟ ಸಂಧಿಯ ನಂತರ ಮಹಾಮಂಗಳಾರತಿ ಆಗುತ್ತದೆ. ಇದು ಒಂದೆರಡು ಗಂಟೆಯ ಪ್ರದರ್ಶನವಾಗಿದೆ.

ಬಸರೂರಿನ ಹೌಂದ್ರಾಯನ ವಾಲ್ಗುಗಾ ಕುಣಿತ ಕೊಡಿ[೧೩] ತಿಂಗಳಲ್ಲಿ ಪ್ರಾರಂಭವಾಗಿ ಬಾರತ್[೧೪] ತಿಂಗಳಲ್ಲಿ ನಡೆಯುವ ಗೋಧೂಳಿ ಆಚರಣೆಯಾಗಿದೆ. ಬೇರಾವ ತಿಂಗಳಲ್ಲಿಯೂ ಈ ಆಚರಣೆ ಇರುವುದಿಲ್ಲ. ಸಾವಿರಹಣ್ಣಿನ ವಸಂತಕ್ಕೆ[೧೫] ಈ ಕುಣಿತ ಇರುತ್ತದೆ. ಕುಣಿತದ ತಂಡಕ್ಕೆ ಮುಂಚಿತವಾಗಿ ವೀಳ್ಯ ನೀಡಬೇಕು. ಬಸರೂರಿನ ಹೌಂದ್ರಾಯನ ತಂಡವು ಈ ಸುತ್ತಮುತ್ತಲ ಮಾಗಣೆಯಲ್ಲಿ ಅತ್ಯಂತ ಶ್ರೀಮಂತ ತಂಡವಾಗಿದೆ.

ಹೌಂದ್ರಾಯನ ವಾಲ್ಗುವಾ ಬಿಲ್ಲವರ ಧಾರ್ಮಿಕ ಆಚರಣೆಯಾಗಿದ್ದರು ಅದು

ಬಿಲ್ಲವರ ಮನೆಯಲ್ಲಿ ಮಾತ್ರ ನಡೆಯಬೇಕೆಂದೇನು ಕಟ್ಟುಪಾಡುಗಳು ಇದ್ದಂತೆ ಕಾಣುವುದಿಲ್ಲ. ಸಾವಿರಹಣ್ಣಿನ ವಸಂತ ಮಾಡಿಸುವವರು ಸೇವೆಯ ಭಾಗವಾಗಿ ಇದನ್ನು ಮಾಡುತ್ತಾರೆ. ಮುಖ್ಯವಾಗಿ ಇದು ಸಮೃದ್ಧಿಯನ್ನು ಸಂಕೇತಿಸುವ ಆಚರಣೆಯಾಗಿದೆ.

ಹೌಂದ್ರಾಯನ ವಾಲ್ಗುವಾ ಒಂದು ಧಾರ್ಮಿಕ ಆಚರಣೆಯಾದರೂ ಪ್ರದರ್ಶನಾತ್ಮಕ ಗುಣ ಇದಕ್ಕಿದೆ. ಈ ಕುಣಿತದಲ್ಲಿ ಬಳಸುವ ಸಾಹಿತ್ಯ ಮತ್ತು ಸಾಹಿತ್ಯದಲ್ಲಿ ಬರುವ ಸಾಂಸ್ಕೃತಿಕ ಪದಗಳನ್ನು ಗಮನಿಸಿದರೆ ಹೌಂದ್ರಾಯನ ವಾಲ್ಗುವಾ ಬೆಳೆ ಸಮೃದ್ಧಿಯನ್ನು ಬಯಸುವ ಆಚರಣೆ ಎನ್ನುವುದು ಸ್ಪಷ್ಟವಾಗುತ್ತದೆ. ಕುಣಿತಗಾರರು ಬಳಸುವ, ನೆಲ್ಲು, ಕಾಶಿಗೆ ಬಡ್ಡಿ(ದೇವರಗಂಟು) ಹಾಲುಹಳ್ಳ, ದೇವಶಾಲಿ, ಸಣ್ಣಜೀರಸಾಲಿ, ದಬ್ಬಣಜೀರ ಸಾಲಿ, ಗಣಗಳ ಆಹಾರ, ಹಾರಿ ಈ ಎಲ್ಲಾ ಪದಗಳು ಬಸರೂರಿನ ಕೃಷಿಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಪ್ರದರ್ಶನಕಲೆ ಎಂದರೆ ಕೇವಲ ಕುಣಿತವಲ್ಲ ಅಲ್ಲಿ ಸಾಹಿತ್ಯವು ಜೀವಂತವಾಗಿರುತ್ತದೆ.

ಹೌಂದ್ರಾಯನ ವಾಲ್ಗದಲ್ಲಿ ಎಂಟು ಸಂಧಿಗಳಿರುತ್ತವೆ. ಮೊದಲನೆಯ ಸಂಧಿ ಗೋವಿಂದನಸಂಧಿ. ಈ ಸಂಧಿ ಹಾಡುವಾಗ ಕುಣಿತದವರು ತುಲಸಿಯ ಮುಂದೇ ಪ್ರಾರ್ಥನೆಯ ಭಂಗಿಯಲ್ಲಿರುತ್ತಾರೆ. ಆ ಸಂಧಿಯಲ್ಲಿ ಕುಣಿತವಿರುವುದಿಲ್ಲ. ಅನಂತರ ಬರುವ ವಾಲ್ಗದಸಂಧಿಯಲ್ಲಿ ನಿಧಾನವಾಗಿ ಕುಣಿಕೆ ಆರಂಭಿಸುತ್ತಾರೆ. ಮೂರನೆಯ ಸಂಧಿ ಯಜಮಾನನಸಂಧಿ ಇದೊಂದು ಬಗೆಯ ಭಾವನಾತ್ಮಕ ಕುಣಿಕೆಯಾಗಿರುತ್ತದೆ. ಐದನೆಯ ಸಂಧಿಯಾದ ಬ್ಯಾಂಟಿಸಂಧಿ ಮನರಂಜನೆಯನ್ನು ನೀಡುವ ಸಂಧಿಯಾಗಿದ್ದು ವಿವಿಧ ಬೇಟೆಗಳನ್ನು ಕುಣಿತದ ಮೂಲಕ ತೋರಿಸುತ್ತಾರೆ. ಕೊಡಂಗಿಸಂಧಿಗೆ ಧಾರ್ಮಿಕ ಮಹತ್ವವಿದೆ. ರಾಮನ ಬಂಟ ಹನುಮಂತನ ವರ್ಣನೆ ಬರುತ್ತದೆ. ಬಸರೂರಿನವರ ಕುಣಿತದ ದೃಷ್ಟಿಯಲ್ಲಿ ಶಿವರಾಯನಸಂಧಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿರುತ್ತದೆ. ಬಸರೂರಿನ ಹೌಂದ್ರಾಯನವಾಲ್ಗದಲ್ಲಿ ಕುಂದಾಪುರದ ವಡೇರಹೋಬಳಿಯವರ ಹೊಗಳಿಕೆಸಂಧಿ ಇದೆ. ಇದರಲ್ಲಿ ತಿರುಪತಿ ಯಾತ್ರೆಗೆ ಹೋಗುವ ದಾರಿಯನ್ನು ತಿರುಪತಿಯಲ್ಲಿ ನೀಡುವ ಸೇವೆಯ ವಿವರಗಳಿವೆ. ಈ ಸಂಧಿ ಬಸರೂರಿನ ಪಠ್ಯದಲ್ಲಿ ಮಾತ್ರ ಕಾಣ ಸಿಗುತ್ತದೆ.

ಬದಲಾದ ಕಾಲಘಟ್ಟದಲ್ಲಿ ಬಸರೂರಿನ ಹೌಂದ್ರಾಯನವಾಲ್ಗುವಾ ಕ್ಷೀಣಿಸುತ್ತಿದೆ. ಹಿಂದೆ ಕೊಡಿ ಮತ್ತು ಬಾರತ್ ತಿಂಗಳಲ್ಲಿ ಈ ತಂಡದವರು ಬಸರೂರಿನಲ್ಲಿ ಮನೆಮನೆಗೆ ಹೋಗಿ ಕುಣಿಯುತ್ತಿದ್ದರು. ಈಗ ಕುಣಿತ ಅಪರೂಪಕ್ಕೆ ಹರಕೆಯ ರೂಪದಲ್ಲಿ ನಡೆಯುತ್ತಿದೆ. ಒಂದು ಕಾಲಕ್ಕೆ ಬಸರೂರಿನ ಕುಣಿತದ ತಂಡ ಸುತ್ತಮುತ್ತಲಿನ ಮಾಗಣೆಯ ಪ್ರಸಿದ್ಧ ತಂಡವಾಗಿದ್ದಿತ್ತು. ಇಲ್ಲಿ ದೊರಕಿದ ಪಠ್ಯವು ಕುಂದಾಪ್ರಕನ್ನಡದಲ್ಲಿದೆ. ಯಾವುದೇ ಬಗೆಯ

ಪ್ರಮಾಣ ಬದ್ಧ ಭಾಷೆಯ ಪ್ರಭಾವಕ್ಕೆ ಒಳಗಾಗಿಲ್ಲ. ಇತರ ಪ್ರದೇಶಗಳ ಪಠ್ಯಕ್ಕಿಂತ ಬಸರೂರಿನ ಹೌಂದ್ರಾಯನವಾಲ್ಗದಾ ಪಠ್ಯ ಭಿನ್ನವಾಗಿದೆ. ಈ ಪಠ್ಯವನ್ನು ಅನುಬಂಧದಲ್ಲಿ ನೀಡಲಾಗಿದೆ.

ಬಸರೂರಿನ ಪ್ರದರ್ಶನ ಕಲೆ ಮತ್ತು ಸಂಸ್ಕೃತಿ ಎಂಬ ನೆಲೆಯಲ್ಲಿ ಬಸರೂರಿನ ಹೂವಿನಕೋಲು, ಚುಣ್ಣನಕುಣಿತ, ಹೋಳಿಕುಣಿತ, ದೇವದಾಸಿಯರಕುಣಿತ, ಹೌಂದ್ರಾಯನವಾಲ್ಗವಾ ಮುಂತಾದ ಕಲಾ ಪ್ರಕಾರವನ್ನು ಸಂಸ್ಕೃತಿಯ ದೃಷ್ಟಿಯಿಂದ ವಿವೇಚಿಸಲಾಗಿದೆ. ಈ ಪ್ರದರ್ಶನಕಲೆಗಳು ಬಸರೂರಿನ ಸಂಸ್ಕೃತಿಯ ಪ್ರತೀಕವಾಗಿದೆ. ಹೂವಿನಕೋಲು ಪ್ರದರ್ಶನ ಕಲೆಯಾದರೂ ಅವುಗಳು ಬಿತ್ತರಿಸುವ ಮೌಲ್ಯ ಸಾಂಸ್ಕೃತಿಕವಾದುದು. ಹೂವಿನಕೋಲು ಶುಭದ ಸಂಕೇತವಾಗಿ ಮನೆಯೊಳಗೆ ಬರುತ್ತದೆ. ಹೂವಿನಕೋಲಿನ ಸ್ತುತಿಪದ್ಯವು ಸಮೃದ್ಧಿಯನ್ನು ಸೂಚಿಸುತ್ತದೆ. ಹೂವಿನ ಕೋಲಿನ ಮೂಲಕ ನಮ್ಮ ಪರಂಪರೆಯಿಂದ ಬಂದ ಅದೆಷ್ಟೊ ವಿಚಾರಗಳು ಮುಂದಿನ ತಲೆಮಾರಿಗೆ ಸಾಗಿಸಲು ಸಾಧ್ಯವಾಗುತ್ತದೆ.

ಬಸರೂರಿನ ಚುಣ್ಣನ ಕುಣಿತ ಕೃಷಿಮಾರಿಯನ್ನು ಓಡಿಸುವ ಆಚರಣೆಯಾಗಿದ್ದು. ಕೃಷಿಗೆ ಆಧಾರ ಸ್ತಂಭಗಳಾದ ಕೋಣ, ಎತ್ತು, ದನ, ಕರುಗಳಿಗೆ ಬರುವ ದುರಿತವನು ಚುಣ್ಣ ಹೋಗಲಾಡಿಸುತ್ತಾನೆ ಎಂಬ ಭಾವನೆ ಜನಪದರಿಗಿದೆ. ಇತ್ತೀಚಿನ ದಿನಗಳಲ್ಲಿ ಈ ಕುಣಿತ ಸಾಂಕೇತಿಕ ರೂಪವನ್ನು ಪಡೆದುಕೊಳ್ಳುತ್ತಿದೆ. ಬಸರೂರಿನ ಚಪ್ಪೆಕಾರ್‌ನಾಯ್ಕರ್ ಹೋಳಿಕುಣಿತ ಅಮ್ನೋರ ಆರಾಧನೆಯೊಂದಿಗೆ ಮನರಂಜನೆಯ ಸಾಂಸ್ಕೃತಿಕ ಕಲಾಪ್ರಕಾರವಾಗಿದೆ. ಇಲ್ಲಿ ಗುಮ್ಮಟೆಗೆ ಧಾರ್ಮಿಕ ಮಹತ್ವವಿದೆ. ಬಸರೂರಿನ ದೇವದಾಸಿಯರ ಕುಣಿತ ಇತಿಹಾಸದ ಪುಟವನ್ನು ಸೇರಿ ಐವತ್ತು ವರ್ಷಗಳು ಕಳೆದಿದೆ. ಇವುಗಳನ್ನು ಪುನಃ ನೆನಪಿಸುವ ಮೂಲಕ ಬಸರೂರಿನ ಪೂರ್ವಸ್ಮೃತಿಯು ಕಾಣಿಸುತ್ತದೆ. ಬಸರೂರಿನ ಹೌಂದ್ರಾಯನವಾಲ್ಗವಾ ಅಧ್ಯಯನದ ದೃಷ್ಟಿಯಿಂದ ಮಹತ್ವ ಪೂರ್ಣವಾದುದು. ಇಲ್ಲಿ ದೊರೆತ ಪಠ್ಯ ಯಾವುದೇ ಶಿಷ್ಟ ಭಾಷಿಕ ಪದಗಳಿಲ್ಲದ ಕುಂದಾಪ್ರಕನ್ನಡದಲ್ಲಿದೆ. ಈ ಎಲ್ಲಾ ಪ್ರದರ್ಶನ ಕಲೆಗಳ ಅಧ್ಯಯನವು ಬಸರೂರಿನ ಕಲಾ ಪ್ರಕಾರವನ್ನು ಬೆಳಕಿಗೆ ತಂದಿದೆ.

### ಕೊನೆಟಿಪ್ಪಣಿ

೧. ವರ್ಷಪ್ರತಿ ನಡೆಯುವ ದೇವರು/ದೈವಗಳಿಗೆ ಸಂಬಂಧಿಸಿದ ಸೇವೆ.

೨. ಗುಪ್ಪೆ ಗೋಪಾಲ ಆಚಾರ್ಯರು ೨೦೧೧ ರಲ್ಲಿ ತೀರಿಕೊಂಡರು.

೩. ಭತ್ತವನ್ನು ಪಡಿಯ(ಭಿಕ್ಷೆ) ರೂಪದಲ್ಲಿ ನೀಡುತ್ತಾರೆ.

೪. ತುಳುನಾಡಿನಲ್ಲಿ ಕೊರಗರು ಆರಾಧಿಸುವ ಕೊರಗತನಿಯ ಎಂಬ ಸಾಂಸ್ಕೃತಿಕ ನಾಯಕನೇ ಚುಣ್ಣ. ಹಟ್ಟಿಯಲ್ಲಿರುವ ದನಕರುಗಳಿಗೆ, ತೊಟ್ಟಿಲಲ್ಲಿರುವ ಮಕ್ಕಳಿಗೆ ಚುಣ್ಣ ರಕ್ಷಣೆಯನ್ನು ಒದಗಿಸುತ್ತಾನೆ ಎಂದು ಇಲ್ಲಿನ ಕೊರಗರು ನಂಬುತ್ತಾರೆ. (ಶಿವರಾಮ ಶೆಟ್ಟಿ ಬಿ;೨೦೦೭;ಪುಟ:೨೯೭). ಚುಣ್ಣ ಎಂದರೆ ಕ್ಷುದ್ರ, ಚುಕ್ಕೆ ಎಂಬ ಅರ್ಥವಿದೆ.

೫. ಮಾರಣಕಟ್ಟೆ ಬಸರೂರಿನ ಸಮೀಪದ ಊರು. ಅಲ್ಲಿರುವ ಬ್ರಹ್ಮಲಿಂಗೇಶ್ವರ ದೊಟ್ಟೆಕಾಲು ಚಿಕ್ಕು ದೈವಸ್ಥಾನದಿಂದ ಹೋಗಿರುವುದು ಎಂಬ ನಂಬಿಕೆ ಇದೆ.

೬. ತಲೆಯನ್ನು ಬಿಸಿಲಿನಿಂದ ರಕ್ಷಿಸಿಕೊಳ್ಳಲು ಅಡಿಕೆ ಹಾಳೆಯಿಂದ ಮಾಡಿದ ಟೋಪಿ.

೭. ಭತ್ತ ಮತ್ತು ಅಕ್ಕಿಯನ್ನು ಸ್ವಚ್ಛಗೊಳಿಸಲು ಬಿಳಲುಗಳನ್ನು ಸಿಗಿದು ಮಾಡಿದ ಅಗಲವಾದ ಸಾಧನ. ಇದನ್ನು ಬಸರೂರು ಮುಂತಾದ ಕಡೆಗಳಲ್ಲಿ ಕೊರಗರು ಮಾಡುತ್ತಾರೆ.

೮. ಕಂಬಳದ ಮನೆಯ ಕೋಣ.

೯. ಕಂಬಳದ ಕೋಣಗಳನ್ನು ಓಡಿಸುವಾಗ ಓಟಗಾರನು ನಿಂತುಕೊಳ್ಳಲು ಇರುವ ಮರದ ಹಲಗೆ. ಇದನ್ನು ಕೋಣಗಳ ಕುತ್ತಿಗೆಗೆ ನೊಗದ ಸಹಾಯದಿಂದ ಬಿಗಿದಿರುತ್ತಾರೆ. ಒಂದು ಅಡಿ ಅಗಲದ ಸುಮಾರು ಎಂಟು ಅಡಿ ಉದ್ದದ ಮಧ್ಯದಲ್ಲಿ ಮನುಷ್ಯರು ಕುಳಿತುಕೊಳ್ಳಲು ಮಣೆಯಾಕಾರದಲ್ಲಿ ಮಾಡಿದ ರಚನೆ. ಇದನ್ನು ಗಟ್ಟಿಮರದಿಂದ ಮಾಡಿರುತ್ತಾರೆ. ಇದರಲ್ಲಿ ಮಣ್ಗೋರಿ ಮತ್ತು ಕಂಬಳದ ಗೋರಿ ಎಂಬ ಎರಡು ವಿಧಗಳಿವೆ. ಮಣ್ಗೋರಿ ಅಗಲವಾಗಿರುತ್ತದೆ. ಗದ್ದೆಯ ಮಣ್ಣು ಹದಮಾಡಲು ಉಪಯೋಗಿಸುತ್ತಾರೆ. ಕಂಬಳದ ಗೋರಿ ಒಂದು ಅಡಿ ಉದ್ದಗಲದ ರಚನೆ ಹೊಂದಿದ್ದು ಕಂಬಳ ಓಡಿಸುವವನಿಗೆ ನಿಲ್ಲಲು ಆಧಾರವಾಗಿರುತ್ತದೆ.

೧೦. ಎಮ್ಮೆ, ಹೋರಿ, ದನಗಳ ಮೈಯಲ್ಲಿರುವ ರಕ್ತ ಹೀರುವ ಪರಾವಲಂಬಿ ಜೀವಿ.

೧೧. ಕಾಲುಕಡಿ ಎಂದರೆ ಗಗ್ಗರ.

೧೨. ಸಾವಿರ ಹಣ್ಣಿನ ವಸಂತ. ಇದು ಒಂದು ಬಗೆಯ ಹರಕೆ ರೂಪದ ಆಚರಣೆಯಾಗಿದೆ. ಮಕ್ಕಳಾಗದೇ ಇರುವವರು, ಆರೋಗ್ಯ ಸರಿಯಿಲ್ಲದವರು ಈ ಹರಕೆ ಹೊತ್ತುಕೊಳ್ಳುತ್ತಾರೆ. ತುಳಸಿಕಟ್ಟೆಯ ನಾಲ್ಕು ಮೂಲೆಗಳಿಗೂ ಕಂಬ ಹುಗಿದು ಚಪ್ಪರ ಹಾಕಿ ಆ ಕಂಬಗಳಿಗೆ ನಾಲ್ಕು ಬಾಳೆಹಣ್ಣಿನ ಕೊನೆಯನ್ನು ತೂಗುಹಾಕಲಾಗುತ್ತದೆ. ಇನ್ನೊಂದು ಕೊನೆಯನ್ನು ತುಳಸಿಕಟ್ಟೆಯ ಮೇಲಿಡಲಾಗುತ್ತದೆ. ತುಳಸಿಕಟ್ಟೆಯ ಮುಂದೆ ಹೆಡಿಗೆಯ ತುಂಬಾ ಬಾಳೆ ಹಣ್ಣು ತುಂಬಿಡಲಾಗುತ್ತದೆ. ಒಂದು ಸಾವಿರ ಹಣ್ಣು ಬಳಸಿ ತುಳಸಿಯ ಬಯಕೆ ತೀರಿಸುವುದೆಂದು ಜನ ನಂಬಿರುತ್ತಾರೆ. ಆ ಮನೆಯ ಹೆಂಗಸರು ಹೂ ಮುಡಿಯಬಾರದು, ತಿಲಕ ಇಡಬಾರದು. ಸಾಕು ಪ್ರಾಣಿಗಳು ಕೂಡ ಆ ದಿನ ಮನೆಯಿಂದ ದೂರವಿರಬೇಕು.

೧೩. ನವೆಂಬರ್ ೧೫ ರಿಂದ ದಶಂಬರ್ ೧೫ ರವರೆಗಿನ ದಿನಗಳು.

೧೪. ಜನವರಿ ೧೫ ರಿಂದ ಪೆಬ್ರವರಿ ೧೫ ರವರೆಗಿನ ದಿನಗಳು.

೧೫. ವಸಂತ ಎಂದರೆ ತುಳಸಿಯ ಆರಾಧನೆಗೆ ಸಂಬಂಧಿಸಿದ ಆಚರಣೆಯಾಗಿದೆ. ಈ ಪೂಜೆಯನ್ನು ವಸಂತ ಮಾಸದಲ್ಲಿಯೇ ಮಾಡುವುದಾಗಿದೆ. ಅದರಲ್ಲಿ ಕಟ್ಟೆ ವಸಂತ, ಸಾವಿರ ಹಣ್ಣಿನ ವಸಂತ, ದಿನಹಣ್ಣಿನ ವಸಂತ ಎಂಬ ಮೂರು ಬಗೆಗಳಿವೆ.

★★★

# ಅಧ್ಯಾಯ ಆರು

# ಗುಡಿಗಾರಿಕೆ–ಕರಕುಶಲಕಲೆ ಮತ್ತು ಜನಪದ ವಾಸ್ತು


೬.೧. **ಗುಡಿಗಾರಿಕೆ–ಕರಕುಶಲಕಲೆ**

೬.೧.೧. ಮರದ ಉರು ಮತ್ತು ಬಣ್ಣಗಾರಿಕೆ

೬.೧.೨. ಬಾಸಿಂಗ ತಯಾರಿ

೬.೨. **ಜನಪದವಾಸ್ತು**

೬.೨.೧. ದೊಡ್ಮನೆ

೬.೨.೨. ಹೆಬ್ಬಾಗಿಲು ಮನೆ

೬.೨.೩. ಬಣಸಾಲೆ ಮನೆ

೬.೨.೪. ಅಗ್ರಹಾರ ಬ್ರಾಹ್ಮಣರ ಮನೆ

೬.೨.೫. ಕುಶಲಕರ್ಮಿಗಳ ಮನೆ

೬.೨.೬. ದೈವದಮನೆ ಮತ್ತು ಗರಡಿ

# ಅಧ್ಯಾಯ ಆರು

# ಗುಡಿಗಾರಿಕೆ–ಕರಕುಶಲಕಲೆ ಮತ್ತು ಜನಪದವಾಸ್ತು

## ೬.೧. ಗುಡಿಗಾರಿಕೆ–ಕರಕುಶಲಕಲೆ

ಒಂದು ಪ್ರದೇಶದ ರಾಜಕೀಯ ಇತಿಹಾಸದೊಂದಿಗೆ ರಾಜನ ಅರಮನೆ, ಉದ್ಯಾನವನಗಳ ಬಗ್ಗೆ ಇತಿಹಾಸವಿದೆ. ಆದರೆ ಜನರ ಮನೆಗಳ ಕುರಿತಾಗಿ ಮತ್ತು ನಿರ್ಮಾಣ ಕೌಶಲ್ಯದ ಕುರಿತಾಗಿ ಮಾಹಿತಿಗಳಿಲ್ಲ. ಅವರು ಏನನ್ನು ನಿರ್ಮಿಸಿದರೂ ಹೆಸರು ಅಲ್ಲಿ ದಾಖಲಾಗಿಲ್ಲ. ಅಕ್ಷರ ಸಂಸ್ಕೃತಿಯಿಂದ ದೂರ ಉಳಿದ ಈ ಜನಗಳ ಭೌತಿಕ ಸಂಸ್ಕೃತಿಯನ್ನು ಅಧ್ಯಯನ ಮಾಡಿದರೆ ಮಾತ್ರ ಅವರಿಗಿರುವ ಪಾರಂಪರಿಕ ಜ್ಞಾನವು ಹೊರಬರುತ್ತದೆ. ಇದು ಹೊಸ ಬಗೆ ಇತಿಹಾಸವನ್ನು ಕಟ್ಟಿಕೊಡುತ್ತದೆ.

ಮನಸ್ಸಿಗೆ ಆನಂದವನ್ನು ತರುವಂತಹ ಯಾವುದೇ ರಚನೆ ಇಲ್ಲವೆ ಸೃಷ್ಟಿಯನ್ನು ಕಲೆಯೆಂಬುದಾಗಿ ಹೇಳಲಾಗಿದೆ. ಕರಕುಶಲಕಲೆ ಎಂಬ ಶಬ್ದದ ಅರ್ಥವಿಸ್ತಾರತೆಯು ಜೀವನಕ್ಕೆ ಉಪಯೋಗವಾಗುವಂತಹ ಎಂಬ ಅರ್ಥದಿಂದ ಮತ್ತು ಮನಸ್ಸಿಗೆ ಸಂತೋಷವನ್ನು ನೀಡುವ ಎಂಬ ಅರ್ಥದವರೆಗೂ ವ್ಯಾಪಿಸಿದೆ. ಮನುಷ್ಯನು ನಿರ್ಮಿಸುವ ಉಪಯೋಗಿ ಮತ್ತು ಮಾನಸಿಕ ತೃಪ್ತಿನೀಡುವ ವಸ್ತುಗಳೆಲ್ಲ ಇದರೊಳಗೆ ಬರುತ್ತದೆ. ಕಲ್ಲು, ಮಣ್ಣು, ಮರ, ಚರ್ಮ, ಬಟ್ಟೆ ಯಾವುದೇ ವಸ್ತುವನ್ನು ಬಳಸಿ ಆಕರ್ಷಕ ಮತ್ತು ಉಪಯೋಗಿ ವಸ್ತುಗಳನ್ನು ತಯಾರಿಸುವುದಾಗಿದೆ. ಮಾನವನ ಕರಕೌಶಲ್ಯಕ್ಕೆ ಮೊತ್ತಮೊದಲ ಮೂಲ ಸಾಮಾಗ್ರಿಗಳೆಂದರೆ ಪ್ರಕೃತಿದತ್ತವಾಗಿ ದೊರಕುವ ಮರಗಳು. ಗುಡಿಗಾರಿಕೆ ಕರಕುಶಲಕಲೆಯಲ್ಲಿಯೇ ಅಡಕವಾಗಿದ್ದರೂ ಬಸರೂರಿನ ದೃಷ್ಟಿಯಲ್ಲಿ ಪ್ರತ್ಯೇಕವಾಗಿ ನೋಡಲಾಗಿದೆ. ಬಸರೂರಿನ ದೈವಸ್ಥಾನಗಳಲ್ಲಿ ಸಾವಿರಾರು ಮರದ ಉರುಗಳಿವೆ. ಇವುಗಳನ್ನು ಬಸರೂರಿನ ಗುಡಿಗಾರರು ನಿರ್ಮಿಸಿದ್ದಾರೆ. ಬಸರೂರು ಗುಡಿಗಾರರ ಬೀಡಾಗಿದೆ.

ಬಸರೂರು ಪ್ರಾಚೀನ ಕಾಲದಿಂದಲೂ ಕಲಾವಿದರ ನೆಲೆವೀಡಾಗಿತ್ತು. ವಿಜಯನಗರದ

ಅರಸರ ಕಾಲದಲ್ಲಿ ಇಲ್ಲಿ ತಯಾರಾಗುತ್ತಿರುವ ಕಲಾತ್ಮಕ ವಸ್ತುಗಳಿಗೆ ದೇಶ ವಿದೇಶಗಳಲ್ಲಿ ಅಪಾರ ಬೇಡಿಕೆ ಇತ್ತು. ಕೇವಲ ದೇಶಿಯ ಕುಶಲಕರ್ಮಿಗಳು ಮಾತ್ರವಲ್ಲ ವಿದೇಶಿ ಕುಶಲಕರ್ಮಿಗಳು ಬಸರೂರಿಗೆ ಬಂದು ಹೋಗುತ್ತಿದ್ದರು ಎನ್ನುವುದನ್ನು ಕೆಲವು ಭೌತಿಕಸಾಕ್ಷ್ಯಗಳಿಂದ ತಿಳಿಯಬಹುದು೧. ದುಆರ್ತೆಬಾರ್ಬೋಸಾ ತನ್ನ ವರದಿಯಲ್ಲಿ "ಈ ಊರು ವಿವಿಧ ಕಲೆಗಳಿಗೆ ಆಶ್ರಯವಾಗಿದ್ದಿತ್ತು. ಗುಡಿಗಾರ, ಕಂಚುಗಾರ, ಪಟಗಾರ ಮತ್ತು ನೇಕಾರರುಗಳಿದ್ದರು. ಇಲ್ಲಿ ಗುಡಿಗಾರರ ಒಂದೇ ಮನೆಯಿದೆ. ಮರದ ಬೊಂಬೆಗಳನ್ನು ಮಾಡಿ ಬಣ್ಣ ಹಾಕುವ ಕಲೆಯನ್ನು ಇನ್ನೂ ಈ ಗುಡಿಗಾರರು ನಡೆಸಿಕೊಂಡು ಬರುತ್ತಿದ್ದಾರೆ" (ನಾಗೇಗೌಡ ಎಚ್.ಎಲ್;೨೦೦೬;(ಸಂ೨)ಪುಟ:೨೬೪) ಬಸರೂರಿನ ಕರಕುಶಲ ಕಲೆಗಳು ಮತ್ತು ಕಲಾವಿದರ ಕೌಶಲ್ಯವನ್ನು ತಿಳಿಸುವ ಸುಂದರಶಿಲ್ಪಗಳು, ದೀಪಸ್ತಂಭಗಳು, ಕಂಚಿನಪ್ರತಿಮೆಗಳು, ಮರದ ಉರುಗಳು, ಲೋಹದಮುಖವಾಡಗಳು ಭೌತಿಕಸಂಸ್ಕೃತಿಯ ಸಾಕ್ಷಿಗಳಾಗಿವೆ.

ಶ್ರೀ ಮಹಾಲಿಂಗೇಶ್ವರ ದೇವಾಲಯದ ಗರ್ಭಗುಡಿಯ ಎದುರು ಐದಡಿ ಎತ್ತರದ ಶೂಲಪಾಣಿ ಮತ್ತು ಪರಶುಪಾಣಿಗಳೆಂಬ ಕಂಚಿನ ವಿಗ್ರಹವಿದೆ. ಈ ವಿಗ್ರಹವು ಬಸರೂರಿನ ಕರಕುಶಲಕರ್ಮಿಗಳ ಜಾಣ್ಮೆಯನ್ನು ತಿಳಿಸಿಕೊಡುತ್ತದೆ.

ಶ್ರೀ ಮಹಾಲಿಂಗೇಶ್ವರ ದೇವಾಲಯದ ಕಾಷ್ಠ ರಥದ ಕೆತ್ತನೆಗಳು ಗುಡಿಗಾರರ ಕಲಾತ್ಮಕತೆಯನ್ನು, ಪೌರಾಣಿಕ ಪ್ರಜ್ಞೆಯನ್ನು ತಿಳಿಸುತ್ತದೆ. ಶ್ರೀತಿರುಮಲ ವೆಂಕಟರಮಣ ದೇವಾಲಯದ ಕಪ್ಪು ಶಿಲೆಯ ಗಜಲಕ್ಷ್ಮೀ ವಿಗ್ರಹ ಶಿಲ್ಪಿಗಳ ಕಲಾಕೌಶಲ್ಯಕ್ಕೆ ಉದಾಹರಣೆಯಾಗಿದೆ. ರಾಹುತ ಕೇರಿಯಲ್ಲಿರುವ ಶ್ರೀದೇವಿ ದೇವಸ್ಥಾನದ ವೀರಭದ್ರನ ಬೃಹತ್ ಪ್ರತಿಮೆ ಬೆರಗುಗೊಳಿಸುವಂತದ್ದು. ವೀರಭದ್ರನ ತಲೆಯ ಮೇಲಿರುವ ನಾಗಬಂಧದ ಮುಂಡಾಸು ಸೂಕ್ಷ್ಮ ಕುಸುರಿ ಕೆಲಸಗಳಿಂದ ಕೂಡಿದೆ. ಅಲ್ಲಿರುವ ಉರುಗಳ ಭವ್ಯತೆ, ಕೆತ್ತನೆ ಬಸರೂರಿನ ಕುಶಲಕರ್ಮಿಗಳ ಅಪೂರ್ವ ಕಲಾಕೌಶಲ್ಯವನ್ನು ಮತ್ತು ಸಾಂಸ್ಕೃತಿಕ ಪ್ರಜ್ಞೆಯನ್ನು ತಿಳಿಯುತ್ತದೆ. ಮೂಡ್ಲಕಟ್ಟೆ ಮನೆಯ ಪೋದಿಗೆಕಂಬಗಳ ಕಾಷ್ಠವೈಭವ, ಬಸರೂರಿನ ಬಂಡಸಾಲೆಮನೆಯ ಕಂಬಗಳ ವಿನ್ಯಾಸ, ಹರಿಕಾರರ ಮನೆಯ ಮುಚ್ಚಿಗೆಯ ಮೇಲ್ಭಾವಣಿಯ ಕೆತ್ತನೆ, ಬಸರೂರಿನ ಕಲಾವಿದರ ಕಲಾ ಶ್ರೀಮಂತಿಕೆಗೆ ಜೀವಂತ ಉದಾಹರಣೆಯಾಗಿದೆ. ಬಸರೂರಿನ ಗರಡಿಗಳಲ್ಲಿರುವ ಉರುಗಳನೈಜತೆ ಮತ್ತು ಬಣ್ಣಗಾರಿಕೆ ಇಲ್ಲಿನ ಕಲಾವಿದರ ಸೂಕ್ಷ್ಮತೆಯನ್ನು, ಅಭಿರುಚಿಯನ್ನು, ಧಾರ್ಮಿಕ ಶ್ರೀಮಂತಿಕೆಯನ್ನು ತಿಳಿಯುವಲ್ಲಿ ಸಹಕಾರಿಯಾಗಿದೆ.

### ೬.೧.೧. ಮರದಉರು ಮತ್ತು ಬಣ್ಣಗಾರಿಕೆ

ಬಸರೂರಿನ ಗುಡಿಗಾರರು ಉರುಗಳ ತಯಾರಿ ಮತ್ತು ಬಣ್ಣಗಾರಿಕೆಯಲ್ಲಿ ನಿಸ್ಸಿಮರು.

(ಚಿತ್ರ ೬)ಬಸರೂರು ಮತ್ತು ಅದರ ಸುತ್ತಲಿನ ಮಾಗಣೆಗಳಲ್ಲಿ ದೈವದಮೂರ್ತಿಗಳನ್ನು ಉರು ಎಂದು ಕರೆಯುತ್ತಾರೆ. ಹಲಸು ಮತ್ತು ಹೆಬ್ಬಲಸು ಮರಗಳಿಂದ ಉರುಗಳನ್ನು ತಯಾರಿಸುತ್ತಾರೆ. ಹೀಗೆ ಉರುಗಳನ್ನು ತಯಾರಿಸುವಾಗ ಪಾರಂಪರಿಕೆ ಜ್ಞಾನವನ್ನು ಬಳಸುತ್ತಾರೆ. ಹಾಲು ಒಸರುವ ಮರಗಳನ್ನು ಸಾಮಾನ್ಯವಾಗಿ ದೈವದ ಉರುಗಳ ತಯಾರಿಯಲ್ಲಿ ಬಳಸುತ್ತಾರೆ. ಅಲಂಕಾರಕ್ಕಾಗಿ ಚಂದನ, ಬೀಟಿ, ಗಂಧದಿಂದ ದೇವರ ಮೂರ್ತಿಗಳನ್ನು ತಯಾರಿಸಿ ಕೊಡುತ್ತಾರೆ. ದೈವದ ಉರುಗಳ ತಯಾರಿಗೆ ಹಲಸು ಮತ್ತು ಹೆಬ್ಬಲಸಿನ ಮರಗಳನ್ನು ಬಳಸುವ ಗುಡಿಗಾರರರು ಮರಗಳನ್ನು ಆಯ್ಕೆ ಮಾಡುವಾಗ ಹಾಳಾದ, ಗರ್ಭಬಂದ ಮರಗಳನ್ನು ಆಯ್ಕೆ ಮಾಡಿಕೊಳ್ಳುವುದಿಲ್ಲ. ಆಯ್ಕೆ ಮಾಡಿದ ಮರ ಉರುಮಾಡಲು ಯೋಗ್ಯವಾಗಿದೆ ಎಂದು ತಿಳಿದಾಗ ಮರಕ್ಕೆ ಪೂಜೆ ಮಾಡಿ ಉಳಿಯಿಂದ ಕಚ್ಚು ಹಾಕಿ ಬರುತ್ತಾರೆ.ಮರಕಡಿದು ತಂದು ಉರುಗಳನ್ನು ಯಾವ ಯಾವ ಪ್ರಮಾಣದಲ್ಲಿ ಮಾಡಬೇಕೆಂದು ನಿಶ್ಚಯಿಸಿ ಅಳತೆಗನುಗುಣವಾಗಿ ಮರವನ್ನು ಕತ್ತರಿಸುತ್ತಾರೆ. ಅಳತೆಗೆ ಸರಿಯಾಗಿ ಕತ್ತರಿಸಿದ ಮರದ ತುಂಡಿನ ಮೇಲೆ ಪಾರಂಪರಗತವಾಗಿ ಕಲಿತ ಜ್ಞಾನವನ್ನು ಉಪಯೋಗಿಸಿ ದೈವಗಳ ರೂಪದ ನಕ್ಷೆ ಬರೆದುಕೊಳ್ಳುತ್ತಾರೆ. ಇಲ್ಲಿ ಯಾವುದೇ ಪ್ರತಿಮಾಶಾಸ್ತ್ರವನ್ನು ಬಳಕೆ ಮಾಡಿಕೊಳ್ಳದೆ ಜನಪದರ ಕಲ್ಪನೆಯಂತೆ ದೇವರ ಉರುಗಳನ್ನು ಕೆತ್ತುತ್ತಾರೆ. ಅವರು ಕೆತ್ತುವ ದೈವಗಳು ಹೇಗಿರಬೇಕೆಂಬುದು ಅವರಿಗೆ ಮಾತ್ರ ತಿಳಿದಿರುತ್ತದೆ. ದೈವಗಳ ಉರು ಮಾಡುವಾಗ ಗುಡಿಗಾರರಿಗೆ ಪಾರಂಪರಿಕ ಜ್ಞಾನವೇ ಮುಖ್ಯವಾಗುತ್ತದೆ.ಚಿಕ್ಕು ಕನ್ನಡಿ ಹಿಡಿದಿರಬೇಕು. ಉಮಾಲ್ತಿಗೆ ಹಲ್ಲು ಹೊರಚಾಚಿರಬೇಕು, ಮಾಂಕಾಳಿ ನಾಲ್ಕು ಕೈಗಳ ಘೋರ ರೂಪ ಹೊಂದಿರಬೇಕು. ಉರು ಮಾಡಲು ಆಯ್ಕೆ ಮಾಡಿದ ಮರದ ತುಂಡಿನ ಮೇಲೆ ದೈವಗಳ ಚಿತ್ರವನ್ನು ಗುರುತು ಹಾಕಿಕೊಂಡು ಗುರುತಿನ ಹೊರಭಾಗವನ್ನು ಮೊದಲು ಕತ್ತರಿಸುತ್ತಾರೆ. ದೈವಗಳ ಆಕೃತಿ ಚಿತ್ರಿಸಿಕೊಂಡ ಮರದ ತುಂಡಿಗೆ ರೂಪಕೊಡಲು ತಲೆಯಿಂದ ಕೆತ್ತನೆ ಆರಂಭಿಸುತ್ತಾರೆ. ದೈವದ ಉರುವಿನ ತಲೆಯಿಂದ ಸೊಂಟದವರೆಗಿನ ಅಳತೆ, ಸೊಂಟದಿಂದ ಪಾದದವರೆಗಿನ ಅಳತೆ ಸಮಪ್ರಮಾಣದಲ್ಲಿರಬೇಕು. ಕೈಗಳಿಗೆ ಮಾತ್ರ ಸಂದುಹಾಕಬಹುದು.ಕಬ್ಬಿಣದ ಮೊಳೆಯನ್ನು ಉರುಗಳ ನಿರ್ಮಾಣದಲ್ಲಿ ಬಳಸುವಂತಿಲ್ಲ. ಮರದಿಂದ ಉರುವನ್ನು ಕೆತ್ತುವಾಗ ಆಭರಣವನ್ನು ಕೊನೆಗೆ ಕೆತ್ತುತ್ತಾರೆ. ಮರದ ತುಂಡು ತಮ್ಮ ಕಲ್ಪನೆಯ ರೂಪ ತಳೆದಮೇಲೆ ಬಣ್ಣಹಾಕಲು ಆರಂಭಿಸುತ್ತಾರೆ. ಮರದ ಉರುಗಳಿಗೆ ಬಣ್ಣ ಹಾಕುವಾಗಲೂ ಸ್ಥಳೀಯ ಜ್ಞಾನವನ್ನೆ ಬಳಸುತ್ತಾರೆ. ಸಾಮಾನ್ಯವಾಗಿ ಜನರ ಉಡುಗೆಯ ಅಭಿರುಚಿ ದೈವದ ಉರುಗಳ ಉಡುಗೆಯಾಗಿರುತ್ತದೆ, ಕಿವಿಯ ಮತ್ತು ಕೊರಳಿನ ಆಭರಣವಾಗಿರುತ್ತದೆ. ಹೆಣ್ಣು ದೈವಕ್ಕೆ ಕೆಂಪುಸೀರೆ ಹಸಿರುಸೀರೆಗಳ ಬಣ್ಣವನ್ನು ಹಾಕಲಾಗುತ್ತದೆ. ಮೊದಲು ಕಲ್ಲು ಮುಂತಾದವುಗಳಿಂದ ಮಾಡಿದ ಪ್ರಕೃತಿದತ್ತವಾದ ಬಣ್ಣ ಬಳಸುತ್ತಿದ್ದರು. ಈಗ

ತೈಲವರ್ಣವನ್ನು ಬಳಸುತ್ತಾರೆ. ಉರುಗಳ ತಲೆ, ದೇಹದ ಪ್ರಮಾಣದ ಕಾಲು ಭಾಗದಷ್ಟಿರುತ್ತದೆ. ಬಣ್ಣ ಹಾಕಿ ಪ್ರತಿಷ್ಠಾಪಿಸಲು ಸಿದ್ಧವಾದ ಉರುವಿಗೆ ಕಣ್ಣುಬಿಡಿಸುವ ಧಾರ್ಮಿಕ ವಿಧಿವಿಧಾನವಿದೆ. ಕಣ್ಣು ಬಿಡಿಸುವುದೆಂದರೆ ದೈವದ ಉರುಗಳಿಗೆ ಜೀವಕೊಡುವುದು. ದೈವದ ಉರುಗಳಿಗೆ ಕಣ್ಣು ಬಿಡಿಸಿ ಗುಡಿಗಾರರು ದೈವಸ್ಥಾನದ ಮುಕ್ತೇಸರರಿಗೆ ನೀಡಿದ ಮೇಲೆ ಆ ಉರು ಪೂಜೆಗೆ ಅರ್ಹವಾಗುತ್ತದೆ. ಆದರೆ ಇಂದು ಆ ಜಾಗವನ್ನು ವೈದಿಕ ಆಚರಣೆಗಳು ಆಕ್ರಮಿಸಿದೆ.

ಕಣ್ಣು ಬಿಡಿಸುವ ದಿನವೇ ದೈವದ ಪ್ರತಿಷ್ಠೆಯ ದಿನವಾಗಿರುತ್ತದೆ. ಆ ದಿನ ರಾತ್ರಿ ನಡೆಯುವ ಧಾರ್ಮಿಕ ಕಾರ್ಯ ಕಣ್ಣು ಬಿಡಿಸುವುದು ಅಥವಾ ಕಲೆಏರಿಸುವುದು.ದೈವದ ಮನೆಗೆ ಸಂಬಂಧಿಸಿದವರು ಪ್ರತಿಯೊಂದು ದೈವವನ್ನು ಮುಚ್ಚಲು ಹೊಸಬಟ್ಟೆ ತರಬೇಕು. ಹೆಣ್ಣುದೈವಗಳಿಗೆ ಸೀರೆ, ಗಂಡುದೈವಗಳಿಗೆ ಪಂಚೆ. ಗುಡಿಗಾರರು, ದೈವವನ್ನು ,ಮಾಗಣೆಯ ದೇವರುಗಳನ್ನು ಪ್ರಾರ್ಥಿಸಿ ಪ್ರತಿದೈವದ ಉರುಗಳು ಬೇರೆಯವರಿಗೆ ಕಾಣದಂತೆ ಬಟ್ಟೆಯಿಂದ ಮುಚ್ಚುತ್ತಾರೆ. ಹೀಗೆ ಮುಚ್ಚಿದ ಬಟ್ಟೆಯ ಒಂದು ತುದಿಯನ್ನು ಗುಡಿಗಾರನು ತೆರೆದು ತಾನು ಮುಸುಕು ಹಾಕಿಕೊಂಡು ಚಿನ್ನದ ಸೂಜಿಯಿಂದ ಉರುಗಳ ಕಣ್ಣಿನ ಗೊಂಬೆಯ ಭಾಗಕ್ಕೆ ಬಣ್ಣವನ್ನು ಬರೆಯುತ್ತಾರೆ. ಹೀಗೆ ಎಲ್ಲಾ ದೈವದ ಉರುಗಳಿಗೆ ಕಣ್ಣುಬಿಡಿಸಿದ ಮೇಲೆ ಸಂಬಂಧಪಟ್ಟವರಿಗೆ ದೈವಗಳನ್ನು ಬಿಟ್ಟುಕೊಡುತ್ತಾರೆ. ಗುಡಿಗಾರ ದೈವಗಳನ್ನು ಬಿಟ್ಟುಕೊಟ್ಟ ಮೇಲೆ ಸಂಬಂಧ ಪಟ್ಟವರು ಮುಂದಿನ ಧಾರ್ಮಿಕ ವಿಧಿಗಳನ್ನು ನಡೆಸುತ್ತಾರೆ. ಕಣ್ಣು ಬಿಡಿಸಿದ ಗುಡಿಗಾರನಿಗೆ ಮರ್ಯಾದೆಯಾಗಿ ಅಕ್ಕಿ, ಕಾಯಿ, ವೀಳ್ಯ ನೀಡುತ್ತಾರೆ.

೬.೧.೨.ಬಾಸಿಂಗ ತಯಾರಿ

ಬಸರೂರಿನ ಗುಡಿಗಾರರು ಬಾಸಿಂಗ ತಯಾರಿಸುವ ಕೆಲಸವನ್ನು ಮಾಡುತ್ತಾರೆ. ಇವರು ತಯಾರಿಸುವ ಬಾಸಿಂಗಕ್ಕೆ ಅತ್ಯಂತ ಪಾವಿತ್ರ್ಯತೆ ಇದೆ. ಜನಪದ ಗೀತೆಗಳು ಗುಡಿಗಾರರ ಬಾಸಿಂಗವನ್ನು ಹಾಡಿಹೊಗಳಿದೆ. ಮದುವೆಯಲ್ಲಿ ಮದುಮಕ್ಕಳಿಗೆ ಬಾಸಿಂಗ ಕಟ್ಟುವ ಸಂಪ್ರದಾಯ ಇಂದಿಗೂ ಇದೆ. ಬಾಸಿಂಗವನ್ನು ಗುಡಿಗಾರರು ಬೆಂಡು ಬೇಗಡಿಯಿಂದ ತಯಾರಿಸುತ್ತಿದ್ದರು. ಈಗ ಬಾಸಿಂಗಕ್ಕೆ ಬೇಡಿಕೆ ಕಡಿಮೆಯಾಗಿದೆ. ಈಗ ಗಣಪತಿ ವಿಗ್ರಹಕ್ಕೆ ಬೇಡಿಕೆ ಇರುವುದರಿಂದ ಗಣಪತಿ ವಿಗ್ರಹಗಳನ್ನು ಮಾಡುತ್ತಾರೆ.

## ೬.೨. ಜನಪದವಾಸ್ತು

ಜನರ ವಾಸದ ಇತಿಹಾಸವನ್ನು ಜನಪದ ವಾಸ್ತುವೆಂದು ಕರೆಯಬಹುದಾಗಿದೆ. ಒಂದು ಪ್ರದೇಶದ ಜನರ ಬದುಕು ಮತ್ತು ಸಂಸ್ಕೃತಿಯನ್ನು ವಿವೇಚಿಸುವಾಗ ಜನಪದ ವಾಸ್ತು ಶಿಲ್ಪವು ಪ್ರಮುಖ ಪಾತ್ರವಹಿಸುತ್ತದೆ. ಯಾವುದೆ ಒಂದು ಪ್ರದೇಶದ ಸಾಂಸ್ಕೃತಿಕ

ಅವಸ್ಥಾಂತರಗಳಿಗೂ ಜನಪದ ವಾಸ್ತುಶಿಲ್ಪಕ್ಕೂ ನಿಕಟವಾದ ಸಂಬಂಧವಿದೆ. ಕೃಷಿಸಂಸ್ಕೃತಿ, ವ್ಯಾಪಾರಿಸಂಸ್ಕೃತಿ, ಕುಶಲಕರ್ಮಿಗಳ ಸಂಸ್ಕೃತಿಯ ಹಿನ್ನೆಲೆಯಲ್ಲಿ ರೂಪಗೊಂಡ ಮನೆಗಳು, ಸಾಕುಪ್ರಾಣಿಗಳ ಆವಾಸ, ಕೃಷಿಉತ್ಪನ್ನ ದಾಸ್ತಾನುಕೋಣೆ ಅವರವರ ಆರ್ಥಿಕ ಸಾಮಾಜಿಕ, ಧಾರ್ಮಿಕ, ಅಂತಸ್ತಿಗೆ ಅನುಗುಣವಾಗಿ ನಿರ್ಮಾಣಗೊಂಡಿರುತ್ತದೆ. ಪ್ರದೇಶವೊಂದರ ಜನಸಮುದಾಯದ ವಾಸ್ತು ಅಭಿರುಚಿಯನ್ನು ತಿಳಿದುಕೊಳ್ಳಲು ಮನೆಗಳು, ದೈವಸ್ಥಾನ, ಗರಡಿ ಮುಂತಾದವುಗಳು ಸಹಕಾರಿಯಾಗುತ್ತದೆ."ಒಂದು ನಿರ್ದಿಷ್ಟ ಪ್ರದೇಶದ ಜನಸಮುದಾಯ ತಮ್ಮ ಜನಸಮುದಾಯದ ದೃಷ್ಟಿ ಮತ್ತು ಲೋಕದೃಷ್ಟಿಯನ್ನು ಅನುಲಕ್ಷಿಸಿ ಭೌತಿಕ ಸಂಸ್ಕೃತಿಯನ್ನು ನಿರ್ಮಿಸಿಕೊಳ್ಳುತ್ತ ಬರುತ್ತದೆ. ಇಂತಹ ಭೌತಿಕ ಸಂಸ್ಕೃತಿಯ ಆವರಣದೊಳಗೆ ಮನೆಗಳರಚನೆ, ಆವರಣ, ಕೆತ್ತನೆ ಕೆಲಸ ಮುಂತಾದವುಗಳು ಒಳಗೊಂಡಿರುತ್ತದೆ. ನೆಲದ ಮೇಲೆ ವಸ್ತುಗಳನ್ನು ಬಳಸಿ ವಿಶಿಷ್ಟ ವಿನ್ಯಾಸದೊಂದಿಗೆ ನಿರ್ಮಿಸಿದ ರಚನೆಗಳು ವಾಸ್ತುಶಿಲ್ಪ ಎನಿಸಿಕೊಳ್ಳುತ್ತದೆ"(ಪ್ರಕಾಶ ಚಂದ್ರಶಿಶಿಲ;೧೯೯೫;ಪುಟ.೨೧೮). ಜನಪದರು ವಾಸಿಸುವ ಭೌಗೋಳಿಕಪರಿಸರ, ಪ್ರಾದೇಶಿಕತೆ, ಸಸ್ಯವರ್ಗ, ಜನಸಮುದಾಯದ ಜೀವನಾವರ್ತನ ಮತ್ತು ವಾರ್ಷಿಕಾವರ್ತನ ಆಚರಣಾತ್ಮಕ ಸಂಪ್ರದಾಯಗಳು, ಕೃಷಿಸಂಬಂಧಿ ಮತ್ತು ವೃತ್ತಿ ಸಂಬಂಧಿ ಕಸುಬುಗಳಿಗೂ ಜನಪದವಾಸ್ತುವಿಗೂ ನಿಕಟ ಸಂಬಂಧವಿದೆ. ಬಸರೂರು ವಿವಿಧ ಕಾಲಘಟ್ಟದಲ್ಲಿ ಬೇರೆಬೇರೆ ಆಡಳಿತಾಧಿಕಾರಿಗಳ ಮತ್ತು ಅರಸರ ನೇರ ಮತ್ತು ಪರೋಕ್ಷ ಆಡಳಿತಕ್ಕೆ ಒಳಪಟ್ಟ ಪ್ರದೇಶವಾಗಿದೆ.ಇಲ್ಲಿನ ಸ್ಥಳೀಯ ಆಡಳಿತ ವ್ಯವಸ್ಥೆಯನ್ನು ವ್ಯಾಪಾರಿಗಳು, ಭೂಮಾಲಕರು ನೋಡಿಕೊಳ್ಳುತ್ತಿದ್ದರು.ತಮ್ಮ ಸಾಮಾಜಿಕ ಸ್ಥಾನಮಾನಗಳಿಗೆ ಅನುಗುಣವಾಗಿ ಭೌತಿಕಸಂಸ್ಕೃತಿಯನ್ನು ನಿರ್ಮಿಸಿಕೊಳ್ಳುತ್ತಿದ್ದರು.

ಬಸರೂರು ಕರಾವಳಿ ಕರ್ನಾಟಕದ ಪ್ರಮುಖ ವ್ಯಾಪಾರಿ ಕೇಂದ್ರ ಮತ್ತು ಕೃಷಿಸಂಸ್ಕೃತಿಯನ್ನು ಹೊಂದಿರುವ ಪ್ರದೇಶ. ಇಲ್ಲಿನ ವ್ಯಾಪಾರಿಗಳು ದೇಶ ವಿದೇಶಗಳಲ್ಲಿ ವ್ಯಾಪಾರ ವ್ಯವಹಾರ ನಡೆಸುತ್ತಿದ್ದರು ಮತ್ತು ಅವರು ಅತ್ಯಂತ ಶ್ರೀಮಂತರಾಗಿದ್ದರು. ಬಸರೂರಿನ ಭೂಮಾಲಕರು ವಿವಿಧ ಬಗೆಯ ಕೃಷಿ ಉತ್ಪನ್ನಗಳನ್ನು ಬೆಳೆದು ಮಾರಾಟ ಮಾಡುತ್ತಿದ್ದರು. ಈ ಎರಡು ವರ್ಗದವರು ಬಸರೂರಿನ ಆಡಳಿತ ಮತ್ತು ಧಾರ್ಮಿಕ ವ್ಯವಹಾರಗಳನ್ನು ನೋಡಿಕೊಂಡು ಹೋಗುತ್ತಿದ್ದರು. ದಾನದತ್ತಿಗಳು ಶಿಕ್ಷೆ ಮತ್ತು ದಂಡ ಇವರ ಸಮ್ಮುಖದಲ್ಲಿ ನಡೆಯುತ್ತಿತ್ತು ಎಂಬುವುದಕ್ಕೆ ಶಾಸನ ಆಧಾರಗಳಿವೆ.ಶ್ರೇಣಿಕೃತ ಸಮಾಜದಲ್ಲಿ ಮೇಲ್ತುದಿಯಲ್ಲಿರುವ ಈ ಜನವರ್ಗದ ಅಭಿರುಚಿ ಇತರರಿಗಿಂತ ಭಿನ್ನವಾಗಿರುತ್ತಿದ್ದವು. ಅವರು ಬಯಸುವ ಭೌತಿಕಸಂಸ್ಕೃತಿ ಭೂರಹಿತನ ಭೌತಿಕ ಸಂಸ್ಕೃತಿಗಿಂತ ಭಿನ್ನವಾಗಿರುತ್ತದೆ.

ಬಸರೂರಿನಲ್ಲಿ ಬಂಟರು ಮತ್ತು ಗೌಡ ಸಾರಸ್ವತರು ಮೇಲ್‌ಸ್ತರದ ಸಾಮಾಜಿಕ ಬದುಕನ್ನು ನಡೆಸಿಕೊಂಡು ಬಂದಿರುವುದು ಅವರ ಮನೆಗಳ ನಿರ್ಮಾಣದಲ್ಲಿ ವಹಿಸಿದ ಆಸಕ್ತಿಯಿಂದ ತಿಳಿಯುತ್ತದೆ. ಈ ಬಗೆಯ ಭೌತಿಕಸಂಸ್ಕೃತಿಯನ್ನು ನಿರ್ಮಿಸಿಕೊಡುವ ಕುಶಲಕರ್ಮಿಗಳಿಗೆ ಬಸರೂರಿನಲ್ಲಿ ಕೊರತೆ ಇರಲಲ್ಲ ಎಂಬುದು ವಾಸ್ತವ. ಕುಶಲಕರ್ಮಿಗಳು ಬದುಕನ್ನು ಹುಡುಕುತ್ತ ಈ ಪ್ರದೇಶಕ್ಕೆ ವಲಸೆ ಬಂದವರು. ಇವರ ಬದುಕಿಗೆ ಆಧಾರವಾಗಿರುವ ಭೂಮಾಲಿಕರ,ವ್ಯಾಪಾರಿಗಳ ಸಾಮಾಜಿಕ ಅಂತಸ್ತಿಗೆ, ಆರ್ಥಿಕ ಸ್ಥಿತಿಗನುಗುಣವಾಗಿ ಮನೆ, ಆಭರಣ, ಉಡುಗೆ, ತೊಡುಗೆಗಳನ್ನು ನಿರ್ಮಿಸಿಕೊಡುತ್ತಿದ್ದರು.

ಬಸರೂರು ದೇವಾಲಯಗಳ ಪಟ್ಟಣ. ಈ ದೇವಾಲಯಗಳ ಪೂಜೆ ಪುರಸ್ಕಾರಗಳು ನಡೆದುಕೊಂಡು ಹೋಗಲು ಮತ್ತು ಪಾಠಶಾಲೆಗಳನ್ನು ನಡೆಸಲು ಆ ಕಾಲದ ಅರಸರು, ಆಡಳಿತಾಧಿಕಾರಿಗಳು ಬೇರೆ ಬೇರೆ ಪ್ರಬೇಧದ ಬ್ರಾಹ್ಮಣರನ್ನು ಬಸರೂರಿಗೆ ಕರೆಯಿಸಿಕೊಂಡು ಎರಡು ಅಗ್ರಹಾರಗಳನ್ನು ನಿರ್ಮಿಸಿಕೊಟ್ಟಿದ್ದರು. ಬ್ರಾಹ್ಮಣರ ಅಭಿರುಚಿ ಮಡಿವಂತಿಕೆಗೆ ಅನುಗುಣವಾಗಿ ಭೌತಿಕವಸ್ತುಗಳು ನಿರ್ಮಾಣಗೊಂಡಿರುತ್ತವೆ. ಇನ್ನು ಕುಶಲಕರ್ಮಿಗಳ ಮನೆಗಳು ಮತ್ತು ಅವರ ಬದುಕಿಗೆ ಆಧಾರವಾಗಿರುವ ಕಸುಬು ನಡೆಸುವ ಸಂರಚನೆಗಳು ಅವರ ಆರ್ಥಿಕ, ಸಾಮಾಜಿಕ ಸ್ಥಿತಿಗನುಗುಣವಾಗಿರುತ್ತದೆ. ಪ್ರತಿಯೊಂದು ಸಮುದಾಯದ ಮನೋಧರ್ಮವನ್ನು ಬಿಂಬಿಸುವ ಜನಪದವಾಸ್ತುಶಿಲ್ಪವು ಭೌತಿಕಸಂಸ್ಕೃತಿಯ ಒಂದು ಅಂಗವಾಗಿದೆ.

"ಈ ಜನಪದ ವಾಸ್ತುಶಿಲ್ಪವು ಒಳಗೊಳ್ಳುವ ಅನೇಕ ವಿಷಯಗಳಲ್ಲಿ ಮನೆ ಕೂಡಾ ಒಂದಾಗಿದೆ. ಜನಪದರಿಗೆ ಮನೆಯೆಂದರೆ ಕೇವಲ ವಾಸಿಸುವ ಜಾಗ ಮಾತ್ರವಲ್ಲ ಅವರ ಒಟ್ಟು ಸಂಸ್ಕೃತಿಯನ್ನು ಪೋಷಿಸುವ ನೆಲೆಯೂ ಹೌದು"(ಪ್ರಕಾಶ ಚಂದ್ರ ಶಿಶಿಲ; ೧೯೯೫;ಪುಟ:೨೮೭).

ಬಸರೂರಿನಲ್ಲಿ ಪ್ರಸ್ತುತ ಮೂನ್ನೂರು ವರ್ಷಗಳ ಇತಿಹಾಸವಿರುವ ಮನೆಗಳನ್ನು ಮೇಲ್ನೋಟಕ್ಕೆ ಗುರುತಿಸಬಹುದು. ಈ ಮನೆಗಳು ಮತ್ತು ಅವುಗಳ ಸಂರಚನೆ ಮತ್ತು ಮನೆಗಳ ನಿರ್ಮಾಣದಲ್ಲಿನ ದೇಶಿಯಜ್ಞಾನ, ಸ್ಥಳಿಯ ವಸ್ತುಗಳ ಬಳಕೆ, ಕುಶಲಕರ್ಮಿಗಳ ಕೈಚಳಕ, ಭೌಗೋಳಿಕ ಹಿನ್ನೆಲೆಯ ಪ್ರಭಾವ ಮತ್ತು ಸಾಂಸ್ಕೃತಿಕ, ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ರಕ್ಷಣೆಯ ಉದ್ದೇಶಗಳು ಗಮನದಲ್ಲಿರಿಸಿಕೊಂಡು ಸ್ಥೂಲವಾಗಿ ಅಧ್ಯಯನ ಮಾಡಲಾಗಿದೆ. ಇಲ್ಲಿ ಬಸರೂರು, ಮೂಡ್ಲಕಟ್ಟೆ, ಕಂದಾವರ, ಆನಗಳ್ಳಿಗಳಲ್ಲಿರುವ ಮನೆಗಳನ್ನು ಅನುಲಕ್ಷಿಸಿಲಾಗಿದೆ. ಈ ಅಧ್ಯಾಯದಲ್ಲಿ ಮನೆಗಳ ನಿರ್ಮಾಣವನ್ನು ಬಿಡಿಬಿಡಿಯಾಗಿ ನೋಡದೆ ಇಡಿಯಾಗಿ ನೋಡುವ ಮೂಲಕ ಬಸರೂರಿನ ಸಂಸ್ಕೃತಿಯನ್ನು ಗ್ರಹಿಸಲು ಪ್ರಯತ್ನಿಸಲಾಗಿದೆ.

೬.೨.೧.ದೊಡ್ಮನೆಗಳು

ಬಸರೂರಿನ ದೊಡ್ಮನೆ ಎಂದರೆ ಮೂಡ್ಲಕಟ್ಟೆ ದೊಡ್ಮನೆ. ಈ ಮನೆ ಹೆಸರಿಗೆ ತಕ್ಕಂತೆ ದೊಡ್ಡದಾಗಿದೆ. ಸಾಮಾನ್ಯವಾಗಿ ದೊಡ್ಡಮನೆಗಳಲ್ಲಿ ಮನೆ ಮತ್ತು ಹೆಬ್ಬಾಗಿಲು ಎಂಬ ಎರಡು ಭಾಗಗಳಿರುತ್ತದೆ. ಮೊದಲ ಭಾಗವೇ ಹೆಬ್ಬಾಗಿಲು. ಇದು ಮನೆಗೆ ಮುಖ ಮಂಟಪ ಇದ್ದಂತೆ. ೧೨ ಅಂಕಣದಿಂದ ಕೂಡಿರುವ ಈ ಮನೆಗಳು ಮೂರು ಹಂತಗಳಲ್ಲಿ ಮೇಲೇಳುತ್ತದೆ. ನೆಲದ ಹಂತ ಮೊದಲನೇಯದಾದರೆ ಇನ್ನುಳಿದವು ಚಾವಡಿಗಳು. ಮನೆಯ ಗಾತ್ರದ ಹಿನ್ನೆಲೆಯಲ್ಲಿ ಈ ಮನೆಗೆ ದೊಡ್ಮನೆ ಎಂಬ ಹೆಸರು ಬಂದಿದೆ. ಜೊತೆಗೆ ಅವರ ಸಾಮಾಜಿಕ ಅಂತಸ್ತನ್ನು ಸೂಚಿಸುತ್ತದೆ. ಮನೆಯು ದೊಡ್ಡಮನೆಯಾದರೂ ಪ್ರವೇಶಕ್ಕೆ ಹೆಬ್ಬಾಗಿಲು.ದೊಡ್ಡ ಮನೆಯ ಪ್ರವೇಶವು ಹೆಬ್ಬಾಗಿಲಿನಿಂದ ಆರಂಭವಾಗುತ್ತದೆ. ಈ ಹೆಬ್ಬಾಗಿಲಿನ ಹೊರಭಾಗವನ್ನು ಹೊರಹೆಬ್ಬಾಗಿಲೆಂದು, ಒಳಭಾಗವನ್ನು ರಾಜಾಂಗಣವೆಂದು ಹೆಸರಿಸುವುದುಂಟು. ರಾಜಾಂಗಣದ ಪ್ರವೇಶಕ್ಕೆ ಒಳ ಪ್ರಾಂಗಣದಿಂದ ಕಿರಿದಾದ ಹೆಬ್ಬಾಗಿಲು ಇದೆ. ಇದನ್ನು ದಾಟಿ ನಡೆದರೆ ವಿಶಾಲವಾದ ರಾಜಾಂಗಣ. ಈ ರಾಜಾಂಗಣ ಆಯತಾಕಾರದಲ್ಲಿದ್ದು, ಹನ್ನೆರಡು ಬೃಹತ್ ಕಂಬಗಳನ್ನು ಹೊಂದಿದೆ. ಪ್ರತಿಯೊಂದು ಕಂಬಕ್ಕೂ ಬ್ರಹ್ಮ, ವಿಷ್ಣು, ರುದ್ರಕಾಂತ ಎಂಬ ಮೂರು ಭಾಗಗಳಿವೆ. ರುದ್ರಕಾಂತದ ಪೂರ್ಣ ಭಾಗ,ವಿಷ್ಣುಕಾಂತದ ಅರ್ಧ ಭಾಗ ಎಂಟು ಮುಖಗಳನ್ನು ಹೊಂದಿದೆ. ಈ ವಜ್ರಮುಖಿ ಸ್ಥಂಭ ಭಾಗವು ವೃತ್ತಾಕಾರವಾಗಿದ್ದು ಹನ್ನೆರಡು ನಮೂನೆಯ ಪಟ್ಟಿಕಾ ಭಾಗವನ್ನು ಹೊಂದಿದೆ. ಕುಂಭ, ವಜ್ರ ಮತ್ತು ಹಂಸ ಪಟ್ಟಿಕೆಗಳು ಇವೆ. ಇದರ ಶಿರದಲ್ಲಿ ಎಂಭತ್ತು ಕೋನಗಳುಳ್ಳ ಸ್ತಂಭಾಕೃತಿಯನ್ನು ಕೆತ್ತಲಾಗಿದೆ. ಕೆಳಭಾಗದಲ್ಲಿ ಛತ್ರಿಯ ಆಕೃತಿ ಮತ್ತು ಮೇಲೆ ನಾಲ್ಕು ಮುಖಗಳುಳ್ಳ ಬೋಧಿಗೆ. ಪ್ರತಿಯೊಂದು ಮುಖದಲ್ಲೂ ಕೆಳಮುಖವಾಗಿ ಕೆತ್ತಲ್ಪಟ್ಟ ಹೂವಿನ ಗೊಂಡೆ. ಒಂದು ಕಂಬದಿಂದ ಮತ್ತೊಂದು ಕಂಬಕ್ಕೆ ಬೃಹತ್ ತೊಲೆಗಳಿಂದ ಜೋಡಿಸಲಾಗಿದೆ.(ಚಿತ್ರ ೭)

ರಾಜಾಂಗಣಕ್ಕೆ ಮೋಹಕ ಮೊಗಸಾಲೆ ಇದೆ. ಇದರ ಮುಂದೆ ಮೂರು ಮುಖಗಳುಳ್ಳ ಮಂಟಪಗಳಿವೆ. ಇಲ್ಲಿರುವ ಕಂಬಗಳು ಸರಳವಾಗಿದೆ. ಮೊಗಸಾಲೆಯ ಮುಚ್ಚಿಗೆ ಮತ್ತು ಸೂರು ಇಳಿಜಾರಾಗಿದೆ. ಮೊಗಸಾಲೆಯ ಮಾಡಿನ ಮುಚ್ಚಿಗೆಯ ಕೆತ್ತನೆ ಅಪೂರ್ವವಾಗಿದೆ. ರಾಜಾಂಗಣಕ್ಕೆ ತಾಗಿದಂತೆ ದೇವರ ಕೋಣೆಗೆ ಹೋಗುವ ದ್ವಾರಬಾಗಿಲು ಇದೆ. ರಾಜಾಂಗಣವು ಜಮೀನ್ದಾರರ ಅಂತಪುರವಾಗಿರಬೇಕು. ಆದರೆ ನ್ಯಾಯಪಂಚಾಯಿತಿಕೆ ಹೊರ ಹೆಬ್ಬಾಗಿಲಿನಲ್ಲಿಯೇ ನಡೆಯುತ್ತಿದ್ದಿತ್ತು. ರಾಜಾಂಗಣದಿಂದ ಎರಡು ಕೋಣೆಗಳಿಗೆ ಪ್ರವೇಶಿಸಲು ಬಾಗಿಲುಗಳಿವೆ ಈ ಕೋಣೆಗಳು ಮಲಗುವ ಕೋಣೆಗಳು. ದೇವರ ಕೋಣೆಯ ಇಡಿ ದ್ವಾರ ಎರಡು ಹಂತಗಳಿಂದ ಕೂಡಿದ್ದು ಪದ್ಮ, ಹಂಸ, ಲತಾಪಟ್ಟೆಗಳನ್ನು ಹೊಂದಿದೆ.

ದೇವರ ಕೋಣೆಯ ಪೂರ್ವಕ್ಕೆ ದೈವಭೂತಗಳಿಗೆ ಮೀಸಲಿಡುವ ಕೋಣೆಯಿದೆ. ಇದು ಅಡುಗೆ ಮನೆಗೆ ಪಶ್ಚಿಮದಲ್ಲಿದೆ. ರಾಜಾಂಗಣದಿಂದ ಪೂರ್ವ ಆಗ್ನೇಯದಲ್ಲಿ ಅಡುಗೆ ಮನೆ ಇದೆ. ರಾಜಾಂಗಣದಿಂದಲೇ ಮನೆಯ ಉಪ್ಪರಿಗೆಗೆ ಹೋಗುವ ಮೆಟ್ಟಿಲುಗಳಿವೆ. ಉಪ್ಪರಿಗೆಯಲ್ಲಿಯೂ ವಿಶಾಲವಾದ ಎರಡು ಕೋಣೆಗಳಿವೆ. ರಾಜಾಂಗಣದ ಮೊಗಸಾಲೆಯ ಪಕ್ಕದಲ್ಲಿಯೇ ಹೆಬ್ಬಾಗಿಲು ಉಪ್ಪರಿಗೆಗೆ ಹೋಗುವ ಮರದ ಮೆಟ್ಟಿಲಿದೆ. ಹೆಬ್ಬಾಗಿಲಿನಷ್ಟೆ ಅಂಕಣದ ಕೋಣೆಗಳು ಉಪ್ಪರಿಗೆ ಮೇಲಿದೆ. ಅಡುಗೆ ಮನೆಯ ಪೂರ್ವ ಈಶಾನ್ಯದಲ್ಲಿ ಊಟದ ಕೋಣೆಯಿದೆ. ಊಟದ ಕೋಣೆಯ ಹೊರಭಾಗದಲ್ಲಿ ಬಾವಿಕಟ್ಟೆ, ಬಾವಿಯ ಪಕ್ಕದಲಿ ಪಶ್ಚಿಮಾಭಿಮುಖವಾಗಿ ತುಳಸಿಕಟ್ಟೆ ಇದೆ. ಈ ಮನೆಯ ಪೂರ್ವ ಭಾಗದಲ್ಲಿ ಹಟ್ಟಿ ಇದೆ. ಹಟ್ಟಿಯು ದಕ್ಷಿಣ ಉತ್ತರವಾಗಿದ್ದು ಹಟ್ಟಿಯ ಹೊರಬಾಗಿಲು ಬೇಸಾಯದ ಗದ್ದೆಯ ಕಡೆಗಿದೆ. ಹೆರಿಗೆಕೋಣೆ ಮನೆಯಿಂದ ಹೊರಗಿದ್ದು ಪೂರ್ವ ಈಶಾನ್ಯದಲ್ಲಿದೆ. ಈ ಕೋಣೆಗಿಂತ ಹತ್ತು ಅಡಿ ತಗ್ಗಿನ್ನಲ್ಲಿ ಬಾಣಂತಿ ಉಪಚಾರಕ್ಕೆ ಬೇಕಾದ ವ್ಯವಸ್ಥೆಯಿದೆ. ಪೂರ್ವ ಆಗ್ನೇಯವು ಬಚ್ಚಲುಮನೆ, ಕಟ್ಟಿಗೆ ಕೂಡುವ ಜಾಗವನ್ನು ಹೊಂದಿದೆ. ವಾಯುವ್ಯದಲ್ಲಿ ಕೃಷಿದಾಸ್ತಾನು ಕೋಣೆ ಇದೆ. ಮನೆ ಮತ್ತು ಹೆಬ್ಬಾಗಿಲನ್ನು ಸುತ್ತುವರಿದ ಪಾಗಾರವಿದೆ. ಮನೆಯ ಈಶಾನ್ಯದಲ್ಲಿ ದಿಡ್ಡಿಬಾಗಿಲು ಇದೆ. ಈ ಬಾಗಿಲಿನ ಮೂಲಕವೇ ಮುಟ್ಟಾಳುಗಳು ಮತ್ತು ಇತರರು ಒಳಪ್ರವೇಶ ಮಾಡಬಹುದು. ಅಲ್ಲಿಂದ ನೇರಕ್ಕೆ ಕಂಬಳಗದ್ದೆ ಕಾಣುತ್ತದೆ.

ಈ ಮನೆಗಳಿಗೆ ನಿರ್ದಿಷ್ಟವಾದ ಸ್ವರೂಪವಿಲ್ಲ. ಸಾಮಾನ್ಯವಾಗಿ ಎಲ್ಲಾ ದೊಡ್ಮನೆಗಳು ಇದೆ ವಿನ್ಯಾಸದಲ್ಲಿ ಇರುವುದಿಲ್ಲ. ವಿಶೇಷವಾಗಿ ಬಸರೂರಿನ ಮೂಡ್ಲಕಟ್ಟೆ ದೊಡ್ಮನೆ ಸ್ವರೂಪ ಅತ್ಯಂತ ವಿಶಿಷ್ಟವಾದುದು. ಸಾಮಾನ್ಯವಾಗಿ ಇಂತಹ ಮನೆಗಳು ಭೂಮಾಲಿಕರ ಮನೆಗಳಾಗಿರುತ್ತಿದ್ದವು. ಬಸರೂರಿನ ಮೂಡ್ಲಕಟ್ಟೆ ಮನೆಯ ರಚನೆಯ ವಿನ್ಯಾಸವನ್ನು ಗಮನಿಸಿದರೆ ಸಿರಿಪಾಡ್ದನದ ಬಸರೂರು ಗುತ್ತಿನಮನೆಯಂತೆ ಭಾಸವಾಗುತ್ತದೆ. ಈ ಮನೆಯಲ್ಲಿ ಮನೆ ಮತ್ತು ಹೆಬ್ಬಾಗಿಲು ಎರಡು ದೊಡ್ಡದಾಗಿದ್ದು ಕಲಾತ್ಮಕತೆಯಿಂದ ಕೂಡಿದೆ. ಮನೆಯ ಮುಖ ಭಾಗವು ಉತ್ತರ ದಿಕ್ಕಿಗೆ ತೆರೆದುಕೊಂಡಿದೆ.

### ೬.೨.೨. ಹೆಬ್ಬಾಗಿಲು ಮನೆಗಳು

ಮನೆಯ ಮುಖ್ಯಬಾಗಿಲಿನ ಗಾತ್ರದ ಹಿನ್ನೆಲೆಯಲ್ಲಿ ಈ ಮನೆಗೆ ಹೆಬ್ಬಾಗಿಲು ಎಂಬ ವಿಶೇಷಣ ಸೇರಿಕೊಂಡು ಹೆಬ್ಬಾಗಿಲುಮನೆ ಎಂದಾಗಿದೆ. ಗಾತ್ರದಲ್ಲಿ ದೊಡ್ಡದಾಗಿರುವ ರಚನೆ ಬಂಟರ ಮನೆಗಳಾಗಿದ್ದು, ಶ್ರೇಣಿಕೃತ ಸಮಾಜವ್ಯವಸ್ಥೆಯ ಮೇಲ್‌ಸ್ತರದ ಜನಸಮುದಾಯ ಈ ಮನೆಯನ್ನು ನಿರ್ಮಿಸಿಕೊಂಡಿರುವುದನ್ನು ಕಾಣಬಹುದು. ಈ ಮನೆಯ ಪ್ರವೇಶವು ಹೆಬ್ಬಾಗಿಲಿನಿಂದಲೇ ಆರಂಭವಾಗುವುದು. ಹೆಬ್ಬಾಗಿಲಿನ ಹೊರಭಾಗವನ್ನು ಹೊರಹೆಬ್ಬಾಗಿಲೆಂದು, ಒಳಭಾಗವನ್ನು ಒಳಹೆಬ್ಬಾಗಿಲೆಂದು ಕರೆಯುತ್ತಾರೆ. ಹೊರಹೆಬ್ಬಾಗಿಲು

ಎಂದು ಕರೆಯಲಾಗುವ ಸಂರಚನೆಯು ಮನೆಗೆ ಮುಖ ಮಂಟಪದಂತಿದೆ. ಹೊರಗಿನ ಜನರೊಡನೆ ಸಂಪರ್ಕ ಸಾಧಿಸುವ ವೇದಿಕೆ ಇದಾಗಿದೆ. ಶ್ರೇಣಿಕೃತ ಸಮಾಜ ವ್ಯವಸ್ಥೆಯಲ್ಲಿ ಒಳಹೊರಗನ್ನು ಜೋಡಿಸುವ ಹೊರಹೆಬ್ಬಾಗಿಲು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮಹತ್ವವನ್ನು ಪಡೆದುಕೊಂಡಿದೆ. ಸಾಮಾನ್ಯವಾಗಿ ಹೊರಹೆಬ್ಬಾಗಿಲು ಮೂರು ಹಂತದ ರಚನೆಯ ವಿನ್ಯಾಸವನ್ನು ಹೊಂದಿರುತ್ತದೆ. ಅದನ್ನು ಮೇಲ್‌ಹೆಬ್ಬಾಗಿಲು ಚಾವಡಿ, ಕೆಳಚಾವಡಿ ಮತ್ತು ನೆಡೆ ಎಂದೂ ಸ್ಥೂಲವಾಗಿ ವಿಭಾಗಿಸಿಕೊಳ್ಳಬಹುದು. ಮೇಲ್‌ಚಾವಡಿ ಮತ್ತು ಕೆಳಹೆಬ್ಬಾಗಿಲಿನ ಚಾವಡಿಗಳ ಬದಿಗಳಿಗೆ ಕೆಸ್ರಹಲಗೆ[೩] ಎನ್ನುವ ಮರದ ಹಲಗೆಯನ್ನು ಜೋಡಿಸಿರುತ್ತಾರೆ. ಇದು ಕುಳಿತುಕೊಳ್ಳುವ ಸಾಧನ ಮಾತ್ರವಲ್ಲದೆ, ಹೆಬ್ಬಾಗಿಲಿನಲ್ಲಿರುವ ಕಲಾತ್ಮಕ ಪೋದಿಗೆಕಂಬಗಳು ಈ ಕೆಸರಹಲಗೆಯ ಆಧಾರದ ಮೇಲೆ ನಿಂತಿರುತ್ತದೆ. ಸಾಮಾನ್ಯವಾಗಿ ಕೆಸ್ರಹಲಗೆ ಹೆಬ್ಬಾಗಿಲಿನ ಮೇಲ್‌ಅಂತಸ್ತಿಗೆ ಭದ್ರ ಬುನಾದಿ ಆಗಿ ಕೆಲಸ ನಿರ್ವಹಿಸುತ್ತದೆ.

ಸಾಮಾನ್ಯವಾಗಿ ಹೆಬ್ಬಾಗಿಲು ಮನೆಗಳು ಉತ್ತರಕ್ಕೆ ಅಭಿಮುಖವಾಗಿ ತೆರೆದುಕೊಂಡಿರುತ್ತದೆ. ಮಧ್ಯದಲ್ಲಿರುವ ದೊಡ್ಡ ಗಾತ್ರದ ಬಾಗಿಲು ಈ ಸಂರಚನೆಯನ್ನು ಸಮಾನಾದ ಎರಡು ಭಾಗಗಳಾಗಿ ವಿಂಗಡಿಸುತ್ತದೆ. ದೊಡ್ಡ ಗಾತ್ರದ ಹೆಬ್ಬಾಗಿಲಿನ ಎಡ ಬಲ ಭಾಗದಲ್ಲಿ ಚಾವಡಿಯಾದರೆ, ಹೆಬ್ಬಾಗಿಲಿಗೆ ಹಿಮ್ಮುಖ ಮತ್ತು ಅಭಿಮುಖವಾಗಿ ತಗ್ಗಾಗಿರುವ ನಡೆದಾಡುವ ಭಾಗವಿದೆ. ಅದನ್ನು ಪಾತಾಳನಡೆ ಎನ್ನುವರು. ಇದು ಹೆಬ್ಬಾಗಿಲ ಚಾವಡಿಗಿಂತ ತಗ್ಗಾಗಿರುವುದರಿಂದ ಮತ್ತು ಹೆಬ್ಬಾಗಿಲಿನ ಮೂಲಕ ಒಳ ಹೊರಗೆ ನಡೆದಾಡುವ ಜಾಗವಾಗಿರುವುದರಿಂದ ಪಾತಾಳನಡೆ ಎಂದು ಕರೆಯುತ್ತಾರೆ. ಪಾತಾಳ ನಡೆಯನ್ನು ಪೂರ್ವ ಪಶ್ಚಿಮವಾಗಿ ಸೇರಿಕೊಳ್ಳುವ ಕಿರಿದಾದ ದಾರಿಯನ್ನು ನಡೆ ಎಂದು ಕರೆಯುತ್ತಾರೆ. ಇದಕ್ಕೆ ಚಿಟ್ಟೆ ಎನ್ನುವ ಹೆಸರು ಕೂಡಾ ಇದೆ. ಇದು ಹೆಬ್ಬಾಗಿಲಿನ ಅತ್ಯಂತ ಕೆಳಸ್ತರದ ಕೂರುವ ವ್ಯವಸ್ಥೆಯಾಗಿದೆ. ಶ್ರೇಣೀಕೃತ ಸಮಾಜ ವ್ಯವಸ್ಥೆಯ ತಳಮಟ್ಟದಲ್ಲಿರುವ ಜನರು ನ್ಯಾಯಿಕ, ಧಾರ್ಮಿಕ ಸಂದರ್ಭಗಳಲ್ಲಿ ಕುಳಿತುಕೊಳ್ಳುವ ಸ್ಥಳ ಇದಾಗಿದೆ. ಹೆಬ್ಬಾಗಿಲು ಮನೆಯೆಂದರೆ ಕೇವಲ ಹೆಬ್ಬಾಗಿಲಲ್ಲ. ಹೆಬ್ಬಾಗಿಲಿನ ಸಂರಚನೆಯನ್ನು ಹೊಂದಿಕೊಂಡಂತೆ ಹೆಬ್ಬಾಗಿಲಿನ ಒಳಭಾಗದಲ್ಲಿ ಮನೆ, ಗರಡಿ, ಕೊಟ್ಟಿಗೆ, ಬಾವಿಕಟ್ಟೆ, ತುಳಸಿಕಟ್ಟೆ ಸೇರಿಕೊಂಡಿರುತ್ತದೆ. ಇವುಗಳೆಲ್ಲ ಒಟ್ಟಿಗೆ ಸೇರಿದಾಗ ಹೆಬ್ಬಾಗಿಲು ಮನೆಗಳಾಗುತ್ತದೆ. ಇವೆಲ್ಲದಕ್ಕೂ ಪ್ರವೇಶದ್ವಾರ ಹೆಬ್ಬಾಗಿಲು. ಈ ಮನೆಯು ಸ್ವರೂಪದಲ್ಲಿ ದೊಡ್ಡಬಾಗಿಲು, ಎತ್ತರದಚಾವಡಿ, ಪಾತಾಳನಡೆ ಇರುವ ರಚನೆಯಾಗಿದೆ. ಈ ಬಗೆಯ ಸಂರಚನೆ ಹೊಂದಿರುವ ಮನೆಗಳ ವಿನ್ಯಾಸವನ್ನು ಹೆಬ್ಬಾಗಿಲು ಮನೆಗಳೆಂದು ಕರೆಯುವುದು ವಾಡಿಕೆ. ಇಲ್ಲಿ ಮನೆ ಮುಖ್ಯವಲ್ಲ ಹೆಬ್ಬಾಗಿಲು ಮುಖ್ಯವಾಗುತ್ತದೆ.

ಹೊರಹೆಬ್ಬಾಗಿಲನ್ನು ದೊಡ್ಡದಾದ ಬಾಗಿಲುವಾಡದ ಮೂಲಕ ದಾಟಿ ಪಾತಾಳನಡೆಯಲ್ಲಿ ಮುಂದುವರಿದರೆ ಮನೆಯ ಅಂಗಳ ಎದುರಾಗುತ್ತದೆ. ಈ ಅಂಗಳಕ್ಕೆ ಅಭಿಮುಖವಾಗಿ ಒಳಹೆಬ್ಬಾಗಿಲು, ಪೋದಿಗೆಕಂಬಗಳಿಂದ ಶೋಭಿಸುತ್ತಿರುತ್ತದೆ. ಒಳಹೆಬ್ಬಾಗಿಲು ಮನೆಯೊಡನೆ ನಿಕಟ ಸಂಬಂಧ ಹೊಂದಿದ್ದರೆ, ಹೊರಹೆಬ್ಬಾಗಿಲು ಹೊರಗಿನ ಸಂಬಂಧವನ್ನು ಬೆಳೆಸುತ್ತದೆ. ಒಳಹೆಬ್ಬಾಗಿಲು ಹೊರಹೆಬ್ಬಾಗಿಲಿನಂತೆ ಕೇವಲ ಮುಖಮಂಟಪವಾಗಿರದೆ,ಅಲ್ಲಿ ಕೋಣೆಗಳು, ಗೋಡೆ ಕವಾಟು, ಉಪ್ಪರಿಗೆ ಮೆಟ್ಟಿಲುಗಳೆಂಬ ರಚನೆಯನ್ನು ಹೊಂದಿದೆ. ಹೊರಹೆಬ್ಬಾಗಿಲಿನಂತೆ ಮೇಲ್ಚಾವಡಿ, ಕೆಳಚಾವಡಿ, ನೆಡೆ ಇರುತ್ತದೆ. ಒಳಹೆಬ್ಬಾಗಿಲು ಚಾವಡಿಯ ಪೂರ್ವಕ್ಕೆ ಮತ್ತು ಪಶ್ಚಿಮಕ್ಕೆ ಕೋಣೆಗಳಿರುತ್ತವೆ. ಪೂರ್ವದ ಕೋಣೆಗಳಲ್ಲಿ ಗಂಡಸರು ಮಲಗಿದರೆ, ಪಶ್ಚಿಮದ ಕೋಣೆಯಲ್ಲಿ ಕೃಷಿ ಸಲಕರಣೆಗಳನ್ನು ಇಡಲಾಗುತ್ತದೆ. ಒಳಹೆಬ್ಬಾಗಿಲು ಚಾವಡಿಯ ಒಂದು ಬದಿಯಲ್ಲಿ ಉಪ್ಪರಿಗೆಗೆ ಹೋಗುವ ಮೆಟ್ಟಿಲುಗಳಿರುತ್ತವೆ. ಈ ಮೆಟ್ಟಿಲುಗಳಿಗೆ ಮರದ ಹಲಗೆ ಜೋಡಿಸಿರುತ್ತಾರೆ. ಉಪ್ಪರಿಗೆ ಮೆಟ್ಟಿಲಿನ ಗೋಡೆಗೆ ಕವಾಟಗಳಿದ್ದು ಅವುಗಳು ಪೂರ್ವ ಮತ್ತು ಪಶ್ಚಿಮಕ್ಕೆ ಮುಖಮಾಡಿಕೊಂಡಿರುತ್ತದೆ.ಪೂರ್ವದ ಮಲಗುವ ಕೋಣೆಯ ನಂತರ ಬಚ್ಚಲುಮನೆ. ಬಚ್ಚಲು ಮನೆಯಿಂದ ಪೂರ್ವ ಆಗ್ನೇಯ ದಿಕ್ಕಿನಲ್ಲಿ ಬಾವಿಕಟ್ಟೆ ಇರುತ್ತದೆ. ಬಚ್ಚಲುಮನೆಗೆ ಎದುರಾಗಿ ಉಪ್ಪರಿಗೆ ಮೆಟ್ಟಿಲಿನ ಹಿಂಭಾಗದಲ್ಲಿ ಪೂರ್ವಕ್ಕೆ ಮುಖಮಾಡಿ ಕೊಂಡಂತೆ ಹೆರಿಗೆಕೋಣೆ ಇವೆಲ್ಲ ಹೆಬ್ಬಾಗಿಲಿನ ಪೂರ್ವದ ಸಂರಚನೆಗಳು. ಹೆಬ್ಬಾಗಿಲಿನ ಪಶ್ಚಿಮದಲ್ಲಿ ಧಾನ್ಯ ಸಂಗ್ರಹಣೆ ಕೋಣೆ ವಾಯುವ್ಯಕ್ಕೆ ಚಾಚಿಕೊಂಡಿರುತ್ತದೆ. ನೆಡೆಯಿಂದ ಪಶ್ಚಿಮಕ್ಕೆ ಮುಂದುವರಿದರೆ ದಕ್ಷಿಣ ಉತ್ತರವಾಗಿರುವ ತೆರೆದ ಕೋಣೆ ಕೃಷಿದಾಸ್ತಾನು ಕೋಣೆ ಅಥವಾ ಗರಡಿ. ಇದು ಪೂರ್ವಕ್ಕೆ ತೆರೆದುಕೊಂಡಿರುತ್ತದೆ. ಗರಡಿಮನೆಯಲ್ಲಿ ಭತ್ತವನ್ನು ಕುಟ್ಟುವ ಒರಲುಗಳಿರುತ್ತವೆ. ಭತ್ತದ ಬೆಳೆ ಕಟಾವು ಆದ ಬಳಿಕ ಹೊಲಿರಾಶಿಯನ್ನು ಸಂಗ್ರಹಿಸುವ ತಾತ್ಕಾಲಿಕ ಕೋಣೆ ಇದಾಗಿದೆ. ಪೂರ್ವ ಈಶಾನ್ಯದಲ್ಲಿ ಉತ್ತರ ದಕ್ಷಿಣವಾಗಿ ದನಗಳ ಹಟ್ಟಿ ಮತ್ತು ಕಂಬಳದ ಕೋಣಗಳಿಗೆ ಪ್ರತ್ಯೇಕ ಹಟ್ಟಿಯಿದೆ.

ಹೆಬ್ಬಾಗಿಲಿನಿಂದ ಪೂರ್ವ ಈಶಾನ್ಯಕ್ಕೆ ಬಾವಿಕಟ್ಟೆಯಿಂದ ಉತ್ತರ ದಕ್ಷಿಣವಾಗಿ ಹೆಬ್ಬಾಗಿಲಿನ ಮನೆ ಇದ್ದು ಹೆಬ್ಬಾಗಿಲಿನಷ್ಟು ದೊಡ್ಡದಾಗಿರದ ಸಾಮಾನ್ಯ ಮನೆಯಾಗಿದೆ. ಹೆಬ್ಬಾಗಿಲು ಮನೆಯಲ್ಲಿ ಎಲ್ಲಾ ಬಗೆಯ ವಾರ್ಷಿಕಾವರ್ತನ ಮತ್ತು ಜೀವನಾವರ್ತನ, ನ್ಯಾಯಿಕ, ಸಾಮಾಜಿಕ, ಧಾರ್ಮಿಕ ಕೆಲಸ ಕಾರ್ಯಗಳು ಹೆಬ್ಬಾಗಿಲಿನಲ್ಲಿಯೇ ನಡೆಯುವುದರಿಂದ ಮನೆಯ ಪ್ರಾಮುಖ್ಯತೆ ಇಲ್ಲಿ ಗೌಣವಾಗಿರುತ್ತದೆ. ಉತ್ತರ ದಕ್ಷಿಣವಾಗಿ ಚಾಚಿಕೊಂಡಿರುವ ಮನೆಯ, ಪೂರ್ವ ಆಗ್ನೇಯದಲ್ಲಿ ಅಡುಗೆಕೋಣೆ. ಆಡುಗೆಕೋಣೆಯ ಬಾಗಿಲು ಉತ್ತರ ದಿಕ್ಕಿಗೆ ಅಂದರೆ ಬಾವಿಕಟ್ಟೆಯ ಕಡೆಗಿರುತ್ತದೆ. ಅಡುಗೆ ಕೊಣೆಯನ್ನು ಪ್ರವೇಶಿಸಬೇಕಾದರೆ, ಸಣ್ಣ ಚಿಟ್ಟೆ ಉತ್ತರ ದಕ್ಷಿಣವಾಗಿದ್ದು, ಚಿಟ್ಟೆಯನ್ನು ಏರಿ ಮೇಲಕ್ಕೆ

ಬರಬೇಕು. ಅಡುಗೆ ಕೋಣೆಗೆ ತಾಗಿ ವಳತಳಿ ಕೋಣೆ ಇದ್ದು ಅದರ ಬಾಗಿಲು ಕೆಳನಡೆಯ ಕಡೆಗೆ ಮುಖಮಾಡಿರುತ್ತದೆ. ಈ ಕೋಣೆ ಮೀಸಲಿಡುವ ಕೋಣೆ ಮತ್ತು ಇದನ್ನು ಹೆಂಗಸರು ಮಲಗಲು ಉಪಯೋಗಿಸುತ್ತಾರೆ. ಕೆಳಚಾವಡಿ ಮುಂದುವರಿದು ಪಶ್ಚಿಮಕ್ಕೆ ತಿರುಗಿ ವಿಶಾಲವಾದ ಮೂರು ಅಂಕಣದ ಚಾವಡಿಯೊಡನೆ ಕೂಡಿಕೊಂಡಿರುತ್ತದೆ. ದೇವರ ಕೋಣೆ ಎಂಬ ಪ್ರತ್ಯೇಕ ಕೋಣೆ ಇಲ್ಲ. ದೇವರ ಫೋಟೊಗಳನ್ನು ಚಾವಡಿಯ ಗೋಡೆಗೆ ತೂಗುಹಾಕುತ್ತಾರೆ. ಚಾವಡಿಯಲ್ಲಿ ಮನೆಯ ಮೆತ್ತಿಗೆ[೪] ಹೋಗುವ ಮೆಟ್ಟಿಲುಗಳಿರುತ್ತದೆ. ಮನೆಚಾವಡಿ ಅಷ್ಟೆ ದೊಡ್ಡದಾದ ಮೆತ್ತನ್ನು ಹೆಬ್ಬಾಗಿಲು ಮನೆ ಹೊಂದಿರುತ್ತದೆ.

ಪಶ್ಚಿಮದ ಚಾವಡಿಯ ಕೊನೆಯಿಂದ ಪಾಗಾರ[೫] ಮುಂದುವರಿದು ಪುನಃ ಉತ್ತರ ದಿಕ್ಕಿಗೆ ತಿರುಗಿ ಗರಡಿಯ ಗೋಡೆಗೆ ತಾಗಿಕೊಂಡು ಇರುತ್ತದೆ. ಮನೆಯ ಒಳಭಾಗವನ್ನು ಹೊರಗಡೆ ಪ್ರಪಂಚದಿಂದ ಬೇರ್ಪಡಿಸುತ್ತದೆ. ಸಾಮಾನ್ಯವಾಗಿ ಹೆಬ್ಬಾಗಿಲು ಮನೆಗಳಲ್ಲಿ ದಿಡ್ಡಿ ಬಾಗಿಲುಗಳಿರುತ್ತವೆ. ಹೆಬ್ಬಾಗಿಲು ಬಾಗಿಲು ಮನೆಮಂದಿಯ ಒಳಹೊರ ಪ್ರವೇಶಕ್ಕೆ ದಾರಿಯಾಗಿರುತ್ತದೆ. ದಿಡ್ಡಿಬಾಗಿಲು ಸಾಮಾನ್ಯವಾಗಿ ಕೃಷಿ ಭೂಮಿಯ ಕಡೆಗೆ ಇರುತ್ತದೆ. ದಿಡ್ಡಿಬಾಗಿಲು ಕೂಡ ಹೆಬ್ಬಾಗಿಲು ಬಾಗಿಲಿನಂತೆ ಇದ್ದು ಗಟ್ಟಿ ಮುಟ್ಟಾಗಿರುತ್ತದೆ. ಮೀನುಮಾರುವವರು, ಕೆಲಸದ ಆಳುಗಳು, ಹೊರೆಯಾಳುಗಳು, ಭಿಕ್ಷುಕರು ಈ ಬಾಗಿಲಿನ ಮೂಲಕ ಒಳಬರಬೇಕು. ದಿಡ್ಡಿಬಾಗಿಲನ್ನು ರಾತ್ರಿ ಮುಚ್ಚಲಾಗುತ್ತದೆ. ದಿಡ್ಡಿಬಾಗಿಲು ಹಾಕಿದ ಮೇಲೆ ಹೊರಗಿನವರಿಗೆ ಒಳಪ್ರವೇಶಿಸಲು ಸಾಧ್ಯವಿಲ್ಲ. ಮನೆ ಮತ್ತು ಹೆಬ್ಬಾಗಿಲಿನ ನಡುವೆ ಅಂಗಳವಿದ್ದು ಇಲ್ಲಿ ಕೃಷಿ ಚಟುವಟಿಕೆಗಳಾದ ಕೈಯ್‌ಜಪ್ಪುವುದು[೬] ಹಡ್ಲುಒಕ್ಕುವುದು[೭], ತಿರಿಕಟ್ಟುವುದು[೮] ನಡೆಯುತ್ತದೆ. ಮನೆಯ ಎದುರುಗಡೆ ಈಶಾನ್ಯ ದಿಕ್ಕಿನಲ್ಲಿ ದೊಡ್ಡದಾದ ತುಳಸಿಕಟ್ಟೆ ಇರುತ್ತದೆ.(ಚಿತ್ರ ೮)

ಹೆಬ್ಬಾಗಿಲು ಮನೆಗಳನ್ನು ಕಟ್ಟುವೆಂದರೆ ಒಂದು ಕಾಲದಲ್ಲಿ ಪ್ರತಿಷ್ಠೆಯ ಸಂಕೇತವಾಗಿದ್ದಿತ್ತು. ಸಾಮಾನ್ಯವಾಗಿ ಹೆಬ್ಬಾಗಿಲು ಮನೆಗಳು ನಾಲ್ಕರಿಂದ ಆರು ಅಂಕಣದ್ ಮನೆಯಾಗಿದ್ದು ಬ್ರಿಟಿಷರ ಕಾಲದಲ್ಲಿ ಮುನ್ಷಿ, ಊರ ಪಟೇಲ ಮುಂತಾದ ಉನ್ನತಸ್ತರದಲ್ಲಿರುವ ಅಧಿಕಾರಿಗಳು ಮಾತ್ರ ಕಟ್ಟಿಕೊಳ್ಳುತ್ತಿದ್ದರು. ಮತ್ತು ಅಂತವರಿಗೆ ಮಾತ್ರ ಕಟ್ಟಲು ಅನುಮತಿ ಸಿಗುತ್ತಿತ್ತು. ರಚನೆಯ ದೃಷ್ಟಿಯಿಂದ ಬಸರೂರಿನ ಹೆಬ್ಬಾಗಿಲು ಮನೆಗಳು ತನ್ನೊಳಗೆ ಸಾಂಸ್ಕೃತಿಕ ಮತ್ತು ಧಾರ್ಮಿಕ ಅಂಶವನ್ನು ಒಳಗೊಂಡು ನಿರ್ಮಾಣಗೊಂಡಿರುತ್ತದೆ. ಜನಪದರು ಹೆಬ್ಬಾಗಿಲು ದೇವಸ್ಥಾನಕ್ಕೆ ಸಮ ಎಂದಿರುವುದು ಅದಕ್ಕಿರುವ ಧಾರ್ಮಿಕ ಮಹತ್ವವನ್ನು ಎತ್ತಿ ತೋರಿಸುತ್ತದೆ. ಹೆಬ್ಬಾಗಿಲಿನಲ್ಲಿ ಕುಳಿತುಕೊಳ್ಳುವವನಿಗೆ ಯೋಗ್ಯತೆ ಜ್ಞಾನ ಎರಡು ಇರಬೇಕು ಎನ್ನುತ್ತಾರೆ. ಹೆಬ್ಬಾಗಿಲು ಮನೆಯವರನ್ನು ನೈತಿಕವಾಗಿ ಬಂಧಿಸುವ

ಲಕ್ಷಣರೇಖೆ ಇದ್ದಂತೆ. ಹೆಬ್ಬಾಗಿಲು ದಾಟಿ ಹೋದರೆ ಸಂಬಂಧ ಕಡಿದುಕೊಂಡು ಹೋದ ಹಾಗೆ. ಹೆಬ್ಬಾಗಿಲಿನಲ್ಲಿ ನಿಂತು ಸುಳ್ಳು ಹೇಳುವವನಿಗೆ ಎದೆಗಾರಿಕೆ ಬೇಕು.

ಬಸರೂರ ಮಾಗಣೆಯಲ್ಲಿ ಹೆಬ್ಬಾಗಿಲು ಮನೆ ಹೊಂದಿದವರು ಭೂಮಾಲಿಕರಾದ ಬಂಟರು. ಇವರ ಮನೆಗಳಲ್ಲಿ ಪ್ರತಿವರ್ಷದ ಕಟ್ಟುಕಟ್ಟಲೆ ದೈವದ ದರ್ಶನ ನಡೆಯುವ ಸ್ಥಳ ಹೆಬ್ಬಾಗಿಲೇ ಆಗಿರುತ್ತದೆ. ನವರಾತ್ರಿ, ಪಡಿ[೧೦] ಮುಂತಾದ ವಾರ್ಷಿಕಾವರ್ತನ ಜೀವನಾವರ್ತನ ಇಲ್ಲಿ ನಡೆಯುತ್ತದೆ. ಹೆಬ್ಬಾಗಿಲು ನ್ಯಾಯತೀರ್ಮಾನ ಮಾಡುವ ಕಟ್ಟೆಯಾಗಿದೆ. ಕೆಲವು ಹೆಬ್ಬಾಗಿಲಿನಲ್ಲಿ ನ್ಯಾಯಮಂಚ, ನ್ಯಾಯಚಾವಡಿ ಇದೆ. ಕಂಬಳದಂತಹ ಸಾಂಸ್ಕೃತಿಕ ಕ್ರೀಡೆ ಹೆಬ್ಬಾಗಿಲಿನ ಎದುರು ನಡೆಯುತ್ತದೆ. ಕೋಣಗಳನ್ನು ಮನೆಯ ಯಜಮಾನ ಎದುರುಗೊಂಡು ಕೋಣದ ಯಜಮಾನರಿಗೆ ಮರ್ಯಾದೆ ನೀಡುವ ಸ್ಥಳವಾಗಿದೆ. ನವರಾತ್ರಿ ಸಂದರ್ಭದಲ್ಲಿ ಹೆಬ್ಬಾಗಿಲಿನ ಚಾವಡಿಯಲ್ಲಿ ತಾಳಮದ್ದಲೆ ನಡೆಯುತ್ತಿತ್ತು. ಮರಾಟಿ ನಾಯಕರ ಹೋಳಿಕುಣಿತವು, ಹೂವಿನ ಕೋಲಿನ ಪ್ರದರ್ಶನವು ಹೆಬ್ಬಾಗಿಲ ಮನೆಯಿಂದ ಆರಂಭವಾಗುತ್ತದೆ ಬಸರೂರಿನ ಮಾಗಣೆಯ ಗ್ರಾಮಗಳಲ್ಲಿ ಕೀಳಿನಪೂಜಾ[೧೧], ಹೊಸದೇವರ ಪೂಜೆ ಮೊದಲಾದ ಆಷಾಡಮಾಸದ ಧಾರ್ಮಿಕ ಕ್ರಿಯಾವಿಧಿ–ವಿಧಾನಗಳು ಜರಗುವುದು ಹೆಬ್ಬಾಗಿಲಿನಲ್ಲಿ. ಮದುವೆ ಮತ್ತು ಸೀಮಂತದ ಸಂದರ್ಭದಲ್ಲಿ ಮಂಚಲು, ದಂಡಿಗೆ, ಏರುವುದು ಹೆಬ್ಬಾಗಿಲಿನಲ್ಲಿ. ಸೋಣೆ ತಿಂಗಳಲ್ಲಿ ಚೆನ್ನೆಮಣೆ ಆಟ ಪ್ರಾರಂಭಿಸುವುದು ಇಲ್ಲಿಯೇ, ಜೋಗಿ ದೇವರನ್ನು ಕಟ್ಟುವುದು (ದರ್ಶನ ಪಡಿ) ಮತ್ತು ಬಿಚ್ಚುವುದು ಹೆಬ್ಬಾಗಿಲಿನಲ್ಲಿ. ಹೊರಪ್ರಪಂಚದೊಂದಿಗೆ ಸಂಬಂಧಿಸಿದ ಎಲ್ಲಾ ಕಾರ್ಯಗಳು ಹೆಬ್ಬಾಗಿಲಿನಲ್ಲಿಯೇ ನಡೆಯುತ್ತದೆ. ಜನಪದರ ಬದುಕಿನಲ್ಲಿ ಹೆಬ್ಬಾಗಿಲು ಮನೆಗಳು ನ್ಯಾಯ ಸ್ಥಾನ, ದೈವಸ್ಥಾನದಂತೆ ಕಾರ್ಯನಿರ್ವಹಿಸುತ್ತದೆ.

ಇಂದು ಬಸರೂರಿನಲ್ಲಿ ಹೆಬ್ಬಾಗಿಲು ಮನೆಗಳು ಕಣ್ಮರೆಯಾಗುತ್ತಿದೆ. ಜಮೀನ್ದಾರಿ ಪದ್ಧತಿಯನ್ನು ಪ್ರತಿನಿಧಿಸುತ್ತಿರುವ ಈ ಮನೆಗಳಲ್ಲಿ ಕೂಡುಕುಟುಂಬ ಪದ್ದತಿ ಅಸ್ಥಿತದಲ್ಲಿದ್ದಿತ್ತು. ಈಗ ಕೂಡು ಕುಟುಂಬವಿಲ್ಲ. ಮನೆಯನ್ನು ನಿರ್ವಹಣೆ ಮಾಡುವ ಆಳುಗಳ ಕೊರತೆಯಿದೆ. ಆಧುನಿಕ ವ್ಯವಸ್ಥೆಗೆ ಹೆಬ್ಬಾಗಿಲುಮನೆಯ ಸಂರಚನೆ ಹೊಂದಿಕೆಯಾಗದ ಕಾರಣ ಅವುಗಳ ಜಾಗದಲ್ಲಿ ಸಿಮೆಂಟಿನ ಮನೆಗಳು ನಿರ್ಮಾಣಗೊಳ್ಳುತ್ತಿದೆ. ಕೆಲವು ಮನೆಗಳು ಮೂಲಸ್ವರೂಪವನ್ನು ಕಳೆದುಕೊಂಡಿದೆ. ಇದರ ಜೊತೆಗೆ ಸಾಂಸ್ಕೃತಿಕ ಬೇರುಗಳು ನಶಿಸುತ್ತಿದೆ.

### ೬.೨.೩. ಬಣಸಾಲೆ ಮನೆಗಳು

ಬಸರೂರು ಕನ್ನಡ ಕರಾವಳಿಯ ಬಂದರು ನಗರವಾಗಿತ್ತು ಎನ್ನುವುದು ಐತಿಹಾಸಿಕ ಆಧಾರಗಳಿಂದ ತಿಳಿದುಬರುತ್ತದೆ. ಬಸರೂರಿನ ಬಗ್ಗೆ ಮಾಹಿತಿ ನೀಡುವ ಕ್ರಿ.ಶ ೧೧೫೪ರ ಕವಿಆಳುಪೇಂದ್ರನ ಶಾಸನವು ಇಲ್ಲಿ ವ್ಯಾಪಾರಸ್ಥರು ಇರುವ ಬಗ್ಗೆ ಮಾಹಿತಿ ನೀಡುತ್ತದೆ.

ಇವರನ್ನು ನಖರದವರು ಎಂದು ಕರೆಯಲಾಗಿದೆ. ರೇವು ಪಟ್ಟಣವಾದ ಬಸರೂರಿನಿಂದ ತೆಂಗಿನಕಾಯಿ, ತಾಳೆಮರ, ಲವಂಗ, ದಾಲಚೀನಿ ಮತ್ತು ಅಕ್ಕಿ ರಫ್ತಾಗುತ್ತಿದ್ದವು.ಬಸರೂರಿನಲ್ಲಿ ಅಳಿವೆ ಇದ್ದು ಸರಕುಗಳು ಹೋಗಿ ಬರುತ್ತಿದ್ದವು. ಬಾರಿ ಪ್ರಮಾಣದ ಸುಂಕ ವಸೂಲಿಯಾಗುತ್ತಿತ್ತು. ಇಲ್ಲಿ ಸೆಟ್ಟರು (ನಖರರು) ಮತ್ತು ಹಂಜಮಾನರು ಬತ್ತದ ಹುಲ್ಲಿನಿಂದ ಘುರ್ನೆಗಾ ಎಂಬ ಮುಡಿ ಕಟ್ಟಿ ಮಲಬಾರಿಗೆ ಕಳುಹಿಸಿ ಕೊಡುತ್ತಿದ್ದರು. ಓಮಜ್ ಮತ್ತು ಏಡನ್‌ಗಳಿಂದ ವ್ಯಾಪಾರಸ್ಥರು ಅಕ್ಕಿ ವ್ಯಾಪಾರಕ್ಕೆ ಇಲ್ಲಿಗೆ ಬರುತ್ತಿದ್ದರು ಎಂಬ ಮಾಹಿತಿಯನ್ನು ದೇಶಿಯ ಮತ್ತು ವಿದೇಶಿ ದಾಖಲೆಗಳು ಒದಗಿಸುತ್ತದೆ. ಈ ಮೇಲಿನ ಎಲ್ಲಾ ಅಂಶಗಳು ಬಸರೂರು ದೊಡ್ಡ ವ್ಯಾಪಾರ ಕೇಂದ್ರ ಎನ್ನುವುದನ್ನು ಪುಷ್ಟೀಕರಿಸುತ್ತದೆ. ಇಲ್ಲಿ ವ್ಯಾಪಾರ ಮಾಡುವವರ ಮನೆಗಳಲ್ಲಿ ಭತ್ತ ಅಥವಾ ಅಕ್ಕಿಯ ಬಣಸಾಲೆಗಳಿದ್ದವು ಹಾಗಾಗಿ ಅವರ ಮನೆಗಳನ್ನು ಬಣಸಾಲೆಮನೆ ಎನ್ನುವರು.

ಬಸರೂರಿನ ಅಕ್ಕಿ ವ್ಯಾಪಾರಸ್ಥರ ಮನೆಗಳನ್ನು ಬಣಸಾಲೆ/ಬಂಡಸಾಲೆ ಕರೆಯುತ್ತಾರೆ. ಬಸರೂರಿನಲ್ಲಿ ಮಂಡಿಕೇರಿ ವ್ಯಾಪಾರದ ಕೊಠಡಿಗಳು ಮತ್ತು ಮಂಡಿಗಳು ಇದ್ದ ಕೇರಿಯಾಗಿದೆ. ಇಲ್ಲಿ ಕ್ರಿ.ಶ. ೧೬೦೦ರ ಸುಮಾರಿಗೆ ಗೋವಾದಿಂದ ಆಗಮಿಸಿದ ಗೌಡ ಸಾರಸ್ವತರು ವ್ಯಾಪಾರ ನಡೆಸುತ್ತಿದ್ದರು. ಇದಕ್ಕಿಂತಲೂ ಪೂರ್ವದಲ್ಲಿ ಹಂಜಮಾನರು, ನಖರರು ವ್ಯಾಪಾರ ನಡೆಸುತ್ತಿದ್ದ ಬಗ್ಗೆ ಶಾಸನ ಉಲ್ಲೇಖವಿದೆ. ಕ್ರಿ.ಶ. ೧೭೫೦ರ ಸುಮಾರಿಗೆ ಬಸರೂರು ರೇವು ತನ್ನ ಮಹತ್ವವನ್ನು ಕಳೆದುಕೊಂಡಿತು. ಗೌಡಸಾರಸ್ವತರು ಬಸರೂರನ್ನು ಬಿಟ್ಟು ಗಂಗೊಳ್ಳಿಗೆ ಹೋದರು.

ಬಸರೂರಿನಲ್ಲಿ ಈಗಿರುವ ಬಣಸಾಲೆ ಮನೆಯ ರಚನೆಯನ್ನು ಗಮನಿಸಿದರೆ ವ್ಯಾಪಾರದ ಉದ್ದೇಶಗಳಿಗೆ ಈ ಮನೆಯನ್ನು ಕಟ್ಟಿದಂತೆ ಕಾಣುತ್ತದೆ. ರಾಚನಿಕವಾಗಿ ಬಣಸಾಲೆ/ಬಂಡಸಾಲೆ ಮನೆಗಳು ವೈಶಿಷ್ಟ್ಯ ಪೂರ್ಣವಾಗಿರುತ್ತದೆ. ಈ ಮನೆಗಳು ಆರ್ಥಿಕವಾಗಿ ಮಾತ್ರವಲ್ಲ ಐತಿಹಾಸಿಕವಾಗಿ, ಧಾರ್ಮಿಕವಾಗಿ, ಸಾಮಾಜಿಕವಾಗಿ, ಆಡಳಿತಾತ್ಮಕವಾಗಿ ಮತ್ತು ಸಾಂಸ್ಕೃತಿಕವಾಗಿಯೂ ಮಹತ್ವವನ್ನು ಪಡೆದುಕೊಂಡಿದೆ. (ಚಿತ್ರ ೯)

ಬಸರೂರಿನ ಬಣಸಾಲೆ ಮನೆಗಳನ್ನು ನಿರ್ಮಿಸಿದವರು ಗೌಡಸಾರಸ್ವತರು. ಹದಿನಾರು ಮತ್ತು ಹದಿನೇಳನೆಯ ಶತಮಾನದಲ್ಲಿ ಪೋರ್ಚುಗೀಸರ ದಾಳಿಗೆ ಹೆದರಿ ಕನ್ನಡ ಕರಾವಳಿಯ ಉದ್ದಕ್ಕೂ ನೆಲೆನಿಂತರು. ಬಸರೂರು, ಗಂಗೊಳ್ಳಿ, ಸೌಡ, ಬೈಲೂರು ಮೊದಲಾದ ಕಡೆ ಬಣಸಾಲೆ ನಿರ್ಮಿಸಿಕೊಂಡು ವ್ಯಾಪಾರ ನಡೆಸಲಾರಂಭಿಸಿದರು. ಇವರೆಲ್ಲ ಒಂದೇ ಕೂಡುಕಟ್ಟಿಗೆ ಸೇರಿದವರು. ಇವರು ವ್ಯಾಪಾರ ಉದ್ದೇಶಗಳಿಗಾಗಿ ನಿರ್ಮಿಸಿದ ಕಟ್ಟಡಗಳ ಸಂರಚನೆ ಬಣಸಾಲೆ ಮನೆಗಳು. ಬಣಸಾಲೆ ಎಂದರೆ ಅಕ್ಕಿ ಅಥವಾ ಭತ್ತದ ವ್ಯಾಪಾರ

ಎಂದರ್ಥ. ಇದನ್ನು ನಡೆಸುತ್ತಿದ್ದವರು ಬಣಸಾಲೆ ಮನೆಯವರು.

ಬಸರೂರಿನ ಮೌಖಿಕ ಸಾಹಿತ್ಯದಲ್ಲಿ ಬಣಸಾಲೆಮನೆಯ ಗೌಡಸಾರಸ್ವತರು ಮಂಡಿಕೇರಿ ಪ್ರದೇಶವನ್ನು ಬುದ್ಧಿವಂತಿಕೆ ಪ್ರದರ್ಶಿಸಿ ಪಂಥ್ವಾಹ್ವಾನದ ಮೂಲಕ ಪಡೆದುಕೊಂಡವರು ಎಂಬ ಐತಿಹ್ಯವಿದೆ. (ವಿವರಗಳಿಗೆ ಸಾಹಿತ್ಯ ಮತ್ತು ಸಂಸ್ಕೃತಿ ಅಧ್ಯಾಯದಲ್ಲಿ ಮೌಖಿಕ ಸಾಹಿತ್ಯದಲ್ಲಿ ಕತೆಗಳು) ಇವರು ಕಾಮತ್, ನಾಯಕ್, ಪೈ, ಪ್ರಭು ಮುಂತಾದ ಉಪನಾಮವನ್ನು ಹೊಂದಿದ್ದಾರೆ. ಮೂಲತಃ ವ್ಯಾಪಾರಿಗಳಾದರೂ ಇಲ್ಲಿ ಕೃಷಿಭೂಮಿಯನ್ನು ಪಡೆದು ಭೂಮಾಲಕರಾದರು ಮತ್ತು ಅಕ್ಕಿಯನ್ನು ಬೆಳೆದು ದೊಡ್ಡ ಪ್ರಮಾಣದಲ್ಲಿ ರಫ್ತು ಮಾಡುವ ಉದ್ಯೋಗ ಆರಂಭಿಸಿದವರು.

ಬಣಸಾಲೆ ಮನೆಯ ಬಗ್ಗೆ ಸಿಗುವ ಲಿಖಿತ ಮಾಹಿತಿ ಕ್ರಿ.ಶ.೧೮೭೪ ಕ್ಕಿಂತ ಇತ್ತೀಚಿನದ್ದು. ಬಸರೂರಿನ ಗೌಡ ಸಾರಸ್ವತರು ದೊಡ್ಡ ವ್ಯಾಪಾರಸ್ಥರು ಎನ್ನುವುದಕ್ಕೆ ಅವರ ಹೆಸರಿನ ಮುಂದೆ ಅಂಟಿಕೊಂಡಿರುವ ಮೆಂತೆ, ಶುಂಠಿ, ಮಿಠಾಯಿ ಮುಂತಾದ ವಿಶೇಷಣಗಳು ಸಾಕ್ಷಿಯಾಗಿದೆ. ಬಸರೂರು ಕೂಡುಕಟ್ಟಿಗೆ ಸೇರಿದ ಕ್ರೋಢಬೈಲೂರಿನ ಬಂಡಸಾಲೆ ಮನೆ ಕ್ರಿ.ಶ.೧೭೫೭ಕ್ಕೆ ಕಟ್ಟಲಾಗಿದೆ ಎಂಬ ಪ್ರತೀತಿ ಇದೆ. ಇದನ್ನು ಗಮನಿಸಿದರೆ ಬಸರೂರಿನ ಬಂಡಸಾಲೆಮನೆ ಆ ಕಾಲಘಟ್ಟದಲ್ಲಿ ಕಟ್ಟಿದ್ದಾಗಿದೆ.

ಬಣಸಾಲೆಮನೆಗಳು ಸ್ವರೂಪದಲ್ಲಿ ಹೆಬ್ಬಾಗಿಲು ಮನೆಗಳಿಗಿಂತಲೂ ದೊಡ್ಡದಾಗಿದೆ. ಬಣಸಾಲೆಮನೆಯ ಮುಂಭಾಗದಲ್ಲಿ ಮನೆಯನ್ನು ಒಳಪ್ರವೇಶಿಸುವ ಬಾಗಿಲು. ಆರಂಭದಲ್ಲಿ ವಿಶಾಲವಾದ ಚಾವಡಿ. ಚಾವಡಿಗೆ ಯಾವುದೇ ಬಗೆಯ ಕಿಟಕಿ ಬಾಗಿಲುಗಳಿಲ್ಲದೆ ತೆರೆದುಕೊಂಡಿರುತ್ತದೆ. ಚಾವಡಿಯ ಈಶ್ಯಾನ್ಯದಲ್ಲಿ ವ್ಯಾಪಾರ ವ್ಯವಹಾರ ನಡೆಸುವ ದೊಡ್ಡ ಕವಾಟವಿದೆ. ಆರ್ಥಿಕ ವ್ಯವಹಾರವನ್ನು ಚಾವಡಿಯಲ್ಲಿ ಕುಳಿತು ನಿರ್ಧರಿಸಲಾಗುತ್ತಿತ್ತು. ಇಲ್ಲಿರುವ ಖಜಾನೆಯನ್ನು ನೆಲದಲ್ಲಿ ಹೂತು ಭದ್ರಪಡಿಸಲಾಗಿದೆ. ಚಾವಡಿಯು ಭವ್ಯ ಕಲಾತ್ಮಕ ಪೋದಿಗೆ ಕಂಬವನ್ನು ಹೊಂದಿದೆ. ಒಂದು ಕಂಬದಂತೆ ಮತ್ತೊಂದರ ಕೆತ್ತನೆಯಿಲ್ಲ. ಈ ಪೋದಿಗೆಕಂಬದ ಮೇಲೆ ವಿಶಾಲವಾದ ಉಪ್ಪರಿಗೆ ರಾಜಬೀದಿಯ ಕಡೆಗೆ ತೆರೆದುಕೊಂಡಿದೆ. ಹಿಂದೆ ದೇವರ ಉತ್ಸವದ ಸಂದರ್ಭದಲ್ಲಿ ಮನೆಯ ಹೆಂಗಸರು ಉಪ್ಪರಿಗೆಯಿಂದಲೇ ಉತ್ಸವ ನೋಡುತ್ತಿದ್ದರು. ಉಪ್ಪರಿಗೆಯನ್ನು ಹತ್ತಿಹೋಗಲು ಚಾವಡಿಯ ಆಗ್ನೇಯ ಮೂಲೆಯಲ್ಲಿ ಮೆಟ್ಟಿಲುಗಳಿವೆ. ಚಾವಡಿಗೆ ಹೊದಿಸಿದ ಮುಚ್ಚಿಗೆ ತೊಲೆಗಳು ವಿಭಿನ್ನ ವಿನ್ಯಾಸದಿಂದ ಕೂಡಿದೆ. ಇದು ಬಸರೂರಿನ ಬಡಗಿಗಳ ಕಲಾಕೌಶಲ್ಯಕ್ಕೆ ಕೈಗನ್ನಡಿಯಾಗಿದೆ. ಉಪ್ಪರಿಗೆ ಮೆಟ್ಟಿಲಿನ ಎದುರುಗಡೆ ಗಣಪತಿಕೋಣೆಗೆ ಪ್ರವೇಶಿಸುವ ದ್ವಾರವಿದೆ. ಈ ಕೋಣೆಗೆ ಚಾವಡಿಯಿಂದ ಪ್ರವೇಶಿಸುವ ದ್ವಾರಬಾಗಿಲು ಇದೆ. ಇದನ್ನು ಗಣಪತಿಕೋಣೆ ಎನ್ನುವರು. ಇಲ್ಲಿ ಗಣಪತಿಯನ್ನು ಕೂರಿಸುವುದರಿಂದ ಗಣಪತಿ ಕೋಣೆಯೆಂದು ಕರೆಯುವ

ವಾಡಿಕೆ. ಗಣಪತಿಯನ್ನು ಕೂರಿಸಿದ ಸಂದರ್ಭದಲ್ಲಿ ಮನೆಯ ಒಳಪ್ರವೇಶಿಸಲು ಚಾವಡಿಯ ತುದಿಯಲ್ಲಿರುವ ಉಪ್ಪರಿಗೆ ಮೆಟ್ಟಿಲಿಗೆ ತಾಗಿಕೊಂಡಿರುವ ಬಾಗಿಲನ್ನೆ ಉಪಯೋಗಿಸಬೇಕು. ದೇವರನ್ನು ನೋಡಲು ಮುಖ್ಯದ್ವಾರವನ್ನೆ ಉಪಯೋಗಿಸಬೇಕು. ಗಣಪತಿ ಕೋಣೆಯ ಮಧ್ಯಭಾಗದಲ್ಲಿ ಬಾಗಿಲಿದ್ದು ಅದರಾಚೆಗೆ ಪಶ್ಚಿಮದಲ್ಲಿ ಉತ್ತರ-ದಕ್ಷಿಣವಾಗಿರುವ ಮುಚ್ಚಿಗೆಯ ಪಡಸಾಲೆ ಇದೆ. ಪಡಸಾಲೆಯನ್ನು ದಾಟಿ ಪಶ್ಚಿಮಕ್ಕೆ ಉತ್ತರ ದಕ್ಷಿಣವಾಗಿ ಒಂದು ಕೋಣೆ. ಈ ಕೋಣೆಯ ಆಗ್ನೇಯ ದಿಕ್ಕಿನಲ್ಲಿ ನೈವೇದ್ಯ ಅಡುಗೆ ಮನೆ. ನೈವೇದ್ಯ ಅಡುಗೆ ಕೋಣೆಯ ಮಧ್ಯಭಾಗದಲ್ಲಿ ಪಶ್ಚಿಮ ಮುಖವಾಗಿ ದೇವರ ಕೋಣೆ. ಹಿಂದೆಲ್ಲಾ ದೇವರಿಗೆ ನೈವೇದ್ಯ ಮಾಡಿ ಊಟಮಾಡುತ್ತಿದ್ದರಿಂದ ಮಡಿಯಲ್ಲಿ ಅಡುಗೆ ಮಾಡಬೇಕಿತ್ತು. ಈ ಕೋಣೆಯ ವಾಯುವ್ಯ ದಿಕ್ಕಿನಲ್ಲಿ ಪೂರ್ವದ ಕಡೆಗೆ ಹತ್ತಿಹೋಗುವ ಉಪ್ಪರಿಗೆ ಮೆಟ್ಟಿಲುಗಳಿವೆ.ಈ ಮೆಟ್ಟಿಲುಗಳ ಮೇಲೆ ಏರಿಹೋದರೆ ವಿಶಾಲವಾದ ಕೋಣೆ ಇದ್ದು, ಅದು ಚಾವಡಿಯ ಮುಂದಿರುವ ಉಪ್ಪರಿಗೆಯನ್ನು ಸೇರಿಕೊಳ್ಳುತ್ತದೆ. ಹಿಂದೆ ಚಾವಡಿಯಲ್ಲಿ ಆರ್ಥಿಕ ವ್ಯವಹಾರಗಳು ನಡೆಯುವಾಗ ಮನೆಯ ಹೆಂಗಸರು ಉಪ್ಪರಿಗೆಗೆ ಹೋಗಲು ಒಳಗಿನ ಮೆಟ್ಟಿಲುಗಳನ್ನು ಉಪಯೋಗಿಸುತ್ತಿದ್ದರು. ನೈವೇದ್ಯ ಅಡುಗೆ ಕೋಣೆಯ ಪಶ್ಚಿಮಕ್ಕೆ ಪೂರ್ವ ಪಶ್ಚಿಮವಾಗಿ ವಿಶಾಲವಾದ ಊಟದ ಮನೆಯಿದೆ. ಒಂದೇ ಸಲಕ್ಕೆ ನೂರಾರು ಜನ ಕೂತು ಸಹ ಭೋಜನ ಮಾಡಬಹುದಾದ ವ್ಯವಸ್ಥೆ. ಈ ಊಟದ ಕೋಣೆ ಅಥಿತಿಗಳ ಕೋಣೆ ಮತ್ತು ನಡುಮನೆಯ ಮಧ್ಯದಲ್ಲಿದೆ. ಬಣಸಾಲೆ ಮನೆಯವರು ಶ್ರೀಮಂತರು ಮಾತ್ರವಲ್ಲದೆ ಅವಿಭಕ್ತ ಕುಟುಂಬದವರಾಗಿದ್ದರು. ಆ ಕಾಲದ ಬಂಡಸಾಲೆ ಮನೆಯಲ್ಲಿ ಕನಿಷ್ಠ ನೂರು ಜನ ಇರುತ್ತಿದ್ದರು. ಇವರು ವ್ಯಾಪಾರಸ್ಥರಾಗಿರುವುದರಿಂದ ಅಥಿತಿಗಳು ಬಹಳ ಮಂದಿ ವ್ಯಾಪಾರದ ಉದ್ದೇಶದಿಂದ ಇವರ ಮನೆಗಳಿಗೆ ದೂರದಿಂದ ಬರುತ್ತಿದ್ದರು. ಊಟದ ಕೋಣೆಯ ಆಗ್ನೇಯ ದಿಕ್ಕಿನಲ್ಲಿ ಗಂಜಿ ಅಡುಗೆಮನೆ. ಹಿಂದೆ ಕೆಲಸದವರಿಗೆ ಬೆಳಗ್ಗಿನ ಹೊತ್ತು ಗಂಜಿ ಉಣ್ಣುವ ಅಭ್ಯಾಸವಿತ್ತು. ಈ ಅಡುಗೆಮನೆಯಲ್ಲಿ ಬೇಯಿಸಿದ ಆಹಾರ ಪದಾರ್ಥ ನೈವೇದ್ಯವಾಗುವುದಿಲ್ಲ. ಇದು ಕೆಲಸದವರಿಗೆ ಸಂಬಂಧಿಸಿದ ಅಡುಗೆ ಮನೆಯಾಗಿದೆ. ಊಟದ ಮನೆಯಿಂದ ದಕ್ಷಿಣಕ್ಕೆ ಬಚ್ಚಲು ಮನೆ, ನೈರುತ್ಯದಲ್ಲಿ ಬಾವಿಕಟ್ಟೆ. ಬಾವಿಯಿಂದ ದಕ್ಷಿಣ ಉತ್ತರವಾಗಿ ವಿಶೇಷ ಅಡುಗೆ ಮನೆ. ವಿಶೇಷ ಸಮಾರಂಭಗಳಿಗೆ ಮಾತ್ರ ಬಳಕೆಯಾಗುವಂತದ್ದು. ಇಲ್ಲಿ ಕುಟ್ಟುವ ಒರಲುಗಳು, ದೊಡ್ಡ ಒಲೆಗಳು ಇವೆ. ವಿಶೇಷ ಅಡುಗೆ ಮನೆಯಿಂದ ಪಶ್ಚಿಮಕ್ಕೆ ಹೊರಬಾಗಿಲು ಅದರಾಚೆ ತೋಟದಬಾವಿ, ಸ್ನಾನದಕೋಣೆ, ಸೂತಕದ ಸಮಯದಲ್ಲಿ ಒಳಬಾವಿಯನ್ನು ಉಪಯೋಗಿಸುವಂತಿಲ್ಲ.

ಸ್ನಾನದ(ಬಚ್ಚಲು)ಕೋಣೆಯಿಂದ ಪೂರ್ವಕ್ಕೆ ಉದ್ದವಾದ ದನದ ಹಟ್ಟಿ ಇದೆ. ಸುಮಾರು ನೂರಕ್ಕೂ ಹೆಚ್ಚು ಹಸು, ಎಮ್ಮೆ, ಕೋಣಗಳನ್ನು ಕಟ್ಟಬಹುದಾದ ಹಟ್ಟಿಹಣೆ[೧]

ವ್ಯವಸ್ಥೆ ಇದೆ. ಹಟ್ಟಿಯ ಬಾಗಿಲು ರಸ್ತೆಯ ಕಡೆಗೆ ಚಾಚಿಕೊಂಡಿದೆ. ಚಾವಡಿಯಲ್ಲಿ ಕೂತು ದನಕರುಗಳು ಒಳಹೊರಗೆ ಹೋಗುವುದನ್ನು ಗಮನಿಸಬಹುದು. ಊಟದ ಮನೆಯಿಂದ ಉತ್ತರಕ್ಕೆ ಕಿರಿದಾದ ಚಾವಡಿ, ಚಾವಡಿಯ ಎದುರಿಗೆ ಹೆರಿಗೆಕೋಣೆ ಮತ್ತೊಂದು ಮಲಗುವಕೋಣೆ. ಇವೆರಡರ ಮಧ್ಯದಲ್ಲಿ ಉಪ್ಪರಿಗೆಗೆ ಹೋಗುವ ಮೆಟ್ಟಿಲು. ಉಪ್ಪರಿಗೆ ಮೇಲೂ ಕೂಡಾ ಮಲಗುವ ಕೋಣೆಗಳು ಅವುಗಳು ಮನೆಯಿಂದ ಹೊರಭಾಗದಲ್ಲಿದ್ದು ಪ್ರತ್ಯೇಕವಾಗಿದೆ. ವ್ಯಾಪಾರಕ್ಕೆ ಹೊರಗಿನಿಂದ ಬರುವ ಅಥಿತಿಗಳಿಗೆ ಮಲಗಲು ನೀಡುತ್ತಿದ್ದಿರಬೇಕು. ಅಲ್ಲದೆ ಮನೆಯ ಒಳಗೆ ಆಹಾರ ಸಾಮಾಗ್ರಿಯನ್ನು ಸಂಗ್ರಹಿಸಿ ಇಡುವ ದೊಡ್ಡದೊಡ್ಡ ಜಾಡಿಗಳಿವೆ. ಅಕ್ಕಿ ಮತ್ತು ಭತ್ತವನ್ನು ದಾಸ್ತಾನು ಮಾಡುವ ಕೋಣೆಗಳು ಮನೆಯ ವಾಯುವ್ಯ ದಿಕ್ಕಿನಲ್ಲಿದೆ. ಈ ಉಪ್ಪರಿಗೆ ಎದುರು ವಿಶಾಲವಾದ ಅಂಗಳ ಮತ್ತು ತುಳಸಿಕಟ್ಟೆ ಇದೆ. ಅಂಗಳದ ಎದುರು ಹೊರ ಹೋಗುವ ದೊಡ್ಡದ್ವಾರ ಇದನ್ನು ದಿಡ್ಡಿಬಾಗಿಲು ಎಂದು ಕರೆಯುತ್ತಾರೆ. ಬಣಸಾಲೆ ಮನೆಗಳು ೧೫-೨೦ ಅಂಕಣದ ಮನೆಗಳಾಗಿದೆ. ಊಟದ ಮನೆ ಮತ್ತು ಹಟ್ಟಿಯ ನಡುವೆ ಸಣ್ಣ ಅಂಗಳ ಇರುತ್ತದೆ. ಈ ಮನೆಗಳು ಸಾಮಾನ್ಯವಾಗಿ ನದಿಯ ದಡದಲ್ಲಿರುತ್ತದೆ.

ಬಣಸಾಲೆ ಮನೆಗಳಲ್ಲಿರುವವರು ವ್ಯಾಪಾರಸ್ಥರು. ಗಣೇಶೋತ್ಸವ, ನವರಾತ್ರಿಯನ್ನು ವಿಜೃಂಭಣೆಯಿಂದ ಆಚರಿಸುವರು. ಅದಕೋಸ್ಕರ ಗಣಪತಿಕೋಣೆ ಎನ್ನುವ ಕೋಣೆ ಇದೆ. ಬಣಸಾಲೆ ಮನೆಯ ಒಕ್ಕಲುಗಳು ಪ್ರತಿವರ್ಷ ಚಾವಡಿಯಲ್ಲಿ ಎರಡು ಕಾಯಿ ಇಟ್ಟು ಪೂಜೆ ಸಲ್ಲಿಸುತ್ತಾರೆ. ಪೂಜೆ ಸಲ್ಲಿಸಿದವರಿಗೆ ಊಟ ಮತ್ತು ತಲೆಗೆ ಎಣ್ಣೆ ನೀಡುವ ಕ್ರಮ ಇಂದಿಗೂ ಇದೆ. ಬಣಸಾಲೆ ಮನೆಗಳು ಬಸರೂರಿನಲ್ಲಿ ಇಂದಿಗೂ ಉಳಿದುಕೊಂಡಿದೆ. ಬಣಸಾಲೆ ಮನೆ ಮಂಡಿಕೇರಿಯ ಪ್ರಮುಖ ಕಲಾತ್ಮಕ ಭೌತಿಕ ಸಂಸ್ಕೃತಿಯಾಗಿದೆ. ಬಣಸಾಲೆ ಮನೆಗಳು ಬಸರೂರಿನ ಜನಪದ ವಾಸ್ತು ವಿನ್ಯಾಸಕ್ಕೆ ಸಾಕ್ಷಿಯಾಗಿದೆ.

### ೬.೨.೪.ಅಗ್ರಹಾರ ಬ್ರಾಹ್ಮಣರ ಮನೆಗಳು

ವಿಜಯನಗರದ ಅರಸರ ಕಾಲದಲ್ಲಿ ಅಗ್ರಹಾರಗಳು ಬಸರೂರಿನಲ್ಲಿ ಸ್ಥಾಪನೆಯಾಯಿತು. ಕ್ರಿ.ಶ ೧೫೩೧ರ ಬಸರೂರಿನ ಶಾಸನ ಅಗ್ರಹಾರ ಲೋಕಾಚಾರ್ಯಅಯ್ಯನವರು ಎಂಬ ವ್ಯಕ್ತಿಯ ಉಲ್ಲೇಖ ಮಾಡಿದೆ. ಅಗ್ರಹಾರ ಬ್ರಾಹ್ಮಣರ ಮನೆಗಳೆಂದರೇ ಒಂದು ಕಾಲದಲ್ಲಿ ಬ್ರಾಹ್ಮಣರಿಗೆ ವಿದ್ಯೆ ನೀಡಲು ನಿರ್ಮಿಸಿದ ಸಮೂಹ ಶಿಕ್ಷಣ ಸಂಸ್ಥೆಯಾಗಿದೆ. "ಅಗ್ರಹಾರವೆಂದರೆ ಶ್ರೇಷ್ಠರಿಗೆ ಕೊಟ್ಟಿರುವ ಸ್ಥಳ ಅಥವಾ ಊರು ಎಂದರ್ಥ. ಇವುಗಳು ಪ್ರಾಚೀನ ವಿದ್ಯಾಭ್ಯಾಸದ ಕೇಂದ್ರಗಳಾಗಿದ್ದವು" (ಚಿದಾನಂದ ಮೂರ್ತಿ.ಎಂ;೨೦೦೮;ಪುಟ:೨೩೦). ಬಸರೂರಿನ ಮೂಡುಕೇರಿ ಮತ್ತು ಪಡುವ ಕೇರಿಯಲ್ಲಿ ಅಗ್ರಹಾರಗಳಿವೆ. ಇವುಗಳಲ್ಲಿ ಮನೆಯೊಳಗೆ ದೇವರಗುಡಿ ಇರುವ ಮೂಡುಕೇರಿಯ

ಒಂದು ಮನೆ ಮತ್ತು ಪಡುವಕೇರಿಯ ಒಂದು ಮನೆಯನ್ನು ಅಧ್ಯಯನದ ವ್ಯಾಪ್ತಿಯೊಳಗೆ ತರಲಾಗಿದೆ. ಈ ಮನೆಗಳು ಪೂರ್ವ ಮತ್ತು ಉತ್ತರದ ಕಡೆಗೆ ಮುಖಮಾಡಿಕೊಂಡು ಇರುತ್ತದೆ. ಮೂಡು ದಿಕ್ಕು ಸೂರ್ಯನ ಮತ್ತು ದೇವೇಂದ್ರನ ದಿಕ್ಕೆಂದು ಮತ್ತು ಬಡಗು ದಿಕ್ಕು ಕುಬೇರನ ದಿಕ್ಕಾಗಿರುವುದರಿಂದ ಈ ಎರಡು ದಿಕ್ಕುಗಳಿಗೆ ಮಾತ್ರ ಮನೆಯ ಮುಖ್ಯದ್ವಾರವನ್ನು ಮಾಡುತ್ತಿದ್ದರು. ಅಗ್ರಹಾರ ಬ್ರಾಹ್ಮಣರ ಮನೆಯ ಅಂಗಳದಲ್ಲಿ ದೇವರಗುಡಿ ಇರುತ್ತದೆ. ಇದರ ಆರಂಭವು ಸಣ್ಣ ಹೆಬ್ಬಾಗಿಲಿನ ರಚನೆಯಿಂದ ಕೂಡಿರುತ್ತದೆ. ಆದರೆ ಬಂಟರ ಮನೆಗಳಂತೆ ಹೊರಹೆಬ್ಬಾಗಿಲು ಇರುವುದಿಲ್ಲ. ಒಳಹೆಬ್ಬಾಗಿಲು ಅತ್ಯಂತ ಸರಳವಾಗಿದ್ದು ಪ್ರವೇಶ ದ್ವಾರದಂತಿದೆ. ಪೋದಿಗೆ ಕಂಬಗಳಿರುವುದಿಲ್ಲ. ಒಳಹೆಬ್ಬಾಗಿಲಿನ ಎರಡು ಬದಿಗಳಲ್ಲಿ ಚಾವಡಿ. ಈ ಚಾವಡಿ ದೇವರಗುಡಿಗೆ ಅಭಿಮುಖವಾಗಿರುತ್ತದೆ. ಅಗ್ರಹಾರ ಬ್ರಾಹ್ಮಣರ ಮನೆಯ ಒಳಹೆಬ್ಬಾಗಿಲು ಚಾವಡಿ ವಿಶಾಲವಾಗಿರುತ್ತದೆ. ಈ ಚಾವಡಿಯಲ್ಲಿ ಜಾತಕ, ಜೋತಿಷ್ಯವನ್ನು ಹೇಳುತ್ತಾರೆ. ಅಗ್ರಹಾರ ಮನೆಗಳಲ್ಲಿ ಮಡಿವಂತಿಕೆ ಜಾಸ್ತಿ. ಹೆರಿಗೆ ಮನೆಯ ಹೊರಗೆ ಆಗಬೇಕು. ಮನೆಯ ಹೆಂಗಸರು ಅಶೌಚವಾದರೆ ಅವರಿಗೆ ತಿರುಗಲು ಬೇರೆ ದಾರಿಗಳಿವೆ. ಅಗ್ರಹಾರ ಮನೆಗಳಲ್ಲಿ ಸ್ನಾನ ಮತ್ತು ಶೌಚ ಆವರಣದ ಹೊರಗಡೆ ನಡೆಯುತ್ತದೆ. ಕೆಲವು ಮನೆಗಳಲ್ಲಿ ಮನೆಯವರಿಗೆ ಮತ್ತು ದೇವರಿಗೆ ಬೇರೆ ಬೇರೆ ಬಾವಿಗಳಿವೆ. ಅಡುಗೆ ಮನೆ ವಾಯುವ್ಯದಲ್ಲಿರುತ್ತದೆ. ಅಡುಗೆ ಮನೆಗೆ ತಾಗಿ ಊಟದ ಕೋಣೆ, ಚಾವಡಿಗೆ ತಾಗಿಕೊಂಡು ಕೋಣೆ ಇರುತ್ತದೆ. ಒಳಹೆಬ್ಬಾಗಿಲಿನ ಇನ್ನೊಂದು ಭಾಗದ ತುದಿಯಲ್ಲಿ ಕೋಣೆ ಇರುತ್ತದೆ. ಮನೆಯು ಪೂರ್ವದಿಕ್ಕಿಗೆ ಮುಖ ಮಾಡಿದ್ದರೆ ಪಶ್ಚಿಮಕ್ಕೆ ಹೊರಬಾಗಿಲು ಇರುತ್ತದೆ. ಉತ್ತರ ಮುಖವಾದರೆ ದಕ್ಷಿಣದಲ್ಲಿ ಹೊರಬಾಗಿಲು ಇರುತ್ತದೆ. ದೇವರ ಗುಡಿಯ ಈಶಾನ್ಯ ದಿಕ್ಕಿನಲ್ಲಿ ದೇವರ ಬಾವಿ ಇರುತ್ತದೆ. ಈ ಮನೆಗಳು ಅತ್ಯಂತ ಸರಳವಾಗಿದ್ದು ಇತರರ ಮನೆಗಳಂತೆ ಕೊಟ್ಟಿಗೆಯಾಗಲಿ, ಅಂಗಳವಾಗಲಿ ಇರುವುದಿಲ್ಲ. ಹೆಬ್ಬಾಗಿಲಿನ ಚಾವಡಿ ಮಲಗುವ ಜಾಗವಾಗಿದೆ. ಈ ಮನೆಯಲ್ಲಿ ಮಲಗುವ ಕೋಣೆಯನ್ನು ಹೊರತು ಪಡಿಸಿದರೆ ಬೇರೆ ಯಾವ ಕೋಣೆಗಳು ಇರುವುದಿಲ್ಲ. ಬಸರೂರಿನ ಈ ಮನೆಗಳು ವಿದ್ಯೆ ಕಲಿಸುವ ಗುರುಗಳು ವಾಸ ಮಾಡುವ ಮನೆಗಳಾಗಿದೆ ಎಂಬುದು ಅವುಗಳ ಸಂರಚನೆಯಿಂದ ತಿಳಿಯುತ್ತದೆ.

೬.೨.೫. ಕುಶಲಕರ್ಮಿಗಳ ಮನೆಗಳು

ಬಸರೂರಿನಲ್ಲಿ ಗುಡಿಕೈಗಾರಿಕೆಗಳು ಒಂದು ಕಾಲಕ್ಕೆ ಜನಪ್ರಿಯವಾಗಿತ್ತು. ಹಿತ್ತಾಳೆ, ಕಂಚಿನ ಲೋಹದಿಂದ ತಯಾರಿಸಿದ ವಸ್ತುಗಳನ್ನು ಚಿನ್ನ, ಬೆಳ್ಳಿಯ ಆಭರಣ, ಕೈಮಗ್ಗದಿಂದ ತಯಾರಿಸಿದ ಬಟ್ಟೆ, ಮರದ ಕೆತ್ತನೆಯ ವಸ್ತು ತಯಾರಿಸುವ ಮತ್ತು ಮಾರುವ ಪ್ರದೇಶ

ಬಸರೂರಾಗಿತ್ತು. ಬಸರೂರಿನಲ್ಲಿ ಒಂದು ಕಾಲಕ್ಕೆ ಗುಡಿಗಾರರು, ಸೆಟ್ಟಿಕಾರರು, ಕಂಚುಗಾರರು, ಪಟ್ಟೆಕಾರರು ವಾಸವಾಗಿರುವ ಪ್ರದೇಶವಾಗಿದೆ. ಈ ಎಲ್ಲಾ ಜನಸಮುದಾಯಗಳ ಜೀವನ ನಿರ್ವಹಣೆ ಕರಕುಶಲ ವಸ್ತುಗಳನ್ನು ತಯಾರಿಸಿ ಮಾರುವುದರಿಂದ ನಡೆಯುತ್ತಿತ್ತು. ಈ ಅಧ್ಯಾಯಲ್ಲಿ ಕೈಮಗ್ಗದ ಬಟ್ಟೆ ತಯಾರಿಸುವ ಸೆಟ್ಟಿಕಾರರ ಮನೆಯ ರಚನೆಯನ್ನು ಸ್ಥೂಲವಾಗಿ ಅಧ್ಯಯನ ಮಾಡಲಾಗಿದೆ.

(ಅ) ನೇಕಾರರ ಮನೆಗಳು

ಬಸರೂರಿನಲ್ಲಿರುವ ಸೆಟ್ಟಿಕಾರರು ಹೆಚ್ಚಿನವರು ನಿರ್ದಿಷ್ಟ ವರಮಾನವಿಲ್ಲದ ಭೂರಹಿತರು. ಇವರನ್ನು ಸೆಟ್ಟೆಕಾರರು ಅಥವಾ ಸಾಲಿಯರು ಎಂದು ಬಸರೂರಿನಲ್ಲಿ ಕರೆಯುತ್ತಾರೆ. ಇವರು ನೆಯ್ಗೆಯನ್ನು ಮೂಲಕಸುಬಾಗಿ ಮಾಡಿಕೊಂಡಿರುದರಿಂದ ನೇಕಾರರೆಂದು ಕರೆಯುತ್ತಾರೆ. ನೇಕಾರರಾಗಿರುವ ಸೆಟ್ಟಿಕಾರರು ಕೇರಿಗಳಲ್ಲಿ ವಾಸಿಸುತ್ತಾರೆ. ಬಸರೂರಿನಲ್ಲಿ ಸೆಟ್ಟಿಗಾರರು ವಾಸವಾಗಿರುವ ಕೇರಿಗೆ ಸಾಲಿಯರಕೇರಿಯೆಂದು ಕರೆಯುತ್ತಾರೆ. ಬಸರೂರಿನ ಸೆಟ್ಟಿಕಾರರು ಬಸರೂರಿನ ದೇವಾಲಯದ ಕಟ್ಟುಕಟ್ಟೆಲೆಯವರು. ತೇರಿಗೆ ಪತಾಕೆ ಕಟ್ಟುವವರು. ವಿಜಯನಗರದ ಅರಸರ ಕಾಲದಲ್ಲಿ ಸೆಟ್ಟಿಕಾರರಿಗೆ ಹೆಚ್ಚಿನ ಮನ್ನಣೆ ದೊರಕಿದಂತೆ ಕಾಣುತ್ತದೆ. ನೇಕಾರರ ಮನೆಗಳು ಅತ್ಯಂತ ಸರಳವಾಗಿದ್ದು ಅಡುಗೆಮನೆ, ಜಗುಲಿ, ಕೋಣೆ ಮಾತ್ರ ಇರುತ್ತದೆ. ಮನೆ ಮತ್ತು ಮಗ್ಗ ನೇಕಾರರ ಜೀವನದ ಅವಿಭಾಜ್ಯ ಅಂಗವಾಗಿತ್ತು ಇಡಿ ಮನೆಯವರು ಈ ಕ್ರಿಯೆಯಲ್ಲಿ ಭಾಗವಹಿಸುತ್ತಾರೆ. ಆ ಕಾರಣದಿಂದ ಮನೆಗಳೇ ಮಗ್ಗಗಳಾಗುತ್ತಿದ್ದವು. ಭೂಮಾಲಿಕರ ಮನೆಯಲ್ಲಿದ್ದಂತೆ ದನದ ಕೊಟ್ಟಿಗೆಯಾಗಲಿ, ಬಾವಿಯಾಗಲಿ, ಗರಡಿಯಾಗಲಿ ಇರುವುದಿಲ್ಲ. ನೇಕಾರರ ಪ್ರಾಥಮಿಕ ಬಯಕೆಯನ್ನು ಈಡೇರಿಸುವ ನಿಟ್ಟಿನಲ್ಲಿ ಅದು ನಿರ್ಮಾಣವಾಗಿರುತ್ತದೆ. (ಚಿತ್ರ ೧೦)

ನೇಕಾರರ ಮನೆಯ ಪ್ರವೇಶದ ಬಾಗಿಲು ಕಿರಿದಾಗಿದ್ದು, ಸಾಮಾನ್ಯವಾಗಿ ಬಾಗಿಲಿಲ್ಲದ ರಚನೆಯಾಗಿದೆ. ಮನೆಯನ್ನು ಪ್ರವೇಶಿಸಿದ ಕೂಡಲೇ ತಲೆಯನ್ನು ತಗ್ಗಿಸಿ ಹೋಗುವಂತ ಕಡುಮಾಡು[೧೩] ಇರುತ್ತದೆ. ಇದು ಅವರ ಆರ್ಥಿಕ ಪರಿಸ್ಥಿತಿಯನ್ನು ತಿಳಿಸುತ್ತದೆ. ಕಡುಮಾಡನ್ನು ಬಿದಿರು, ತೆಂಗಿನ ಪಕ್ಕಾಸಿಯಿಂದ ನಿರ್ಮಿಸಿ ಅದರ ಮೇಲೆ ಹಂಚನ್ನು ಹೊದಿಸಿರುತ್ತಾರೆ. ಕಡುಮಾಡಿನ ಮುಂದಕ್ಕೆ ಸಣ್ಣ ತೆರೆದ ಜಗುಲಿ ಇರುತ್ತದೆ. ನಡುಮನೆಗೆ ತಾಗಿಕೊಂಡು ಬಲ ಮತ್ತು ಎಡ ಭಾಗದಲ್ಲಿ ಕೋಣೆಗಳಿರುತ್ತವೆ. ಪೂರ್ವದಿಕ್ಕಿನಲ್ಲಿ ಉತ್ತರ ದಕ್ಷಿಣವಾಗಿ ಅಡುಗೆ ಮನೆ ಇರುತ್ತದೆ. ನಡುಮನೆಯ ಪಶ್ಚಿಮದಲ್ಲಿ ಉತ್ತರ ದಕ್ಷಿಣವಾಗಿ ಮತ್ತೊಂದು ಕೋಣೆಯಿರುತ್ತದೆ. ಕಡುಮಾಡಿನ ವಾಯುವ್ಯದಿಕ್ಕಿನಲ್ಲಿ ಮಗ್ಗ ಇರುತ್ತದೆ. ಮಗ್ಗದಲ್ಲಿ ಪಶ್ಚಿಮಕ್ಕೆ ಮುಖ ಮಾಡಿ ಕುಳಿತುಕೊಳ್ಳುವ ವ್ಯವಸ್ಥೆ ಇರುತ್ತದೆ. ಹನ್ನೆರಡುಕೋಲು ಉದ್ದ ಮತ್ತು ಆರುಕೋಲು ಅಗಲಕ್ಕೆ ಮಗ್ಗವನ್ನು ನಿರ್ಮಿಸುತ್ತಿದ್ದರು.

ನೇಕಾರರ ಮನೆಗಳಲ್ಲಿ ದೇವರ ಕೋಣೆ ಎಂಬುದಿಲ್ಲ. ಮೀಸಲಿಡುವುದು ಅಡುಗೆಕೋಣೆಯಲ್ಲಿ. ಎಲ್ಲಾ ಬಗೆಯ ಶುಭಕಾರ್ಯಗಳು ಜಗಲಿಯಲ್ಲಿ ನಡೆಯುತ್ತದೆ. ಕೊಲೆಭೂತ[೧೪], ಜಕಣೆ ಮುಂತಾದ ಸಂದರ್ಭಗಳಲ್ಲಿ ಹಾಕ್‌ಬೆಚ್ಚುವುದು[೧೫] ಅಡುಗೆ ಮನೆಯಲ್ಲಿ. ವಾಯುವ್ಯ ದಿಕ್ಕಿನಲ್ಲಿರುವ ಕೋಣೆ ಹೆರಿಗೆ ಕೋಣೆಯಾಗಿರುತ್ತದೆ. ನೇಕಾರರು ಸ್ನಾನ ಮತ್ತು ಶೌಚಕ್ಕೆ ಮನೆಯ ಹೊರಭಾಗವನ್ನು ಅವಲಂಬಿಸುತ್ತಾರೆ. ತೆಂಗಿನ ಮರದ ಸೋಗೆ, ಹುಲ್ಲು, ಬಿದಿರನ್ನು ಉಪಯೋಗಿಸಿ ಸರಳವಾದ ಸ್ನಾನದ ಕೋಣೆ ನಿರ್ಮಿಸಿಕೊಳ್ಳುತ್ತಾರೆ.

### ೬.೨.೬.ದೈವದ ಮನೆ ಮತ್ತು ಗರಡಿ

ಕೃಷಿ ಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ದೈವಗಳು ಪ್ರಧಾನ ಮಾಧ್ಯಮವಾಗಿರುತ್ತವೆ. ಜನಪದರ ಹುಟ್ಟು ಮತ್ತು ಸಾವಿನ ಆಚರಣೆಗಳಿಗೆ ದೈವದ ಮನೆಗಳು ಮುಖ್ಯವಾಗುತ್ತದೆ. ಮಗು ಹುಟ್ಟಿದ ನಂತರ ಬಾಣಂತಿಯ ಸೂತಕ ದೈವಕ್ಕೆ ಪೂಜೆ ನೀಡಿದ ಮೇಲೆ ಕಳೆಯುತ್ತದೆ. ತಿಂಗಳು ಮಾಡಿದ ಬಾಣಂತಿ ದೈವದ ಮನೆಗೆ ಹೋಗಿ ಪೂಜೆ ಕೊಟ್ಟು ಬರುತ್ತಾಳೆ. ವ್ಯಕ್ತಿ ಸತ್ತ ನಂತರ ಜಕಣಿಕಾಯಿಯನ್ನು ಹಾಕುವುದು ಕೂಡಾ ದೈವದ ಮನೆಯಲ್ಲಿ. ಸತ್ತ ವ್ಯಕ್ತಿಯ ಆತ್ಮವು ದೈವ ಸ್ವೀಕಾರ ಮಾಡಿದ ಮೇಲೆ ಆತನಿಗೆ ಸದ್ಗತಿ. ದೈವದ ಮನೆಗೆ ಸೇರದ ಜಕಣಿ ಅನ್ನನೀರು ಇಲ್ಲದೆ ಒದ್ದಾಡುತ್ತದೆ. ಈ ಕಾರಣದಿಂದ ಜನಪದರಿಗೆ ದೈವಗಳು ಪ್ರಧಾನವಾಗಿರುತ್ತದೆ. ದೈವಸ್ಥಾನದಲ್ಲಿರುವ ದೈವಗಳು ತಮ್ಮ ಕಾರಣಿಕದಿಂದ ಪ್ರಧಾನ ಮತ್ತು ಪರಿವಾರ ದೈವಗಳಾಗಿವೆ. ದೈವಗಳು ಮನುಷ್ಯರ ಹಾಗೆ ಎಂದು ಜನಪದರು ಭಾವಿಸುತ್ತಾರೆ. ಅವುಗಳಿಗೂ ಅನ್ನ ನೀರು ಇಡುತ್ತಾರೆ. ಮನೆಗಳನ್ನು ಕಟ್ಟುತ್ತಾರೆ. ದೈವಗಳಿಗಾಗಿ ಕಟ್ಟುವ ಮನೆಗಳೆ ದೈದ[೧೬] ಮನೆಯೆಂದು ಕರೆಯುವುದು ವಾಡಿಕೆ.

ದೈವದ ಆರಾಧನ ಸ್ಥಳಗಳು ವೈವಿಧ್ಯಪೂರ್ಣವಾಗಿರುತ್ತದೆ. ದೈವದಮನೆ, ಗರಡಿ ಎಂಬ ವಿಭಾಗವನ್ನು ಮಾಡಿಕೊಳ್ಳಬಹುದು. ದೈವಗಳು ಒಂಟಿಯಾಗಿ ಮತ್ತು ಸಾಮೂಹಿಕವಾಗಿ ನೆಲೆಸಿರುತ್ತವೆ. ಈ ದೈವದ ಮನೆಗಳನ್ನು ಪಾರಂಪರಿಕ ಜ್ಞಾನಗಳಿಗನುಗುಣವಾಗಿ ನಿರ್ಮಿಸಿರುತ್ತಾರೆ. "ದೈವಗಳಸ್ಥಾನ ಅಥವಾ ಗುಡಿಗಳಿಗೆ ನಿರ್ದಿಷ್ಟವಾದ ಆಯಾ, ಪ್ರಮಾಣವಿಲ್ಲ ಅನುಕೂಲಕ್ಕೆ ತಕ್ಕಂತೆ ದೈವಸ್ಥಾನಗಳನ್ನು ದೈವಗಳಿಗೆ ಹೊಂದಿಕೊಂಡಂತೆ ಆಯತ ಅಥವಾ ಚೌಕಾಕಾರವಾಗಿಯೂ ನಿರ್ಮಿಸಬಹುದು" (ಬಾಬುಅಮೀನ ಬನ್ನಂಜೆ; ೨೦೦೭; ಪುಟ:೮೩)

#### (ಅ) ದೈವದ ಮನೆಗಳು

ಬಸರೂರಿನಲ್ಲಿ ನಲವತ್ತೆಂಟು ದೈವದ ಮನೆಗಳಿವೆ, ನಾಲ್ಕು ಗರಡಿಗಳಿವೆ. ದೈವಸ್ಥಾನಗಳನ್ನು ಬಸರೂರಿನ ಮಾಗಣೆಯಲ್ಲಿ ದೈವದ ಮನೆಯೆಂದು ಕರೆಯುವುದು

ವಾಡಿಕೆ. ಈ ದೈವದ ಮನೆಗಳನ್ನು ಮತ್ತು ಗರಡಿಗಳನ್ನು ನಿರ್ಮಾಣ ಮಾಡುವಾಗ ಕೆಲವು ಸಾಮಾನ್ಯ ನಿಯಮವನ್ನು ಪಾಲಿಸುತ್ತಾರೆ. ಬಸರೂರಿನ ಮಾಗಣಿಗಳಲ್ಲಿ ಮೂರುವರೆ ಅಡಿ ಮತ್ತು ಹತ್ತು ಅಡಿ ಚಚ್ಚೌಕಾಕಾರದಲ್ಲಿ ದೈವದಮನೆಗಳನ್ನು ಕಟ್ಟುತ್ತಾರೆ. ದೈವದಮನೆ ಮತ್ತು ಗರಡಿ ಮನೆಗಳನ್ನು ಸಾಮಾನ್ಯವಾಗಿ ಉತ್ತರ ಅಥವಾ ಪೂರ್ವದಿಕ್ಕಿಗೆ ಮುಖವಿರುವಂತೆ ಕಟ್ಟುತ್ತಾರೆ. ದೇವಾಲಯಗಳಂತೆ ಗರ್ಭಗುಡಿ ಇರುವುದಿಲ್ಲ. ದೈವ ಮತ್ತು ಭಕ್ತರು ಎಂಬ ಶ್ರೇಣಿಕರಣವಿಲ್ಲ. ದೈವದ ಮನೆಗಳನ್ನು ನಿರ್ಮಿಸುವಾಗ ಸಾಮಾನ್ಯವಾಗಿ ಕೆಂಪು ಕಲ್ಲುಗಳನ್ನು ಬಳಸುತ್ತಾರೆ. ಹಳೆಯ ಕಲ್ಲು, ಮರಗಳನ್ನು ಹಾಕಿ ದೈವದಮನೆ ಕಟ್ಟುವುದಿಲ್ಲ. ದೈವದಮನೆಯಲ್ಲಿ ಒಂದು ಸುತ್ತಿಗೆ ಒಂದು ದೈವದ ಲೆಕ್ಕಚಾರವಿದೆ. ಹಾಗಾಗಿ ಪ್ರಧಾನ ದೈವಗಳನ್ನು ಎತ್ತರವಾದ ಮರದ ಪೀಠ ಅಥವಾ ಕಲ್ಲು ಕಂಬದ ಮೇಲೆ ನಿಲ್ಲಿಸಿರುತ್ತಾರೆ. ಪರಿವಾರ ದೈವಗಳನ್ನು ಪ್ರಧಾನ ದೈವದ ಎಡ ಮತ್ತು ಬಲಭಾಗದಲ್ಲಿ ಮರ, ಕಲ್ಲಿನ ಪೀಠಮಾಡಿ ನಿಲ್ಲಿಸಿರುತ್ತಾರೆ. ಕೆಲವು ಕಡೆ ದೈವಗಳಿಗೆ ಮೋಡ ಮಾಡಿರುತ್ತಾರೆ. ದೈವದ ಉರುಗಳನ್ನು ಸಣ್ಣ ಮನೆಯಾಕಾರದ ಗೂಡಿನಲ್ಲಿ ಇಡುತ್ತಾರೆ. ಅದಕ್ಕೆ ಮೋಡ ಎನ್ನುತ್ತಾರೆ. ಪರಿವಾರದೈವಗಳ ಜೊತೆಗೆ ಅವುಗಳ ಗಣಗಳು ಇರುತ್ತವೆ. ಗಣಗಳು ದೈವದ ಗಾತ್ರಕ್ಕಿಂತ ಚಿಕ್ಕದಾಗಿರುತ್ತದೆ. ದೈವದ ಮನೆಯ ಒಳಗೆ ಮತ್ತು ಹೊರಗೆ ಬೇರೆ ಬೇರೆ ದೈವ ಮತ್ತು ಗಣಗಳಿರುತ್ತವೆ. ನೀಚ ಗಣಗಳಿಗೆ, ಮಾರಿಗೆ ದೈವದಮನೆಯ ಹೊರ ಸುತ್ತಿನಲ್ಲಿ ಜಾಗಕೊಟ್ಟಿರುತ್ತಾರೆ. ದೈವದ ಮನೆಯ ಎದುರುಗಡೆ ಬಲಿಗಲ್ಲು ಇರುತ್ತದೆ. ಈ ಕಲ್ಲಿಗೆ ಹಬ್ಬದ ದಿನ ನಂಬಿದ ಕುಟುಂಬದವರು ದೈವ ಕೊಟ್ಟ ಕಾಯಿಯನ್ನು ಒಡೆದು ತಮ್ಮ ಉಪಸ್ಥಿತಿಯನ್ನು ತೋರಿಸಿಕೊಳ್ಳುತ್ತಾರೆ. ದೈವದ ಗುಡಿಯ ಹೊರಭಾಗದ ಆಗ್ನೇಯ ದಿಕ್ಕಿನಲ್ಲಿ ಗೆಂಡದಹೊಂಡ ಇರುತ್ತದೆ. ಬಸರೂರಿನ ದೈವದ ಮನೆಗಳಲ್ಲಿ ಎರಡು ಗೆಂಡದ ಹೊಂಡ ಇರುತ್ತದೆ. ಅಲ್ಲಿಯೂ ಕೂಡಾ ಸಾಮಾಜಿಕ ಶ್ರೇಣಿಕರಣವಿದೆ. ದೈವದ ಮನೆಯ ಹೊರಭಾಗದಲ್ಲಿ ನಾಗನ ಬನ ಇದ್ದು ಮೊದಲ ಪೂಜೆ ನಾಗನಿಗೆ ಸಲ್ಲುತ್ತದೆ. ದೈವದ ಉರುಗಳನ್ನು ಸಣ್ಣ ಮನೆಯಾಕಾರದ ಗೂಡಿನಲ್ಲಿ ಇಡುತ್ತಾರೆ. ಅದಕ್ಕೆ ಮೋಡ ಎನ್ನುತ್ತಾರೆ. ದೈವದ ಮನೆಯ ಒಳಗಡೆ ದೈವಗಳಲ್ಲಿ ಶ್ರೇಣಿಕರಣ ಇರುತ್ತದೆ. ಅವುಗಳ ಆಕಾರ ಮತ್ತು ಸ್ಥಾನವು ಶ್ರೇಣಿಕರಣಕ್ಕೆ ಒಳಗಾಗಿರುತ್ತದೆ. ದೈವದ ಮನೆಯಲ್ಲಿ ಮಾಂಸಾಹಾರ ಮತ್ತು ಸಸ್ಯಾಹಾರ ಎಂಬ ಶ್ರೇಣಿಕರಣ ಇರುವುದಿಲ್ಲ.

(ಆ) ಗರಡಿಗಳು

ಆಯಾತಾಕಾರದ ಪಂಚಾಂಗದ ಮೇಲೆ ನಾಲ್ಕು ಕೋಲು ಎತ್ತರದ ಗೋಡೆಗಳನ್ನು ಕಟ್ಟಿ ಅದರ ಮೇಲೆ ಹಂಚನ್ನು ಹೊದಿಸಿದ ರಚನೆಯೆ ಗರಡಿಗಳು. ಬಸರೂರಿನ ಪಂಜುರ್ಲಿ ಕೋಟಿಚೆನ್ನಯ್ಯರ ಗರಡಿಯ ರಚನೆ ಈ ತೆರನಾಗಿದೆ. ಗರಡಿಯ ಒಳಗೆ ಉತ್ತರಕ್ಕೆ

ಮುಖಮಾಡಿದಂತೆ ಬ್ರಹ್ಮಗುಂಡ ಇರುತ್ತದೆ. ಬ್ರಹ್ಮಗುಂಡದ ಪಶ್ಚಿಮಭಾಗದಲ್ಲಿ ಕೋಟಿಚೆನ್ನಯ್ಯ, ದೇಯಿಬೈದಿತಿ, ಚುಟುಕರ ಉರುಗಳು ಇನ್ನೊಂದು ಬದಿಯಲ್ಲಿ, ಪಂಜುರ್ಲಿ, ಬಲ್ಲಾಳ ಮತ್ತು ಪೆರಿಯವೈದ್ಯ. ಇದು ಗರಡಿಯಲ್ಲಿ ಅತ್ಯಂತ ಪವಿತ್ರವಾದ ಜಾಗ. ಇದರೊಳಗೆ ಪ್ರವೇಶಿಸಬೇಕಾದರೆ ಎಣ್ಣೆ ಎರೆದುಕೊಂಡಿರಬೇಕು[೧೭]. ಬ್ರಹ್ಮಗುಂಡದ ಹೊರಭಾಗದಲ್ಲಿ ಬಬ್ಬರ್ಯ, ಬಾಲಮ್ಮ, ಬಾಲಯ್ಯ ಹಾಯ್ಗುಳಿ, ಚಿಕ್ಕುಪರಿವಾರ, ಮೈಂದಾಳ್ತಿ, ನಂದಿಕೇಶ್ವರ ಮುಂತಾದ ಗಣಗಳು. ಗುಂಡದ ಈಶಾನ್ಯಕ್ಕೆ ಚೇನಿಯರ ಭೂತಗಳು, ಜೋಗಿಪುರುಷ, ಕಳಿನಚಿಕ್ಕ, ಬ್ರಹ್ಮಗುಂಡದಿಂದ ಉತ್ತರಕ್ಕೆ ಪಾತ್ರಿಗಣ. ಗರಡಿಯ ಹೊರಭಾಗದಲ್ಲಿ ರಕ್ತಹಾರದ ದೈವಗಳು. ಮಹಾಂಕಾಳಿ, ಶಿವರಾಯ, ವೀರಮಾಸ್ತಿ ಅಂಗಳದಲ್ಲಿ ತುಳಸಿಕಟ್ಟೆ ಮತ್ತು ಬಾವಿ. ಬಾವಿಯ ಬಲಭಾಗದಲ್ಲಿ ಗರಡಿನಾಗನ ಬನ. ಅಂಗಳದ ಹೊರಭಾಗದಲ್ಲಿ ಗೆಂಡದ ಹೊಂಡ ಇರುವ ರಚನೆ ಗರಡಿಯದು. ಆದರೆ ಬಸರೂರಿನ ಮಹಾಂಕಾಳಿ ಗರಡಿಯಲ್ಲಿ ಕೋಟಿಚೆನ್ನಯ್ಯರಿಲ್ಲ.

ಬಸರೂರಿನ ಕರಕುಶಲಕಲೆ ಮತ್ತು ಜನಪದ ವಾಸ್ತು ಅಧ್ಯಾಯದಲ್ಲಿ ಬಸರೂರಿನ ಕರಕುಶಲಕಲೆಗಳು ಬಸರೂರಿನ ಸಂಸ್ಕೃತಿಯ ಪ್ರತೀಕವಾಗಿತ್ತು. ಕರಕುಶಲಕಲೆ ಎಂದರೆ ಬಸರೂರು ಎಂದಾಗಿತ್ತು. ಇಲ್ಲಿನ ಗುಡಿಗಾರರು ಪಾರಂಪರಿಕ ಜ್ಞಾನವನ್ನು ಉಪಯೋಗಿಸಿಕೊಂಡು ಉರುಗಳನ್ನು ನಿರ್ಮಾಣ ಮಾಡುವ ವಿಚಾರವನ್ನು ವಿವರಿಸಿದೆ. ದೊಡ್ಡಮನೆಗಳು, ಹೆಬ್ಬಾಗಿಲು ಮನೆಗಳು ಕೃಷಿಕರ ಮನೆಗಳಾದ್ದರಿಂದ ಗರಡಿ, ಹಟ್ಟಿ, ಕಂಬಳದ ಕೋಣ ಕಟ್ಟುವ ಹಟ್ಟಿ, ಮೇಟಿಕಂಬ ಮುಂತಾದ ಸಂರಚನೆಗಳಿವೆ. ಬಸರೂರಿನ ದೊಡ್ಡಮನೆ ಬಸರೂರು ಮಾಗಣೆಯಲ್ಲಿ ಉನ್ನತ ಸಾಮಾಜಿಕ ಸ್ಥಾನಮಾನ ಹೊಂದಿರುವುದು ಅವರ ಮನೆಯಲ್ಲಿರುವ ರಾಜಾಂಗಣ, ಚಾವಡಿಯ ಸಂರಚನೆಯಿಂದ ತಿಳಿಯುತ್ತದೆ. ಈ ಮನೆಗಳ ಸಾಂಸ್ಕೃತಿಕ ಮಹತ್ವವನ್ನು ಅಧ್ಯಾಯದಲ್ಲಿ ವಿವರಿಸಿದೆ. ಬಂಡಸಾಲೆ ಅಥವಾ ಬಣಸಾಲೆ ಮನೆಗಳು ವ್ಯಾಪಾರಿಗಳ ಮನೆಗಳಾಗಿರುವುದರಿಂದ ದಾಸ್ತಾನು ಕೋಣೆ, ದಾಸ್ತಾನು ಜಾಡಿ, ಕೆಲಸಗಾರರಿಗೆ ಪ್ರತ್ಯೇಕ ಅಡುಗೆಮನೆ ಮತ್ತು ಸ್ನಾನದ ಕೋಣೆಗಳಿರುತ್ತದೆ. ಕುಶಲಕರ್ಮಿಗಳ ಮನೆಗಳು, ಅವರ ಉದ್ಯೋಗ ಮತ್ತು ಮನೆ ಎರಡರ ನಡುವಿನ ಅವಿನಾಭಾವ ಸಂಬಂಧವನ್ನು ತಿಳಿಸಿಕೊಡುತ್ತದೆ ಮತ್ತು ಅವರ ಆರ್ಥಿಕ ಸ್ಥಿತಿಗತಿಯನ್ನು ಅವರ ಮನೆಗಳ ರಚನೆ ತಿಳಿಸುತ್ತದೆ. ಕೋಲಭೂತ, ಜಕಣಿ ಮುಂತಾದ ಧಾರ್ಮಿಕ ಕಾರ್ಯಗಳಿಗೆ ಮನೆ ಯಾವ ಬಗೆಯಲ್ಲಿ ಆಸರೆಯಾಗಿದೆ ಎಂಬುದನ್ನು ಗಮನಿಸಲಾಗಿದೆ. ಮತ್ತು ಅವರವರ ವೃತ್ತಿಗನುಗುಣವಾಗಿ ಮನೆಗಳ ರಚನೆಯ ವಿನ್ಯಾಸವನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಬಸರೂರಿನ ಗರಡಿ ಮತ್ತು ದೈವದ ಮನೆಯ ನಿರ್ಮಾಣದಲ್ಲಿ ಜನರ ಪಾರಂಪರಿಕ ಜ್ಞಾನ ಯಾವುದು ಎಂಬುದು ತಿಳಿಯುತ್ತದೆ. ಈ ಅಧ್ಯಾಯದಲ್ಲಿ ಬಸರೂರು ಗುಡಿಗಾರಿಕೆ ಮತ್ತು ಕರಕುಶಲಕಲೆಯ ನೆಲೆ ಎಂಬುದು ತಿಳಿಯುತ್ತದೆ.

**ಕೊನೆಟಿಪ್ಪಣಿ**

೧. ಶ್ರೀ ದೇವಿದೇವಸ್ಥಾನದಲ್ಲಿರುವ ಸಿಂಹದಪ್ರತಿಮೆ ದೇಶಿ ಕುಶಲಕರ್ಮಿಗಳು ತಯಾರಿಸಿದಲ್ಲ ಎಂಬುದು ಅದರ ರಚನೆಯಿಂದ ತಿಳಿಯುತ್ತದೆ.

೨. ಕಣ್ಣಿಗೆ ಕಾಣುವಂತಹ ವಸ್ತು ಮತ್ತು ಒಳವಿನ್ಯಾಸಗಳನ್ನು ಭೌತಿಕ ಸಂಸ್ಕೃತಿಯೆಂದು ಕರೆಯಲಾಗುತ್ತದೆ.

೩. ಹೆಬ್ಬಾಗಿಲಿನ ಚಾವಡಿಯ ನೆಲದ ಅಂಚಿನಲ್ಲಿ ಕುಳಿತುಕೊಳ್ಳಲು ಹಾಕಿರುವ ಮರದ ಹಲಗೆ.ಇದು ಪೋದಿಗೆ ಕಂಬಕ್ಕೆ ಆಧಾರವಾಗಿರುತ್ತದೆ.

೪. ಮನೆಯಲ್ಲಿರುವ ಹೆಚ್ಚುವರಿ ಪಾತ್ರೆಗಳನ್ನು ಇನ್ನಿತರ ಸಾಮಾಗ್ರಿಯನ್ನು ಇಡುವ ಎತ್ತರದ ಜಾಗವೇ ಮೆತ್ತು. ಮೆತ್ತು ಎಂದರೆ ಸಣ್ಣ ಉಪ್ಪರಿಗೆ ಎಂದರ್ಥ.

೫. ಮನೆ ಮತ್ತು ಹೆಬ್ಬಾಗಿಲನ್ನು ಸುತ್ತುವರಿದ ಆವರಣಗೋಡೆ.

೬. ಕಟಾವು ಮಾಡಿದ ಬತ್ತದ ಹುಲ್ಲನ್ನು ತಂದು ಮರದ ಮಂಚಕ್ಕೆ(ಹಡಿಮಂಚ)ಕ್ಕೆ ಬಡಿದು ಬತ್ತವನ್ನು ಬೇರ್ಪಡಿಸುವುದಕ್ಕೆ ಕೈಯ್ ಜಪ್ಪುವುದು ಎಂದು ಹೆಸರು.

೭. ಭತ್ತದ ಹುಲ್ಲಿನಲ್ಲಿ ಉಳಿದ ಭತ್ತವನ್ನು ಎತ್ತುಗಳ ಸಹಾಯದಿಂದ ಬೇರ್ಪಡಿಸುವುದಕ್ಕೆ ಹಡ್ಲು ಒಕ್ಕುವುದು ಎಂದು ಹೆಸರು.

೮. ಬತ್ತವನ್ನು ಸಂಗ್ರಹಿಸಿ ಇಡುವ ಕಲಾತ್ಮಕವಾದ ರಚನೆ.

೯. ಒಂದು ಅಂಕಣ ಎಂದರೆ ಒಂದು ಕೋಲು. ಒಂದು ಕೋಲು ಎಂದರೆ ಮೂರು ಅಡಿ.

೧೦. ಪಿತೃ ಪಕ್ಷದಲ್ಲಿ ಹಿರಿಯರ ಸದ್ಗತಿಗೆ ಬ್ರಾಹ್ಮಣರಿಗೆ ದಾನ ನೀಡುವುದು.

೧೧. ಕೀಳು ಎಂಬ ಕ್ಷುದ್ರ ದೈವಗಳಿಗೆ ಕೋಳಿಯನ್ನು ಬಲಿಕೊಟ್ಟು ಅಡುಗೆ ಮಾಡಿ ಸಾಮೂಹಿಕವಾಗಿ ಊಟ ಮಾಡುವುದು.

೧೨. ಹಟ್ಟಿಯಲ್ಲಿ ದನ ಮತ್ತು ಕೋಣಗಳನ್ನು ಕಟ್ಟುವ ಜಾಗಕ್ಕೆ ಹಟ್ಟಿಹಣೆ. ಅದು ಹಟ್ಟಿಯ ಮುಂಭಾಗವಾಗಿರುತ್ತದೆ.

೧೩. ಮನೆಯ ಮುಂದಿನ ತಗ್ಗಾದ ಚಾವಣಿ.

೧೪. ಕುಟುಂಬದಲ್ಲಿ ಮದುವೆಯಾಗದೇ ದುರ್ಮರಣಕ್ಕೆ ಬಲಿಯಾದವರಿಗೆ ವರ್ಷಕ್ಕೊಮ್ಮೆ ಅನ್ನ ನೀರು ಜೊತೆಗೆ ಬಳೆ, ಸೀರೆ, ಪಂಚೆ, ಕುಂಕುಮ, ಹೂ, ಅಂಗಿ ಮುಂತಾದವುಗಳನ್ನು ಇಟ್ಟು ಸತ್ಕರಿಸುವುದು.

೧೫. ದೈವ ದೇವರುಗಳಿಗೆ ಮೀಸಲಿಡುವುದಕ್ಕೆ ಹಾಕಬೆಚ್ಚುವುದು ಎನ್ನುತ್ತಾರೆ.

೧೬. ದೈವದ ಮನೆ.

೧೭. ಗರಡಿಯಲ್ಲಿ ಮೊದಲು ಹೆಂಗಸರ ಪೂಜೆ ಇತ್ತಂತೆ. ಗರಡಿ ಮನೆಯವರಿಗೆ ಗಂಡು ಸಂತಾನವಿರಲ್ಲಿಲ್ಲ. ಪ್ರತಿದಿನ ಹೆಂಗಸರು ಪೂಜೆ ಮುಗಿಸಿ ಮನೆಗೆ ಹೋಗುವಾಗ ಬೆದರ ಬಲ್ಲೆಯಲ್ಲಿ ನಾನು ಬರುತ್ತೇನೆ ಎಂದು ದಿನ ಕೇಳುತ್ತಿತ್ತಂತೆ. ಒಂದು ದಿನ ಹೆಂಗಸರು ನೀನು ಬಾ ಎಂದಳಂತೆ. ಪಂಜುರ್ಲಿ ಹಟ್ಟಿಕುದ್ರು ಬೆದರಬಲ್ಲೆಯಿಂದ ಬಸರೂರಿಗೆ ಬಂತಂತೆ. ಅಂದಿನಿಂದ ಹೆಂಗಸರ ಪೂಜೆ ನಿಂತು. ಗಂಡಸರ ಪೂಜೆ ಆರಂಭವಾಯಿತಂತೆ. ಗಂಡಸರು ಗುಂಡದೊಳಗೆ ಹೋಗಬೇಕಾದರೇ ಧರ್ಮಸ್ಥಳದಲ್ಲಿ ಎಣ್ಣೆ ಹೊಯಿಸಿಕೊಂಡು ಬರಬೇಕು ಎಂಬ ಕತೆ ಇದೆ.

★★★

ಅಧ್ಯಾಯ ಏಳು

# ವಾರ್ಷಿಕಾವರ್ತನದ ಆಚರಣೆಗಳು

೭.೧. ಕೃಷಿ ಸಂಬಂಧಿ ಆಚರಣೆ

೭.೧.೧. ದರ್ಶನ ಪಡಿ

೭.೧.೨. ಕದಿರುಹಬ್ಬ

೭.೧.೩. ಕೈಲಾಪೂಜೆ

೭.೧.೪. ದೀಪಾವಳಿ

೭.೧.೫. ಅಮ್ಮನವರ ದೇವಸ್ಥಾನದ ನವರಾತ್ರಿ / ಘಟಪೂಜೆ

೭.೧.೬. ಕಂಬಳ

೭.೧.೭. ಆರೂಡ್ ಹಬ್ಬ

೭.೨. ದೇವಸ್ಥಾನ ಸಂಬಂಧಿ ಆಚರಣೆ

೭.೨.೧. ಹರಿವಾಣ ನೈವೇದ್ಯ

೭.೨.೨. ಕುರಿಪೂಜೆ

೭.೨.೩. ದೊಡ್ಡ ಮಾರಿಹಬ್ಬ

೭.೨.೪. ಸಣ್ಣ ಮಾರಿ ಹಬ್ಬ

೭.೨.೫. ದೊಟ್ಟೆಕಾಲು ಚಿಕ್ಕು ಗೆಂಡ

೭.೨.೬. ಅಮ್ಮನವರ ಗೆಂಡ

೭.೨.೭. ಗರಡಿಗೆಂಡ

೭.೩. ದೇವಾಲಯ ಸಂಬಂಧಿ ಆಚರಣೆ

೭.೩.೧. ಯುಗಾದಿ ಫಲ

೭.೩.೨. ಗೌರಿಹಬ್ಬ

೭.೩.೩. ದೀಪೋತ್ಸವ

೭.೩.೪. ರಥೋತ್ಸವ

೭.೩.೫. ಓಕುಳಿ ಆಟ

೭.೩.೬. ನವರಾತ್ರಿ, ಬನ್ನಿಪೂಜೆ, ವನಭೋಜನ

೭.೩.೭. ಕಡುಬಿನ ಕಾಳಗ

# ಅಧ್ಯಾಯ ಏಳು

# ವಾರ್ಷಿಕಾವರ್ತನದ ಆಚರಣೆಗಳು

ವಾರ್ಷಿಕಾವರ್ತನಗಳು ವಾರ್ಷಿಕವಾಗಿ ಆವರ್ತನಗೊಳ್ಳುವ ಧಾರ್ಮಿಕ ಆಚರಣೆಗಳಾದರೂ ಸಾಂಸ್ಕೃತಿಕ ಅನನ್ಯತೆಯೊಂದಿಗೆ ತಳಕು ಹಾಕಿಕೊಂಡಿರುತ್ತದೆ. ವಾರ್ಷಿಕಾವರ್ತನಗಳನ್ನು ಕೃಷಿ, ದೈವಸ್ಥಾನ, ದೇವಾಲಯ ಸಂಬಂಧಿ ಆಚರಣೆಗಳೆಂದು ವಿಭಾಗಿಸಿಕೊಳ್ಳಬಹುದಾಗಿದೆ.ಮನುಷ್ಯರ ನಂಬಿಕೆಯ ಆಧಾರದ ಮೇಲೆ ಭೌಗೋಳಿಕ, ಸಾಮಾಜಿಕ ಹಿನ್ನೆಲೆಯಲ್ಲಿ ನೆಲೆಗೊಂಡ ಸಂಪ್ರದಾಯಗಳು ವಾರ್ಷಿಕ ಆವರ್ತನಗಳೆನಿಸಿಕೊಳ್ಳುತ್ತದೆ. ಒಂದು ಕರಾರುವಕ್ಕಾದ ಅವಧಿಯಲ್ಲಿ ಒಂದು ನಿರ್ದಿಷ್ಟ ಗುಂಪು ಅಥವಾ ಗ್ರಾಮದವರು ಆಚರಿಸುವ ಸಾಂಪ್ರದಾಯಿಕ ಆಚರಣೆಗಳು ವಾರ್ಷಿಕಾವರ್ತನಗಳಾಗುತ್ತವೆ. ಇಲ್ಲಿ ದೈವ, ದೇವರಿಗೆ ಸಂಬಂಧಿಸಿದ ಧಾರ್ಮಿಕ ಆಚರಣೆಗಳು, ಸಾಂಸ್ಕೃತಿಕವಾಗಿ ಅನುಸರಣೆಗೊಳ್ಳುತ್ತದೆ. ಅವುಗಳನ್ನು ಜಾತ್ರೆ, ಗೆಂಡಸೇವೆ, ದಕ್ಕೆಬಲಿ, ಕದಿರುಹಬ್ಬ, ಕಂಬಳ, ನವರಾತ್ರಿ, ಕೈಲಾಪೂಜೆ, ಮಾರಿಹಬ್ಬ, ಬಲೀಂದ್ರ ಪೂಜೆ, ದರ್ಶನಪಡಿ, ದೀಪೋತ್ಸವ, ಓಕುಳಿಆಟ, ಕಡುಬಿನ ಕಾಳಗಗಳೆಂದು ವಿಂಗಡಿಸಲಾಗುತ್ತದೆ. ಇವುಗಳಲ್ಲಿ ಕೆಲವು ದೇವಾಲಯ, ದೇವಸ್ಥಾನ ಮತ್ತು ಜನಸಮುದಾಯದ ಆಚರಣೆಗಳಾಗಿದ್ದು ವಾರ್ಷಿಕವಾಗಿ ಆವರ್ತನಗೊಳುತ್ತಿರುತ್ತವೆ. ವಾರ್ಷಿಕಾವರ್ತನಗಳು ಧಾರ್ಮಿಕ ಆಚರಣೆಗಳಾಗಿದ್ದರು ಅವುಗಳಿಗೆ ಸಾಂಸ್ಕೃತಿಕ ಮಹತ್ವವಿದೆ.

ಒಂದು ಪ್ರದೇಶದ ಸಂಸ್ಕೃತಿಯ ಅಧ್ಯಯನಕ್ಕೆ ಮುಖ್ಯವಾದ ಧಾರ್ಮಿಕ ಆಕರಗಳೆಂದರೆ ಧಾರ್ಮಿಕ ಆಚರಣೆಗಳು. ಧಾರ್ಮಿಕ ಆಚರಣೆಗಳು ಬೇರೆಬೇರೆ ದೇವರುಗಳಿಗೆ, ದೈವಗಳಿಗೆ ಮತ್ತು ಜನಸಮುದಾಯಗಳಿಗೆ ಸಂಬಂಧಿಸಿದ ನೈಜ ಚರಿತ್ರೆಯನ್ನು ತಮ್ಮಲ್ಲಿ ಹುದುಗಿಸಿಕೊಂಡಿದೆ. ಒಂದು ಪ್ರದೇಶದ ಧಾರ್ಮಿಕ ಆಚರಣೆಗಳ ಅಧ್ಯಯನ ನಡೆಸದೆ ಅಲ್ಲಿನ ಸಂಸ್ಕೃತಿ ಅಧ್ಯಯನ ಸಾಧ್ಯವಿಲ್ಲ. ಬಸರೂರು ನಗರೀಕರಣ, ಆಧುನಿಕರಣಕ್ಕೆ ಒಳಗಾಗಿದ್ದರೂ ಧಾರ್ಮಿಕ ಆಚರಣೆಗಳು ಇಂದಿಗೂ ಉಳಿದುಕೊಂಡಿದೆ.

ಬಸರೂರಿನ ವಾರ್ಷಿಕಾವರ್ತನಗಳನ್ನು ವೈದಿಕ ಮತ್ತು ವೈದಿಕೇತರ ಆಚರಣೆಗಳೆಂದು ಅಧ್ಯಯನದ ದೃಷ್ಟಿಯಿಂದ ವಿಭಾಗಿಸಿಕೊಳ್ಳಬಹುದು. ಅವುಗಳನ್ನು ದೈವಸ್ಥಾನ, ಕೃಷಿಸಂಬಂಧಿ, ದೇವಾಲಯಸಂಬಂಧಿ ಆಚರಣೆಗಳೆಂದು ಅಧ್ಯಯನದಲ್ಲಿ ಹೇಳಲಾಗಿದೆ. ಆದರೆ ಯಾವುದೇ ಆಚರಣೆಗಳನ್ನು ಹೀಗೆ ಎಂದೂ ಪ್ರತ್ಯೇಕಿಸಲು ಸಾಧ್ಯವಿಲ್ಲ. ಏಕೆಂದರೆ ಪ್ರತಿಯೊಂದು ಆಚರಣೆಗಳು ಪರಸ್ಪರ ಪ್ರಭಾವಕ್ಕೆ ಒಳಗಾಗಿರುತ್ತವೆ. "ಭಾರತೀಯ ಸಂಸ್ಕೃತಿಯ ಹಿನ್ನೆಲೆಯನ್ನು ಅವಲೋಕಿಸಿದರೆ ಈ ಸಂಸ್ಕೃತಿಗಳು ಆರ್ಯ ಮತ್ತು ದ್ರಾವಿಡ ಸಂಸ್ಕೃತಿಯ ಸಮ್ಮಿಲನವಾಗಿದೆ" (ಗುರುಪ್ರಸಾದ ಸಿ.ಟಿ;೨೦೦೫;ಪುಟ:೫). ಬಸರೂರಿನಲ್ಲಿ ಶೈವ, ಶಾಕ್ತ, ವೈಷ್ಣವ ಸಂಪ್ರದಾಯ ಮತ್ತು ಆರಾಧನ ಕ್ರಮಗಳು ಚಾಲ್ತಿಯಲ್ಲಿದೆ. ವಾರ್ಷಿಕಾಚರಣೆಗಳು ಸಾರ್ವತ್ರಿಕ ಅಚರಣೆಯಾಗಿರಬಹುದು, ಜನಸಮುದಾಯದ ಆಚರಣೆಯಾಗಿರಬಹುದು ಇವೆಲ್ಲವೂ ಧರ್ಮ ಮತ್ತು ಸಂಸ್ಕೃತಿಯ ನೆಲೆಗಟ್ಟಿನ ಮೇಲೆ ಆಚರಣೆಗೊಳ್ಳುತ್ತಿರುವುದು ಬಸರೂರಿನ ವಿಶೇಷವಾಗಿದೆ.

ಬಸರೂರು ಧರ್ಮ ಪಟ್ಟಣ ಎಂದು ಹೆಸರು ಪಡೆದ ಊರಾಗಿದ್ದು ಮೊದಲಿನಿಂದಲೂ ಧಾರ್ಮಿಕ ಚಟುವಟಿಕೆಗಳ ಕೇಂದ್ರಸ್ಥಾನವಾಗಿದೆ. ಬಸರೂರಿನಲ್ಲಿ ವರ್ಷದ ಪ್ರತಿ ತಿಂಗಳು ಧಾರ್ಮಿಕ ಆಚರಣೆಗಳು ನಡೆಯುತ್ತಿರುತ್ತದೆ. ಬಸರೂರಿನ ಪಡುಕೇರಿಯ ಮಹತೋಭಾರ ಶ್ರೀಮಹಾಲಿಂಗೇಶ್ವರ ದೇವಾಲಯ, ಶ್ರೀದೇವಿಅಮ್ಮನವರ ದೇವಸ್ಥಾನ, ಪಡುಕೇರಿ ಶ್ರೀತಿರುಮಲ ವೆಂಕಟರಮಣ ದೇವಾಲಯ, ಮಂಡಿಕೇರಿ ಶ್ರೀಮಹಾಲಸ ನಾರಾಯಣಿ ದೇವಾಲಯ, ರಾಹುತ ಕೇರಿ ಶ್ರೀ ತುಳುವೇಶ್ವರ, ತೆಂಕುಬಾಗಿಲು ಶ್ರೀರಾಮಚಂದ್ರ ದೇವಾಲಯ, ಹಲರಕೆರೆಯ ವೀರಭದ್ರ ದೇವಸ್ಥಾನ, ಪೇಟೆ ಆಂಜನೇಯ ದೇವಾಲಯ, ಶ್ರೀಕೋಟೆ ಆಂಜನೇಯ ದೇವಾಲಯ, ಶ್ರೀಶಾಂತೇರಿಕಾಮಾಕ್ಷಿ ದೇವಾಲಯ, ಶ್ರೀಲಕ್ಷ್ಮೀದಾಮೋದರ ದೇವಾಲಯ, ಶ್ರೀಉಮಾಮಹೇಶ್ವರ ದೇವಾಲಯ, ಮೂಡುಕೇರಿ ಶ್ರೀಆದಿನಾಥೇಶ್ವರ, ಶ್ರೀರಾಮಚಂದ್ರ ದೇವಾಲಯ, ಶ್ರೀವೆಂಕಟರಮಣ ದೇವಾಲಯ, ಕಾಲಭೈರವ ದೇವಸ್ಥಾನ, ಶ್ರೀ ಕಾಶೀಮಠ, ಶ್ರೀ ವಿಜಯ ವಿಠಲ ದೇವಾಲಯ, ಶ್ರೀಲಕ್ಷ್ಮೀನಾರಾಯಣ ದೇವಾಲಯ, ಜಟ್ಟಿಗ ದೇವಸ್ಥಾನ, ಚಿಲುಮೆ ಲಿಂಗಾಯತರ ಮಠ, ಶ್ರೀ ಗೋಕರ್ಣ ಮಠಗಳು ಇಲ್ಲಿವೆ. ಇಲ್ಲಿ ವರ್ಷದ ಪ್ರತಿ ತಿಂಗಳು ಧಾರ್ಮಿಕ ಕಾರ್ಯಕ್ರಮಗಳು ಜರಗುತ್ತಿರುತ್ತದೆ. ಅಷ್ಟೆ ಅಲ್ಲದೆ ಮೂಡುಕೆರೆ ಬಂಟ ಪಂಜುರ್ಲಿಗರಡಿ, ಎಡಗೋಳಿ ಚಿಕ್ಕು ಮಂಡಿಕೇರಿ, ದೊಟ್ಟೆಕಾಲುಚಿಕ್ಕು, ಕೋಳ್ಕರೆ ಮಹಾಂಕಾಳಿ, ಮನ್ಸಾವರಿ ವಿಲಾಸಕೇರಿ, ರಕ್ತೇಶ್ವರಿ ತೆಲುಗರಹಿತ್ಲು, ರಕ್ತೇಶ್ವರಿ ಹಲರಕೆರೆ, ಹ್ಲೊಕೆರೆ ಚಿಕ್ಕು, ಸರ್ಟಿಮನೆ, ಪಂಜುರ್ಲಿಗರಡಿ, ವೀರಕಲ್ಲುಕುಟ್ಟಿಗ ಬಸದಿಬಾಗಿಲು ಹೀಗೆ ದೈವಸ್ಥಾನಗಳಿವೆ. ಬಸರೂರು ಕೃಷಿ ಪ್ರಾಧಾನ್ಯತೆಯನ್ನು ಹೊಂದಿದ ಪ್ರದೇಶವಾಗಿದೆ. ಇಲ್ಲಿನ ಕೃಷಿಕರು ಒಂದಲ್ಲ ಒಂದು ಬಗೆಯ ಕೃಷಿ ಆಚರಣೆಗಳನ್ನು ವರ್ಷವಿಡಿ ಆಚರಿಸುತ್ತಿರುತ್ತಾರೆ. ಈ ಎಲ್ಲಾ ಆಚರಣೆಗಳು

ವಾರ್ಷಿಕಾವರ್ತನಗಳಾಗುತ್ತವೆ. ದೇವಾಲಯ, ದೈವಸ್ಥಾನ ಮತ್ತು ಕೃಷಿಗೆ ಸಂಬಂಧಿಸಿದ ಆಚರಣೆಗಳನ್ನು ವಾರ್ಷಿಕಾವರ್ತನ ಆಚರಣೆಗಳು ಎಂಬ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

## ೭.೧. ಕೃಷಿಸಂಬಂಧಿ ಆಚರಣೆಗಳು

ಕೃಷಿ ಪ್ರಧಾನ ಸಾಮಾಜಿಕ ವ್ಯವಸ್ಥೆಯನ್ನು ಹೊಂದಿರುವ ಊರು ಬಸರೂರು. ಈ ಊರಿನಿಂದ ಅಕ್ಕಿ, ಬೆಲ್ಲ, ಮೆಣಸು ಮುಂತಾದ ವಸ್ತುಗಳು ವಿದೇಶಗಳಿಗೆ ರಫ್ತಾಗುತ್ತಿದ್ದವು. ಇಲ್ಲಿ ಭತ್ತ ಬೆಳೆಯಲು ಬೇಕಾದ ವಿಶಾಲವಾದ ಗದ್ದೆಗಳಿದ್ದವು. ಇಲ್ಲಿಂದ ಅಕ್ಕಿ ಮಸ್ಕತ್ ಮುಂತಾದ ಅರಬ್ ರಾಷ್ಟ್ರಗಳಿಗೆ ಪೂರೈಕೆಯಾಗುತ್ತಿತ್ತು. ಹೀಗಾಗಿ ಬಸರೂರಿನಲ್ಲಿ ಎಲ್ಲಾ ಋತುಮಾನಗಳಲ್ಲಿ ಕೃಷಿ ಆಚರಣೆಗಳು ಇರುತ್ತಿತ್ತು. ಇಲ್ಲಿನ ಕೃಷಿಕರು ಭತ್ತವನ್ನು ಶಂಕರಗಂಡ[೧], ಧಾನ್ಯಲಕ್ಷ್ಮಿ ಎಂದು ದೈವತ್ವಕೇರಿಸಿದ್ದನ್ನು ಕಾಣುತ್ತದೆ. ಹೀಗಾಗಿ ಋತುಮಾನಗಳಿಗೆ ಹೊಂದಿಕೊಂಡು ವರ್ಷವೊಂದರಲ್ಲಿ ಆವರ್ತನಗೊಳ್ಳುವ ಕೃಷಿಆಧಾರಿತ ಆಚರಣೆಗಳನ್ನು ವಾರ್ಷಿಕಾವರ್ತನದ ಆಚರಣೆಗಳೆಂದು ಕರೆಯುತ್ತಾರೆ. ಬಸರೂರಿನಲ್ಲಿ ಈ ಆಚರಣೆ ಕೃಷಿಕರಿಗಷ್ಟೆ ಸೀಮಿತವಾಗುಳಿದಿಲ್ಲ. ಕೃಷಿಯೇತರ ಸಮುದಾಯದವರು ಭಕ್ತಿಯಿಂದ ಆಚರಿಸುತ್ತಾರೆ. ವ್ಯವಸಾಯದ ಪ್ರತಿಹಂತವೂ ಕೃಷಿಕರಿಗೆ ಪವಿತ್ರವಾದುದು. ಭೂಮಿಯ ಉಳುಮೆ, ಬಿತ್ತನೆ, ನಾಟಿ, ಕೊಯಿಲು, ರಾಶಿ, ಧಾನ್ಯಸಂಗ್ರಹಣೆ, ಬಿತ್ತನೆಬೀಜ, ಹೊಸಭತ್ತ ಬೇಯಿಸುವುದು, ಹೊಸಅಕ್ಕಿ ಊಟ ಹೀಗೆ ಎಲ್ಲಾ ಸಂದರ್ಭಗಳಲ್ಲೂ ಕೃಷಿಕರು ಭೂಮಿ, ಬೀಜ, ಪೈರು, ಧಾನ್ಯ, ಅನ್ನಗಳಲ್ಲಿ ದೈವಿಶಕ್ತಿಯನ್ನು ಕಾಣುತ್ತಾರೆ. ಈ ದೈವಿ ಕಲ್ಪನೆಯ ಜೊತೆ ಕೃಷಿಗೆ ಸಂಬಂಧಿಸಿದಂತೆ ಸಮೃದ್ಧಿಯ ಆಶಯವನ್ನು ಅವರು ಹೊಂದಿರುತ್ತಾರೆ. ತಾವು ಬೆಳೆಯುವ ಬೆಳೆ ಉತ್ತಮ ಫಸಲನ್ನು ಕೊಡಲೆಂಬ ಆಶಯದಿಂದ ಕೃಷಿಕರು ವ್ಯವಸಾಯದ ಪ್ರತಿಹಂತದಲ್ಲಿ ವಿವಿಧ ಆಚರಣೆಯಲ್ಲಿ ತೊಡಗಿರುತ್ತಾರೆ. "ಸಮೃದ್ಧಿಯ ಆಶಯವುಳ್ಳ ಈ ಬಗೆಯ ಕೃಷಿಸಂಬಂಧಿ ಆಚರಣೆಗಳು ಭಾರತದ ಎಲ್ಲಾ ಕೃಷಿಕ ಸಮುದಾಯದಲ್ಲೂ ಪ್ರಚಲಿತವಿದೆಯೆಂದು ಹೇಳಬಹುದು. ಅದರಲ್ಲೂ ದ್ರಾವಿಡ ಪ್ರದೇಶದಲ್ಲಿ ಇದು ವ್ಯಾಪಕವಾಗಿರುವುದು ಕಾಣುತ್ತದೆ. ಇಂತಹ ಆಚರಣೆಗಳು ಒಟ್ಟು ಕೃಷಿ ಬದುಕಿಗೆ ಸಂಬಂಧಿಸಿದ್ದಾದರು ಆಯಾ ಪ್ರದೇಶದ ಪ್ರಮುಖ ಆಹಾರದ ಬೆಳೆಯೊಂದಿಗೆ ವಿಶೇಷ ಸಂಬಂಧವನ್ನು ಹೊಂದಿರುತ್ತದೆ" (ಸುಬ್ಬಣ್ಣ ರೈ;೨೦೦೪;ಪುಟ:೧೭). ಬಸರೂರಿನ ಕೃಷಿಸಂಬಂಧಿ ಆಚರಣೆಗಳನ್ನು ಕೃಷಿ ಚಟುವಟಿಕೆಗಳಿಗನುಗುಣವಾಗಿ ವಿಭಾಗಿಸಲಾಗಿದೆ. ಈ ಕೃಷಿ ಚಟುವಟಿಕೆಗಳು ಋತುಮಾನಗಳಿಗೆ ಅನುಗುಣವಾಗಿರುತ್ತದೆ. ಮಳೆಗಾಲದ ಸಂದರ್ಭದಲ್ಲಿ ಕೃಷಿ ಚಟುವಟಿಕಗಳನ್ನು ಹಗ್ಗಿನಿಂದ ದೀವಾಳಿಯವರೆಗೆ ಕಾತಿ[೨] ಬೇಸಾಯ ಎಂದು, ದಿವಾಳಿಯಿಂದ ಸುಗ್ಗಿ[೩] ತಿಂಗಳವರೆಗಿನ ಬೇಸಾಯವನ್ನು ಸುಗ್ಗಿ ಎಂದು,

ಸುಗ್ಗಿಯಿಂದ ಹಗ್ಗಿನ್ ತಿಂಗಳವರೆಗಿನ ಕಾಲವನ್ನು ಕೊಳ್ಕಿ ಎಂದು ವಾರ್ಷಿಕ ಕೃಷಿ ಚಕ್ರವನ್ನಾಗಿ ವಿಂಗಡಿಸಿಕೊಂಡಿದ್ದಾರೆ.

"ಜನಪದರ ಬದುಕಿನಲ್ಲಿ ಕೃಷಿಗೆ ಪ್ರಮುಖ ಸ್ಥಾನವಿದೆ. ಮನುಷ್ಯರ ಪ್ರಾಣ ಶಕ್ತಿಯಾಗಿರುವ ಅನ್ನದೊರೆಯುವುದು ಕೃಷಿಯಿಂದ. ಹಾಗಾಗಿ ಕೃಷಿಯ ಬಗ್ಗೆ ಒಂದು ವಿಧವಾದ ಪವಿತ್ರ ಭಾವನೆಯಿಂದ ತಾವು ಬೆಳೆದ ಪೈರಲ್ಲಿ ಒಂದು ಬಗೆಯ ದೈವಿ ಶಕ್ತಿಯನ್ನು ಕಾಣುತ್ತಾರೆ. ಕೃಷಿಗೆ ಪೂರಕವಾದ ಭೂಮಿ, ಗಾಳಿ, ನೀರು, ಬೆಂಕಿ ಅವರ ಪಾಲಿಗೆ ದೇವರು. ಉಳುಮೆಗೆ ಸಹಕಾರಿಯಾಗುವ ಎತ್ತು, ಕೋಣ, ನೊಗ, ನೇಗಿಲು ಅವರಿಗೆ ಪವಿತ್ರವೆ" (ಸುಬ್ಬಣ್ಣ ರೈ.ಎ;೨೦೦೪;ಪುಟ:೧೭).

"ಒಂದು ಪ್ರದೇಶದ ಸಂಸ್ಕೃತಿಯು ಹುಟ್ಟಿಗೆ ಅಲ್ಲಿನ ವಾಯುಗುಣ, ಭೌಗೋಳಿಕಲಕ್ಷಣಗಳು, ಸಹಜಸಸ್ಯಗಳು ಮತ್ತು ಅಲ್ಲಿ ಬೆಳೆಯಲಾಗುವ ಆಹಾರದ ಬೆಳೆಗಳು ಮುಖ್ಯ ಕಾರಣವಾಗುತ್ತವೆ" (ರಾಮಕೃಷ್ಣ ಆಚಾರ್ ಪಾಲ್ತಾಡಿ;೨೦೦೭;ಪುಟ:೧೬೪). ಬಸರೂರಿನ ಜನರಿಗೆ ಅಕ್ಕಿ ಕೇವಲ ಒಂದು ಆಹಾರ ಧಾನ್ಯವಷ್ಟೆ ಅಲ್ಲ, ಅದೊಂದು ಆರಾಧನೆಯ ವಸ್ತು. ಅವರು ಕೃಷಿಯನ್ನು ಕೇವಲ ಒಂದು ವೃತ್ತಿಯಾಗಿ ಪರಿಗಣಿಸುದಿಲ್ಲ. ಬೇಸಾಯ ಅವರಿಗೊಂದು ಆಚರಣೆಯಾಗಿದೆ. ಬಸರೂರಿನ ಕೃಷಿಕರು ಗದ್ದೆ ಉಳುವುದು, ಬೀಜಬಿತ್ತುವುದು, ಬೆಳೆಕಟಾವು ಹೀಗೆ ಬೇಸಾಯಕ್ಕೆ ಸಂಬಂಧಪಟ್ಟ ಕೆಲಸಗಳನ್ನು ಕೂಡಾ ತಿಥಿ, ವಾರ, ನಕ್ಷತ್ರ ನೋಡಿ ನಡೆಸುತ್ತಾರೆ. ಅಕ್ಕಿಯನ್ನು ಅವರು ಅದೃಷ್ಟದ ಸಂಕೇತವೆಂಬುದಾಗಿ ಭಾವಿಸುತ್ತಾರೆ. ಒಂದು ಆಚರಣೆಯಂತೆ ನಡೆಯುವ ಭತ್ತದ ಬೇಸಾಯದಿಂದ ಇಲ್ಲಿನ ಸಂಸ್ಕೃತಿ ಹುಟ್ಟಿದೆ.

ಈ ಅಧ್ಯಾಯದಲ್ಲಿ ಬಸರೂರಿನ ಜನಪದರ ಭೂಮಿಯೊಂದಿಗಿನ ಸಂಬಂಧ ಮತ್ತು ಆರಾಧನ ಬಗೆಗಳನ್ನು ವಿವೇಚಿಸಲಾಗಿದೆ. ಬೇಸಾಯವು ಕ್ಷೀಣಿಸುತ್ತಿರುವ ಸಂದರ್ಭದಲ್ಲಿ ಆಧುನೀಕರಣ ಕೃಷಿಸಂಬಂಧಿ ಆಚರಣೆಗಳನ್ನು ಯಾಂತ್ರಿಕೃತಗೊಳಿಸುತ್ತಿರುವ ಸಂಕ್ರಮಣದ ಕಾಲದಲ್ಲಿ ಬಸರೂರಿನ ಕೃಷಿಸಂಬಂಧಿ ಆಚರಣೆಗಳನ್ನು ವಿವೇಚಿಸಲಾಗಿದೆ.

ಬಸರೂರಿನ ವಾರ್ಷಿಕಾವರ್ತನ ಆಚರಣೆಗಳಲ್ಲಿ ಕೃಷಿಸಂಬಂಧಿ ಆಚರಣೆಗಳು ಮುಖ್ಯವಾಗುತ್ತದೆ. ಬಸರೂರಿನ ಕೃಷಿಸಂಬಂಧಿ ಆಚರಣೆಗಳಲ್ಲಿ ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸಬಹುದಾಗಿದೆ. ಆವುಗಳಲ್ಲಿ ಮುಖ್ಯವಾದ ಕೆಲವು ಆಚರಣೆಗಳನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

### ೭.೧.೧.ದರ್ಶನಪಡಿ

ಬಸರೂರಿನ ಪಂಚಗ್ರಾಮಗಳಲ್ಲಿ ಅಮ್ಮನವರ ದೇವಸ್ಥಾನದ ಅರ್ಚಕರಾದ ಬಳೆಗಾರ ಜೋಗಿಗಳು ದೇವಿಯ/ಭೈರವನ ವರ್ಷಾವಧಿ ನೈವೇದ್ಯಕ್ಕಾಗಿ ಸಂಗ್ರಹಿಸುವ ಧಾನ್ಯವನ್ನೆ

ದರ್ಶನಪಡಿ ಎಂದು ಕರೆಯುತ್ತಾರೆ (ಚಿತ್ರ ೧೧). ಕಾರ್ತಿಕ ಮಾಸದಿಂದ ವೃಶ್ಚಿಕ ಮಾಸದವರೆಗೆ ಭೈರವನ ಮೂರ್ತಿಯನ್ನು ಹೊತ್ತು ಕೊಂಡು ಹಸಬಿ[೬] ಹಾಕಿಕೊಂಡು ಊರಿಂದ ಊರಿಗೆ ತಿರುಗಿ ಹಬ್ಬದ ಹೇಳಿಕೆ ಮಾಡುತ್ತಾರೆ. ಮನೆಮನೆಗೆ ತೆರಳಿದ ಜೋಗಿಪುರುಷ ತುಳಸಿಕಟ್ಟೆ ಬಳಿ ನಿಂತು ವಿಶಿಷ್ಟ ಧ್ವನಿಯಲ್ಲಿ ಹರಕೆ ಹೇಳುತ್ತಾನೆ. ಕಾಲಭೈರವನ ಪ್ರಸಾದ ನೀಡಿ ಪಡಿ ಪಡೆಯುತ್ತಾರೆ. ಭೈರವನ ಮೂರ್ತಿಯನ್ನು ಹೊತ್ತ ಬ್ರಹ್ಮಚಾರಿ ಬಳೆಗಾರರನ್ನು ಜೋಗಿ ದೇವರು, ಕೊಟಕೊಟ ದೇವರು ಎಂದು ಕರೆಯುತ್ತಾರೆ. ಈ ಹೆಸರಿಗೂ ಕಾರಣವಿದೆ. ಬಲಗೈಯಲ್ಲಿ ಡಮರುಗ, ಎಡಗೈಯಲ್ಲಿ ತ್ರಿಶೂಲ, ಕಾಲಿಗೆ ಕಾಲುಕಡಿ, ತಲೆಗೊಂದು ಕೆಂಪು ಪಟ್ಟಿಯ ಮುಂಡಾಸು, ತಲೆಯಿಂದ ಇಳಿಬಿಟ್ಟ ಕೆಂಪು ಶಾಲು, ತಲೆಯ ಮೇಲೆ ಹೊತ್ತಿರುವ ಭೈರವ ಅವನಿಗೆ ನೆರಳಾಗಿ ಕೊಡೆ ಹಿಡಿದು ಮನೆಬಾಗಿಲಿಗೆ ಡಮರುಗದ ಸದ್ದಿನೊಡನೆ ಬರುತ್ತಾರೆ. ಹಳ್ಳಿಗಳಲ್ಲಿ ಕೃಷಿಕರ ಮನೆಗಳಲ್ಲಿ ಜೋಗಿದೇವರು ಮನೆಯಂಗಳಕ್ಕೆ ಬಂದ ಕೂಡಲೆ ತುಳಸಿಕಟ್ಟೆಯ ಮುಂದೆ ಕುರ್ಚಿ ಇಟ್ಟು ಕುಳ್ಳಿರಿಸಿ ಕಾಲಿಗೆ ನೀರು ಎರೆದು ನಮಸ್ಕರಿಸುತ್ತಾರೆ. ಜೋಗಿ ದೇವರು ಕಾಯಿ ಬರುಡೆಯಲ್ಲಿದ್ದ ಪ್ರಸಾದವನ್ನು ಹರಿವಾಣದಲ್ಲಿ ಹಾಕಿ,

ಶಿವ ಹರ ನೀಲಕಂಠ ಬೈದ್ಯ ಕ್ಷೇತ್ರಂ
ಸಂತಾನ ಸಾವಿರವಾಗಲಿ, ಒಂದು ಬಿತ್ತಿ ನೂರು ಬೆಳೀಲಿ
ಗಂಗೆ ಗೌರಿಯೆಂಬ ಕಣಜ ಕಟ್ಟಿ
ಕೊಡುವಂತ ಫಲ ಶಿವನ ಪಾದಕ್ಕೆ ಅರ್ಪಿತವಾಗಲಿ
ಮಹಾಲಿಂಗ ಬಾಳ್ದ ಹಾಗೇ ಬಾಳಲಿ

ಎಂಬ ಹರಕೆಯ ಮಾತುಗಳು ಸಮಾಜದ ಹಿತ, ಸಂತಾನ ಭಾಗ್ಯ ಮತ್ತು ಕೃಷಿಸಮೃದ್ಧಿಯ ಆಶಯವನ್ನು ಹೊಂದಿದೆ. ಬಸರೂರಿನಲ್ಲಿ ಇದನ್ನು ದರ್ಶನಪಡಿ ಎಂದೂ ಕರೆಯುತ್ತಾರೆ. ಬಸರೂರಿನ ಹೊರ ಮಾಗಣೆಯಲ್ಲಿ ಅಮೃತಪಡಿ[೭] ಎಂದು ಕರೆಯುತ್ತಾರೆ. ಈ ಮೂಲಕ ಜೋಗಿಗಳು ಈ ಪದೇಶದಲ್ಲಿ ಸಾಂಸ್ಕೃತಿಕ ಮತ್ತು ಧಾರ್ಮಿಕ ಹರಿಕಾರರಾಗಿ ಕೆಲಸಮಾಡಿದ್ದಾರೆ. ಪ್ರತಿವರ್ಷ ಕೃಷಿಕರ ಮನೆಗಳಿಗೆ ಜೋಗಿ ದೇವರ ರೂಪದಲ್ಲಿ ಹೋಗಿ ಮುಂದೆ ನಡೆಯುವ ಜಾತ್ರೆ, ಹಬ್ಬ, ಬೆಳೆಸಮೃದ್ಧಿಯ ವಿವರಗಳನ್ನು ನೀಡುತ್ತಾರೆ (ಚಿತ್ರ ೧೧).

ಬಸರೂರಿನ ಸುತ್ತ ಮುತ್ತಲಿನ ಮಾಗಣೆಗಳಲ್ಲಿ ದೀವಾಳಿ ಕೊಯ್ಲು ಆದ ಮೇಲೆ ಜೋಗಿಭತ್ತ ತೆಗೆದು ಒಂದು ಪಾತ್ರೆಯಲ್ಲಿ ತುಂಬಿ ಇಡುವ ಕ್ರಮ ಇದೆ. ದರ್ಶನ ಪಡಿಗೆ ಜೋಗಿಗಳು ಬಾರದಿದ್ದರು ತೆಗೆದಿಟ್ಟ ಭತ್ತವನ್ನು ಬಸರೂರಿಗೆ ಕಳುಹಿಸಿಕೊಡುತ್ತಾರೆ. ಬಸರೂರು ಮತ್ತು ಇತರ ಮಾಗಣೆಯಲ್ಲಿ ನವರಾತ್ರಿಯ ದಿನ ಜೋಗಿದೇವರು ಮಾಡಿ, ಭತ್ತವನ್ನು

ಹಾಕಿ ಅದರ ಮೇಲೆ ಮಣ್ಣಿನ ಮಡಿಕೆ ಇಟ್ಟು ನೀರು ತುಂಬಿ, ಬೂದಿ ಬಳಿದು, ಮೀನು ಮಾಂಸ ಬಳಿಸುವ ಕ್ರಮ ಇದೆ. ಬಸರೂರಿನ ಮಾಗಣೆಗಳಲ್ಲಿ ನವರಾತ್ರಿಯ ಕೊನೆಯ ದಿನ ಜೋಗಿ ಎಡೆ ಇಡುವ ಕ್ರಮ ಇದೆ. ಮೊದಲ ನವರಾತ್ರಿಯ ದಿನವನ್ನು ಜೋಗಿ ಕುಳಿತುಕೊಳ್ಳುವ ದಿನ ಎಂದೂ ಕೃಷಿಕರು ಭಾವಿಸುತ್ತಾರೆ. ಜೋಗಿ ಉಚ್ಚೆಹೊಯ್ದು ಕೂತರೆ ನವರಾತ್ರಿಗೆ ಮಳೆಬರುತ್ತದೆ. ಜನಪದರು ಜೋಗಿಯನ್ನು ಮಳೆಯ ದೇವರೆಂದು ಆರಾಧಿಸುತ್ತಾರೆ. ಮುಂದೆ ಜನವರಿ ತಿಂಗಳಲ್ಲಿ ನಡೆಯುವ ಅಮ್ಮನವರ ಜಾತ್ರೆ ಹೇಳಿಕೆಯು ಜೋಗಿದೇವರ ರೂಪದಲ್ಲಿ ಜರಗುತ್ತದೆ.

ದರ್ಶನಪಡಿಗಾಗಿ ಬಸರೂರಿನ ಬಳೆಗಾರರು ಮಾಗಣೆಗಳನ್ನು ದಾಟಿಹೋಗುತ್ತಿದ್ದರು. ಪ್ರತಿ ಊರಿನ ಪಟೇಲರ ಮನೆ, ಶ್ಯಾನುಭಾಗರ ಮನೆ, ಹೆಬ್ಬಾಗಿಲುಮನೆ, ದೊಡ್ಮನೆಗಳಲ್ಲಿ ಜೋಗಿದೇವರನ್ನು ಕಟ್ಟಬೇಕು. ಸೂರ್ಯ ಮುಳುಗುದರೊಳಗೆ ಬಿಡಿಸಬೇಕು. ಬಸರೂರಿನಲ್ಲಿ ತಿರುಗಾಟವಾದರೆ ಮೂಡುಕೇರಿ ಭೈರವ್ ದೇವಸ್ಥಾನದಲ್ಲಿ ಕಟ್ಟಿ, ಸಂಜೆ ಗರಡಿಯಲ್ಲಿ ಬಿಡಿಸಬೇಕು. ಜೋಗಿಗಳು ಬಸರೂರಿನಲ್ಲಿ ಸಾಂಸ್ಕೃತಿಕ ಮತ್ತು ಧಾರ್ಮಿಕ ಪ್ರಸಾರಕರಾಗಿ ಕೆಲಸ ಮಾಡಿದವರು ಎಂಬುವುದು ತಿಳಿಯುತ್ತದೆ. ಇವರ ದೃಷ್ಟಿಯಲ್ಲಿ ಇದೊಂದು ಊರಿಂದ ಮಾರಿಯನ್ನು ಅಟ್ಟುವ ಆಚರಣೆಯಾಗಿದೆ. ಜೊತೆಗೆ ಗ್ರಾಮಾಂತರ ಪ್ರದೇಶಕ್ಕೆ ಹಬ್ಬ, ಹುಣ್ಣಿಮೆಯ ಸುದ್ದಿ ಮುಟ್ಟಿಸುವ ಸಾಂಪ್ರದಾಯಿಕ ವ್ಯವಸ್ಥೆ ಇದಾಗಿತ್ತು.

ಬಸರೂರಿನ ಬಳೆಗಾರ ಜೋಗಿಗಳು ಕೃಷಿಯನ್ನು ನಂಬಿ ಬದುಕಿದವರು. ಹಿಂದಿನಿಂದಲೂ ದರ್ಶನಪಡಿ ನೆವದಲ್ಲಿ ಮನೆಮನೆಗೆ ಹೋಗಿ ಕೃಷಿ ಸಮೃದ್ಧಿ ಬಯಸುತ್ತಿದ್ದರು. ಹೀಗೆ ಬಂದವರಿಗೆ ಒಂದು ಹಾನೆ ಭತ್ತ, ಒಂದು ತೆಂಗಿನಕಾಯಿ ಮತ್ತು ತುಸು ನಗದು ಕಾಣಿಕೆ ನೀಡುವ ಸಂಪ್ರದಾಯ ಪ್ರತಿಯೊಬ್ಬರ ಮನೆಯಲ್ಲಿಯೂ ಇದ್ದಿತ್ತು.

ಹಳೆಯ ತಲೆಮಾರಿನ ಬಳೆಗಾರ ಜೋಗಿಗಳ ಕಾಲ ಮುಗಿದಿದೆ. ಹೊಸತಲೆಮಾರಿನವರು ಈ ತಿರುಗಾಟವನ್ನು ಭಿಕ್ಷೆ ಎಂದು ಭಾವಿಸುತ್ತಾರೆ. ಯುವಕರು ಹೊಸ ಉದ್ಯೋಗ ಅರಸಿ ಪಟ್ಟಣಗಳನ್ನು ಸೇರಿಕೊಂಡ ಪರಿಣಾಮವಾಗಿ ಜೋಗಿ ದೇವರ ಮನೆಮನೆ ತಿರುಗಾಟ ನಿಂತಿದೆ. ಇನ್ನು ಕೆಲವೆಡೆ ಅದೊಂದು ಅನಿಷ್ಟ ಎಂದು ಭಾವಿಸಿ ಬಳೆಗಾರ ಜಾತಿ ಸಂಘಟನೆಯವರು ದರ್ಶನಪಡಿಗೆ ತಿರುಗಾಟ ಮಾಡಬಾರದೆಂಬ ಸೂಚನೆ ನೀಡಿದ್ದಾರೆ. ಪರಿಣಾಮ ದರ್ಶನಪಡಿ ತನ್ನ ಅಸ್ಥಿತ್ವವನ್ನು ಕಳೆದುಕೊಳ್ಳುತ್ತಿದೆ.

### ೭.೧.೨. ಕದಿರು ಹಬ್ಬ

ಬಸರೂರಿನ ಕೃಷಿ ಸಂಬಂಧಿ ಆಚರಣೆಗಳಲ್ಲಿ ಕದಿರುಹಬ್ಬ ವಿಶಿಷ್ಟವಾದುದು. ರೈತ ತನ್ನ ದುಡಿತದ ಫಲವಾದ ಭತ್ತದ ಕದಿರನ್ನು ಮನೆಗೆ ತಂದು ವಿಶೇಷವಾಗಿ

ಪೂಜಿಸುವ ಹಬ್ಬವೇ ಕದಿರುಹಬ್ಬ. ಅಳಿಯ ಸಂತಾನ ಪದ್ಧತಿ ಬಾಹುಳ್ಯವಿರುವ ಸಮಾಜದಲ್ಲಿ ಕದಿರು ಹಬ್ಬಕ್ಕೊಂದು ವಿಶೇಷ ಸಾಂಸ್ಕೃತಿಕ ಹಿರಿಮೆಯಿದೆ. (ಚಿತ್ರ ೧೨)

ಬಸರೂರಿನ ಕದಿರು ಹಬ್ಬ ಸಾಮೂಹಿಕ ಆಚರಣೆಯಾಗಿದೆ. ಬಸರೂರು ಮಾಗಣೆಗೆ ಸೇರಿದ ಐದು ಗ್ರಾಮಗಳಲ್ಲಿ ಈ ಹಬ್ಬ ಏಕಕಾಲದಲ್ಲಿ ನಡೆಯುತ್ತದೆ. ಬಸರೂರಿನ ಮಾಗಣೆ ದೇವರಾದ ಶ್ರೀಮಹಾಲಿಂಗೇಶ್ವರನ ತಾರಾನುಕೂಲವಾದ ದಿನದಂದು ಕದಿರು ಹಬ್ಬದ ಆಚರಣೆ ನಡೆಯುತ್ತದೆ. ಬಸರೂರಿನ ಕದಿರುಹಬ್ಬದ ಹಿಂದಿನ ದಿನ ಮಹಾಲಿಂಗೇಶ್ವರನಿಗೆ ಮಧ್ಯಾಹ್ನದ ಬಲಿ ಆದ ಮೇಲೆ ದೇವರ ಅಪ್ಪಣೆ ಪಡೆದು ದೇವಾಲಯದ ಚಾಕರಿ ಮಾಡುವವನು ಬಸರೂರಿನ ಏಳು ಕೇರಿಗಳಲ್ಲಿ ಜಾಗಟೆ ಬಡಿಯುತ್ತ ಹೇಳಿಕೆ ನೀಡುತ್ತಾನೆ. ಅದೇ ದಿನ ರಾತ್ರಿ ಬಸರೂರಿನ ಒಂದನೇ ಮನೆಯವರಾದ ಕೊಳ್ಕೆರೆ ಮನೆಯವರು ದೇವರಿಗಾಗಿ ಬಿಟ್ಟಿದ್ದ ಕದಿರುಮಕ್ಕಿಯಿಂದ ಶ್ರೀಮಹಾಲಿಂಗೇಶ್ವರ ದೇವಾಲಯದ ಚಾಕರಿ ಮಾಡುವ ದೇವಾಡಿಗರು ವಾದ್ಯ ಸಮೇಳವಾಗಿ ದೀವಟಿಗೆ ಸಮೇತ ದೇವರ ಪ್ರಸಾದವನ್ನು ಹಿಡಿದುಕೊಂಡು ಹೋಗಿ ಕದಿರುಮಕ್ಕಿಯಲ್ಲಿ ಹಾಕಿ ವಾದ್ಯಘೋಷದೊಂದಿಗೆ ಕದಿರನ್ನು ಕೊಯ್ಯುತ್ತಾರೆ. ಅನಂತರ ಅದನ್ನು ಬಸರೂರು ಕೋಟೆಯ ದ್ವಾರದ ಪ್ರದೇಶವೆಂದು[೧೦] ಹೇಳುವ ಅರಳಿಕಟ್ಟೆಯಲ್ಲಿಡುತ್ತಾರೆ. ಇದನ್ನು ಕದಿರುಕಟ್ಟೆಯೆಂದು ಈಗಲೂ ಕರೆಯುತ್ತಾರೆ. ಹಿಂದೆ ಅರಳಿ ಮರದ ಕೊಂಬೆಗಳಿಗೆ ಕದಿರು ಕಟ್ಟಿ ಇಡುತ್ತಿದ್ದರು.

ಕದಿರುಹಬ್ಬದ ದಿನ ಸೂರ್ಯೋದಯಕ್ಕೆ ಮೊದಲು ಬಸರೂರಿನ ಏಳು ಕೇರಿಯ ಪ್ರತಿಯೊಂದು ಮನೆಯವರು ಶ್ರೀಮಹಾಲಿಂಗೇಶ್ವರ ದೇವಾಲಯದಲ್ಲಿ ಸೇರುತ್ತಾರೆ. ಕದಿರು ಹೊತ್ತು ತರುವವರು ಸ್ನಾನ ಮಾಡಿ ಮಡಿ ಬಟ್ಟೆಯನ್ನುಟ್ಟು ಶಾಲನ್ನು ತಲೆಗೆ ಸುತ್ತುಕೊಂಡು ಸಾತ[೧೧] ತೆಂಗಿನಕಾಯಿ, ಮುಳ್ಳುಸವತೆ, ಹಲಸು, ಮಾವಿನಎಲೆಯನ್ನು ಹರಿವಾಣದಲ್ಲಿರಿಸಿಕೊಂಡು ಸಿದ್ಧರಾಗಿರುತ್ತಾರೆ. ಶ್ರೀಮಹಾಲಿಂಗೇಶ್ವರ ದೇವಾಲಯದ ಅರ್ಚಕರು ದೇವರ ಪಾದುಕೆಯನ್ನು ಪಲ್ಲಕ್ಕಿಯಲ್ಲಿರಿಸಿ ಕದಿರುಕಟ್ಟೆಯ ಕಡೆಗೆ ಮೆರವಣಿಗೆಯಲ್ಲಿ ಸಾಗುತ್ತಾರೆ. ಕದಿರುಕಟ್ಟೆಯಲ್ಲಿ ಕದಿರು ಪೂಜೆ ನಡೆದ ಬಳಿಕ ಆರತಿ ಕೆಳಗಿಡುವಷ್ಟರಲ್ಲಿ ತಮ್ಮ ಪಾಲಿನ ಕದಿರಿಗಾಗಿ ಜನ ಮುನ್ನುಗ್ಗುತ್ತಾರೆ. ಹೀಗೆ ಮುನ್ನುಗ್ಗಿ ಸಂಪಾದಿಸಿದ ಕದಿರನ್ನು ಸಿಗದವರೊಡನೆ ಹಂಚಿಕೊಳ್ಳುತ್ತಾರೆ. ಕದಿರನ್ನು ಪಡೆಯುವ ಮೇಲಾಟದಲ್ಲಿಯೂ ಸಂಭ್ರಮ. ಪುನಃ ಜಾಗಟೆ ಶಬ್ಧವಾದ ಬಳಿಕ ಕದಿರನ್ನು ಹೊತ್ತ ದೇವರ ಪಾಲ್ಕಿ ಹೊರಡುತ್ತದೆ. ಬಸರೂರಿನ ಪೇಟೆಯಲ್ಲಿ ಮೆರವಣಿಗೆ ಸಾಗಿ ಬಂದು ಶ್ರೀತಿರುಮಲ ವೆಂಕಟರಮಣ ದೇವಾಲಯಕ್ಕೆ ಸುತ್ತು ಹಾಕಿ, ತಿರುಮಲ ದೇವರಿಗೆ ಕದಿರು ಒಪ್ಪಿಸಿ, ಶ್ರೀ ಮಹಾಲಿಂಗೇಶ್ವರ ದೇವಾಲಯಕ್ಕೆ ಸುತ್ತು ಬರುತ್ತಾರೆ. ಅಲ್ಲಿಯೂ ಬಸವ ಮಂಟಪಕ್ಕೆ ಕದಿರು ಒಪ್ಪಿಸಿ

ಪ್ರತಿಯೊಬ್ಬರು ಮನೆಗೆ ಒಯ್ಯುತ್ತಾರೆ. ಮಹಾಲಿಂಗೇಶ್ವರನ ಮಧ್ಯಾಹ್ನದ ಬಲಿ ಮುಗಿದ ಮೇಲೆ ಅರ್ಚಕರು ಹರಿವಾಣದಲ್ಲಿ ಪಾದುಕೆ ಮತ್ತು ಕದಿರು ಇಟ್ಟು ದೇವಾಲಯದ ಕಟ್ಟುಕಟ್ಟಲೆ ಮನೆಯವರಿಗೆ ವಾದ್ಯ ಸಮೇತ ಕದಿರು ನೀಡುವ ಕ್ರಮ ಬಸರೂರಿನಲ್ಲಿ ಇಂದಿಗೂ ನಡೆದುಕೊಂಡು ಬಂದಿದೆ. ಕದಿರು ಕೊಂಡು ಹೋದವರಿಗೆ ಒಂದು ತೆಂಗಿನಕಾಯಿಯೊಂದಿಗೆ ದಕ್ಷಿಣೆ ನೀಡುವರು. ಕದಿರುಕೊಂಡು ಹೋದವರು ಕಟ್ಟುಕಟ್ಟಲೆಯವರ ಮನೆಯ ದೇವರ ಕೋಣೆಯಲ್ಲಿ ಪಾದುಕೆ ಇಟ್ಟು ಮಂಗಳಾರತಿ ಮಾಡುವರು. ಕೊಳ್ಕೆರೆ ಮನೆಯವರಿಗೆ ಕದಿರು ನೀಡಿದ್ದಕ್ಕೆ ಮರ್ಯಾದೆಯಾಗಿ ಸುಕ್ಕಿನುಂಡೆ, ವಡೆ, ಹರಿವಾಣ ನೈವೇದ್ಯ ನೀಡಲಾಗುತ್ತದೆ.

ಕದಿರು ಮನೆಯಂಗಳ ಪ್ರವೇಶಕ್ಕೆ ಮುನ್ನ ಸಗಣಿ ಸಾರಿಸಿ ಹೊಲಿನಿಟ್ಟ[೧೨]ನಿಂದ ರಂಗೋಲಿ ಹಾಕಿರುತ್ತಾರೆ. ಕದಿರು ಹೊತ್ತು ತಂದವರ ಕಾಲಿಗೆ ನೀರು ಹೊಯ್ದು ಅಕ್ಷತೆ ಹಾಕುತ್ತಾರೆ. ಶಂಖ, ಜಾಗಟೆ, ಸ್ವರ ಮೇಳದೊಂದಿಗೆ ಮನೆಯ ದೇವರ ಕೋಣೆಯಲ್ಲಿ ಮಣೆಯ ಮೇಲಿಟ್ಟು ಪುನಃ ಪೂಜೆ ಸಲ್ಲಿಸುತ್ತಾರೆ. ಅನಂತರದಲ್ಲಿ ಕದಿರನ್ನು ಜೊತೆಗಿರುವ ಮಾವಿನೆಲೆ, ಹಲಸಿನೆಲೆಗೆ ಸೇರಿಸಿ ಸಾತದ ನಾರಿನಿಂದ ಬಿಗಿದು ಮನೆಯ ವಿವಿಧ ಭಾಗಗಳಿಗೆ ಕಟ್ಟುತ್ತಾರೆ. ಕಳ್ಸಿಗೆ[೧೩], ಒನಕೆ, ನೇಗಿಲು, ನೊಗ, ಹಾರೆ, ಸುಣ್ಣದ ಮಡಿಕೆ, ದೇವರಗಂಟು, ಮೇಟಿಕಂಬ, ತುಳಸಿಕಟ್ಟೆ, ಹಟ್ಟಿ, ತೆಂಗು, ಅಡಿಕೆ, ಹೀಗೆ ಎಲ್ಲಾ ಕಡೆ ಕದಿರನ್ನು ಕಟ್ಟುತ್ತಾರೆ. ಕದಿರನ್ನು ಮನೆ ತುಂಬಿಸುವ ಮತ್ತು ಕದರನ್ನು ಕಟ್ಟುವ ಕ್ರಿಯೆಯಲ್ಲಿ ಸಮೃದ್ಧಿಯ ಆಶಯವು ಇರುವುದನ್ನು ಕಾಣತ್ತದೆ. ಅಂದಿನ ಹಬ್ಬದೂಟದಲ್ಲಿ ಬಿಳಿಪಾಯ್ಸಕ್ಕೆ[೧೪] ಅಗ್ರಸ್ಥಾನ.

ಕದಿರು ಹಬ್ಬದ ದಿನ ಊಟಕ್ಕೆ ಕುಳಿತುಕೊಳ್ಳುವ ಮುನ್ನ ಕಿರಿಯರು ಹಿರಿಯರ ಆಶೀರ್ವಾದ ಪಡೆದು ಹೊಸ್ತುಂತೆ[೧೫] ಎಂದು ಹೇಳಿ ಊಟ ಮಾಡುತ್ತಾರೆ. ಹೊಸಅಕ್ಕಿ ಊಟಕ್ಕೆ ಕುಳಿತವರಿಗೆ ಕೊಡಿ ಬಾಳೆಎಲೆ ಇಟ್ಟು ಬಡಿಸುತ್ತಾರೆ. ಆ ದಿನದ ಊಟದಲ್ಲಿ ಬಿಳಿಪಾಯ್ಸದ ಜೊತೆಗೆ ಸಳ್ಳಿಸಾಸಿವೆ[೧೬] ಕೆಸವು ಮತ್ತು ಹರಿವೆದಂಟು ಸೇರಿಸಿದ ಪಲ್ಯ ಮುಂತಾದ ವ್ಯಂಜನಗಳಿರುತ್ತವೆ. ತುಳು ಗಾದೆಯೊಂದು ಹೊಸ್ತಿನಲ್ಲಿ ಬಳಸುವ ತರಕಾರಿ ಬಗ್ಗೆ ಹೀಗೆ ಹೇಳಿದೆ[೧೭]. ಊಟಕ್ಕೆ ಕುಳಿತಾಗ ಮಾತನಾಡಬಾರದು. ಊಟದ ಬಳಿಕ ವೀಳ್ಯತಿಂದು ಮಾತನಾಡಬೇಕು ಎಂಬ ವಿಧಿನಿಷೇಧವಿದೆ. ಆ ದಿನ ರಾತ್ರಿ ವೈದಿಕೇತರರ ಮನೆಯಲ್ಲಿ ಮಾಂಸದೂಟ ಮಾಡುವ ಕ್ರಮವಿದೆ.

ಬಸರೂರಿನ ಕದಿರುಹಬ್ಬಕ್ಕೆ ಸಾಮಾಜಿಕ ಸಮಾನತೆಯ ದೃಷ್ಟಿಕೋನವಿದೆ. ಬಸರೂರಿನ ಕದಿರುಹಬ್ಬದಲ್ಲಿ ಎಲ್ಲರು ಭಾಗವಹಿಸುತ್ತಾರೆ. ಕದಿರು ತೆಗೆಯುವಲ್ಲಿ ಮನರಂಜನೀಯ ಮೇಲಾಟವಿದ್ದರೂ ಹಂಚಿಕೊಳ್ಳುವಲ್ಲಿನ ಸಮಾನತೆ ಮತ್ತು ಭಕ್ತಿ ಕದಿರುಹಬ್ಬದ ವಿಶೇಷ.

ಆದರೆ ಇತ್ತೀಚಿನ ದಿನಗಳಲ್ಲಿ ಬಸರೂರಿನ ಕದಿರುಹಬ್ಬದ ಏಕತೆ ಮಾಯವಾಗಿದೆ. ಮೂಡುಕೇರಿಯವರು ತಮ್ಮ ಪ್ರತ್ಯೇಕ ಅಸ್ತಿತ್ವವನ್ನು ಕದಿರುಹಬ್ಬದ ಸಂದರ್ಭದಲ್ಲಿ ಪ್ರದರ್ಶಿಸುತ್ತಾರೆ. ಬಸರೂರಿನ ಮೂಡುಕೇರಿಯ ಕೊನೆಯಲ್ಲಿರುವ ಅರಳಿಮರದ ಕೆಳಗೆ ಕದಿರನ್ನು ತಂದಿಟ್ಟು ಕದಿರುಹಬ್ಬದ ಆಚರಣೆ ಮಾಡುತ್ತಾರೆ. ಪಡುವಕೇರಿಯವರು ಕದಿರುಹೊತ್ತು ಶ್ರೀಮಹಾಲಿಂಗೇಶ್ವರನನ್ನು ಸುತ್ತುಹಾಕಿದರೆ, ಮೂಡುಕೇರಿಯವರು ಆದಿನಾಥೇಶ್ವರನನ್ನು ಸುತ್ತುಹಾಕಿ ಕದಿರನ್ನು ಮನೆಗೆ ಒಯ್ಯುತ್ತಾರೆ. ಆದರೆ ಕದಿರುಹಬ್ಬದ ಹೇಳಿಕೆ ಮಾತ್ರ ಮಹಾಲಿಂಗೇಶ್ವರ ದೇವಾಲಯದಿಂದ ಹೊರಡುತ್ತದೆ.

### ೭.೧.೩. ಕೈಲಾ ಪೂಜೆ

ವರ್ಷಕ್ಕೊಮ್ಮೆ ಕೊಡಿತಿಂಗಳಿನಲ್ಲಿ[೧೮] ಕೋಟಿಚೆನ್ನಯ್ಯರಿಗೆ ಹೊಸ್ತನ್ನು ಕೊಡುವ ರೂಢಿ ಇದೆ. ಅದನ್ನು ಕೈಲಾಪೂಜೆಯೆಂದು ಕರೆಯುತ್ತಾರೆ. ಇದಕ್ಕೆ ಕಾಲದಪೂಜೆ, ಅಗಲುಸೇವೆ ಎಂಬ ಹೆಸರಿದೆ. ಬಸರೂರಿನ ಮಾಗಣೆಯ ಜನ ಇದರಲ್ಲಿ ಪಾಲ್ಗೊಳ್ಳುತ್ತಾರೆ. ಬಸರೂರಿನ ಕದಿರು ಹಬ್ಬದ ದಿನ ಅಂದರೆ ಕೊಡಿ ತಿಂಗಳು ಹಿಡಿಯುವ ಸಂಕ್ರಮಣದ ದಿನ ಕೈಲಾಪೂಜೆಗೆ ದಿನ ಇಡುತ್ತಾರೆ. ಕೈಲಾಪೂಜೆಗೆ ದಿನ ಇಟ್ಟಿರುವುದನ್ನು ಎಲ್ಲರಿಗೆ ತಿಳಿಸಲಾಗುತ್ತದೆ. ಕೈಲಾಪೂಜೆಗೆ ದಿನ ಇಟ್ಟ ಮೇಲೆ ಕೃಷಿಕರು ಹೊಲಿರಾಶಿಯಿಂದ ಭತ್ತವನ್ನು ತೆಗೆದಿರಿಸುತ್ತಾರೆ. ಅದನ್ನು ಊರ ಹೇಳಿಕೆಗೆ ಬಂದವರ ಕೈಯಲ್ಲಿ ಕೊಡುತ್ತಾರೆ. ಕೈಲಾಪೂಜೆಯ ದಿನ ಗರಡಿಯಲ್ಲಿರುವ ಎಲ್ಲಾ ದೈವಕ್ಕೂ ಪನಿವಾರದ ವ್ಯವಸ್ಥೆಯನ್ನು ಮಾಡಲಾಗುತ್ತದೆ. ಬಸರೂರು ಮಾಗಣೆಗೆ ಸೇರಿದ ಕೃಷಿಕರು ತಮ್ಮ ಭೂಮಿಯಲ್ಲಿ ಬೆಳೆದ ಭತ್ತ, ಕಬ್ಬು, ಹಸಿರು ತರಕಾರಿ, ಧವಸ-ಧಾನ್ಯಗಳನ್ನು, ಸೀಯಾಳವನ್ನು ಹೊರೆಕಾಣಿಕೆ ರೂಪದಲ್ಲಿ ಕೊಟ್ಟು ಕೃಷಿ ಸಮೃದ್ಧಿಗಾಗಿ ಬೇಡಿಕೊಳ್ಳುತ್ತಾರೆ. ಮಗುವಿನ ಆಯುಷ್ಯ ವೃದ್ಧಿಗಾಗಿ, ಮಕ್ಕಳ ಚೇಷ್ಟೆಯ ನಿಯಂತ್ರಣಕ್ಕೆ, ಹೆಣ್ಣು ಮಕ್ಕಳ ಋತುಕಾಲ ಸುಗಮವಾಗಲು ಕೈಲಾಪೂಜೆಯ ದಿನ ಹರಕೆ ಒಪ್ಪಿಸುತ್ತಾರೆ ಕೈಲಾಪೂಜೆಯ ದಿನ ಎಲ್ಲಾ ಗಣಗಳ ದರ್ಶನ ನಡೆಯುತ್ತದೆ. ಕಾಲದ/ಕೈಲಾ ಪೂಜೆಯ ದಿನ ಗಡಿಮಾರಿ ನಡೆಯುತ್ತದೆ.

ಕೈಲಾಪೂಜೆಯ ದಿನ ಗರಡಿಯ ಎಲ್ಲಾ ದೈವ ಗಣಗಳ ದರ್ಶನ ನಡೆಯುತ್ತದೆ. ಅನಂತರ ಪಂಜುರ್ಲಿ ಮುಂದಾಳತ್ವದಲ್ಲಿ ಗಡಿಪೂಜೆ ನಡೆಯುತ್ತದೆ. ಒಂದನೆ ಗಡಿ ಮೂರ್ಹಾನೆಬಬ್ಬರ್ಯ ದೈವಸ್ಥಾನ, ದಕ್ಷಿಣದಲ್ಲಿ ಮಠದ ಹಿಂದಿನ ಅಂತನಮನೆ ಗಡಿ. ಗಡಿಪೂಜೆ ಮುಗಿದ ಮೇಲೆ ಗರಡಿಯಲ್ಲಿ ಬಾಲಯ್ಯನ ದರ್ಶನ. ವಿಶೇಷವಾಗಿ ಬರೆದ ಮಂಡಲದ[೧೯] ಸುತ್ತ ಬಾಲಯ್ಯನು ಬಗೆ ಬಗೆಯಿಂದ ಚೇಷ್ಟೆ ಮಾಡುತ್ತ ಕುಣಿಯುವುದು ಮನರಂಜನೆಯ ಜೊತೆಗೆ ಭಕ್ತಿಯನ್ನು ಹುಟ್ಟಿಸುತ್ತದೆ. ಮಕ್ಕಳ ಚೇಷ್ಟೆಗಾಗಿ ಬಾಳೆಹಣ್ಣಿನ ಕೊನೆಯನ್ನು ಬಾಲಯ್ಯನಿಗೆ ಅರ್ಪಿಸುತ್ತಾರೆ. ಬಾಲಮ್ಮನಿಗೆ ಬಾಣಂತಿಚೈಯ್[೨೦]ಯನ್ನು

ಹರಕೆ ರೂಪದಲ್ಲಿ ಅರ್ಪಿಸುತ್ತಾರೆ. ಬಾಲಯ್ಯನು ಬಾಳೆ ಕೊನೆಯನ್ನು ಹಿಡಿದು ಮಂಡಲದ ಸುತ್ತಲೂ ಬಾಲ ಕೇಳಿಯನ್ನು ಆಡುತ್ತಾನೆ. ಬಾಲಯ್ಯನಿಗೆ ಅರ್ಪಿಸಿದ ಬಾಳೆಗೊನೆ ಮಂಡಲದ ಒಳಗಿಟ್ಟು ಕೊನೆಗೆ ಪ್ರಸಾದ ರೂಪದಲ್ಲಿ ಬಾಳೆಹಣ್ಣು ನೀಡುವ ಕ್ರಮವಿದೆ. ಕೈಲಾಪೂಜೆಯ ದಿನ ಗರಡಿಯ ಎಲ್ಲಾ ದೈವದ ಉರುಗಳ ಮುಂದೆ ಬಾಳೆಎಲೆ ಹಾಕಿ, ಅವಲಕ್ಕಿ ಪಂಚಕಜ್ಜಾಯ, ಗಂಧ, ತೆಂಗಿನಕಾಯಿ ಮತ್ತು ಹಣತೆ ದೀಪವನ್ನು ಹಚ್ಚಿಡುತ್ತಾರೆ. ಕೈಲಾಪೂಜೆಯ ದಿನ ಐದು ಎಡೆ ಬಳಸುವ ಕ್ರಮವಿದೆ. ಎಡೆಗೆ ಮೊದಲು ಅನ್ನ ಬಳಸಿ ನಂತರ ಅನ್ನ ತೋರದ ಹಾಗೆ ಅದರ ಮೇಲೆ ಪದಾರ್ಥವನ್ನು ಮುಚ್ಚುತ್ತಾರೆ. ಐದು ಎಡೆಗೆ ಮತ್ತು ದೈವಕ್ಕೆ ಧೂಪ-ದೀಪ ಬೆಳಗಿಸುತ್ತಾರೆ. ಕೈಲಾಪೂಜೆಯ ದಿನ ಗರಡಿಯಲ್ಲಿರುವ ಎಲ್ಲಾ ದೈವಗಳಿಗೆ ಪನಿವಾರದ[೨೧] ವ್ಯವಸ್ಥೆಯಾಗುತ್ತದೆ. ಹೊರೆಕಾಣಿಕೆಯನ್ನು ಬ್ರಹ್ಮಬೈದರ್ಕಳಿಗೆ ಅಗಲು ಸೇವೆಯಾಗಿ ಅರ್ಪಿಸುತ್ತಾರೆ.

ಕೈಲಾಪೂಜೆ ಕೃಷಿ ಸಂಬಂಧಿ ಆಚರಣೆಯಾಗಿದ್ದು ಗರಡಿಗೆ ಹೊರೆ ಕಾಣಿಕೆಯ ರೂಪದಲ್ಲಿ ನೀಡುವ ಕೃಷಿ ಉತ್ಪನ್ನಗಳನ್ನು ದೈವಗಳಿಗೆ ಪನಿವಾರದ ರೂಪದಲ್ಲಿ ಅರ್ಪಿಸುವುದು ಮತ್ತು ಉತ್ತಮ ಬೆಳೆಗಾಗಿ ಪ್ರಾರ್ಥಿಸುವುದನ್ನು ಕಾಣಬಹುದು.

"ಪ್ರಾಣಿಗಳ ಆರಾಧನೆ ಕೃಷಿಸಂಸ್ಕೃತಿಯ ಒಂದು ಭಾಗವಾಗಿದೆ. ಆರಾಧನೆಯ ಮೂಲಕ ಪ್ರಾಣಿಗಳನ್ನು ಸಂಪ್ರೀತಗೊಳಿಸುವುದು. ಆರಾಧನೆಯ ಮೂಲಕ ತನ್ನ ಕೃಷಿಗೆ ಮಾರಕವಾಗುವ ದುಷ್ಟಶಕ್ತಿಗಳನ್ನು ನಿಯಂತ್ರಿಸುವುದು ಮಾತ್ರವಲ್ಲದೆ ಕೃಷಿ ಉತ್ಪನ್ನವನ್ನು ಹೆಚ್ಚು ಮಾಡುವ ತಂತ್ರವಾಗಿದೆ"(ಅಶೋಕ ಆಳ್ವ;೨೦೦೭;ಪುಟ:೩೨೨). ಪಂಜುರ್ಲಿಯಂತಹ "ಪ್ರಾಣಿಗಳ ಆರಾಧನೆ ಇದೊಂದು ಕೃಷಿಸಂಸ್ಕೃತಿಯ ಪ್ರಭುತ್ವಾತ್ಮಕ ತಾತ್ವಿಕತೆಯ ರೂಪ ಎನ್ನಬಹುದು. ತಮ್ಮ ಭತ್ತದ ಕೃಷಿಯನ್ನು ಹಾಳು ಮಾಡುವ ಕಾಡು ಹಂದಿಗಳ ಆರಾಧನ ರೂಪವಾದ ಪಂಜುರ್ಲಿ[೨೨] ಮುಂತಾದ ಪ್ರಾಣಿಗಳನ್ನು ದೈವಗಳಾಗಿ ಆರಾಧಿಸುತ್ತಾರೆ. ಮೈಂದಾಳ್ತಿಯುನ್ನು ಗರಡಿಗಳಲ್ಲಿ ಬಾಲಮ್ಮ ಎಂದು ಕರೆಯುವುದು"(ಅಮೃತ ಸೋಮೇಶ್ವರ;೨೦೦೭;ಪುಟ:೫೫). ಈ ಮೈಂದಾಳ್ತಿ ಅಥವಾ ಬಾಲಮ್ಮನನ್ನು ಬಾಣಂತಿಯರ ಮತ್ತು ಶಿಶುಗಳ ಕ್ಷೇಮಕ್ಕಾಗಿ ಪೂಜಿಸುತ್ತಾರೆ. ಸುಖ ಪ್ರಸವಕ್ಕೆ ಈಕೆ ಅನುಗ್ರಹಿಸುತ್ತಾಳೆ ಎಂಬ ಪ್ರತೀತಿ ಇದೆ. ಕೋಟಿಚೆನ್ನಯ್ಯರ ಗರಡಿಗೆ ಕೈಲಾಪೂಜೆಯ ದಿನ ಅಕ್ಕಿ ಮತ್ತು ಭತ್ತದ ಮುಡಿಗಳು ರಾಶಿಯಾಗಿ ಬರುತ್ತದೆ. ಇತರ ಬೆಳೆ ಕಾಣಿಕೆಗಳೂ ಹೊರೆಯ ರೂಪದಲ್ಲಿ ಬಂದಿರುತ್ತದೆ. ಗರಡಿಯಲ್ಲಿ ಮಾಂಕಾಳ್ತಿಗೆ ರಕ್ತ ಬಲಿ ಇದೆ. ಹರಕೆಯ ಪ್ರಾಣಿಗಳ ಮಾಂಸವನ್ನು ಪಲ್ಯಮಾಡಿ ಅನ್ನದೊಂದಿಗೆ ಅರ್ಪಿಸುತ್ತಾರೆ. ಇದನ್ನು ಮುಂಜ[೨೩]ಎನ್ನುತ್ತಾರೆ. ಇಲ್ಲಿ ಬಬ್ಬರ್ಯನಿಗೆ ಕಡುಬಿನ ನೈವೇದ್ಯ ಮಾಡುತ್ತಾರೆ. ಜೋಗಿಪುರುಷನಿಗೆ[೨೪] ಭಂಗಿ, ಹೊಗೆಸೊಪ್ಪು ನೀಡುವ ಕ್ರಮ ಇದ್ದಿತ್ತು. ಇವೆಲ್ಲವನ್ನು

ಗಮನಿಸಿದಾಗ ಗರಡಿಯಲ್ಲಿ ನಡೆಯುವ ಎಲ್ಲಾ ಆಚರಣೆಗಳು ಕೃಷಿ ಸಂಬಂಧಿತವಾಗಿದೆ.

### ೭.೧.೪.ದೀಪಾವಳಿ/ಬಲೀಂದ್ರ ಹಬ್ಬ

ಬಸರೂರಿನ ದೀಪಾವಳಿ ಹಬ್ಬದಲ್ಲಿ ವೈವಿಧ್ಯತೆ ಇದೆ. ಬಸರೂರು ಕೃಷಿಸಂಸ್ಕೃತಿಯನ್ನು ಅವಲಂಬಿಸಿರುವ ಪ್ರದೇಶವಾಗಿರುವುದರಿಂದ ದೀಪಾವಳಿ ಹಬ್ಬ ಧಾರ್ಮಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಪಡೆದುಕೊಂಡಿದೆ.

ಬಸರೂರಿನ ಗ್ರಾಮೀಣ ಪರಿಸರವು ಕೃಷಿ ಆಚರಣೆಗಳನ್ನು ಇಂದಿಗೂ ಉಳಿಸಿಕೊಂಡು ಬಂದಿದೆ. ಬಸರೂರಿನ ಕೃಷಿಕರು ದೀಪಾವಳಿ ಹಬ್ಬದಲ್ಲಿ ಬಲೀಂದ್ರನನ್ನು ಮೂರ್ತಿಮಾಡಿ ಆರಾಧಿಸಿಕೊಂಡು ಬರುತ್ತಿದ್ದಾರೆ. ಬಲಿಚಕ್ರವರ್ತಿ ಕೃಷಿಕ ಸಮಾಜದ ದೊರೆ ಎಂಬುದು ಇಲ್ಲಿನ ನಂಬಿಕೆ. ಅವನ ರಾಜ್ಯ ಸುಭಿಕ್ಷವಾಗಿತ್ತು. ಅವನ ಕಾಲದಲ್ಲಿ ಚಿನ್ನದ ನೊಗ, ನೇಗಿಲು ಉಪಯೋಗಿಸಿ ಹೊಲ ಊಳುತ್ತಿದ್ದರು ಎಂಬೆಲ್ಲ ಕತೆಗಳಿವೆ. ಅವನು ದೇವಲೋಕ ಸಂಪಾದಿಸಬಲ್ಲಷ್ಟು ಯೋಗ್ಯ ಮನುಷ್ಯನಾಗಿದ್ದನು. ಹೀಗಾಗಿ ದೇವತೆಗಳು ಮತ್ಸರಿಸಿ ವಿಷ್ಣುವಿನ ನೆರವು ಪಡೆದರು. ವಿಷ್ಣು ವಾಮನನಾಗಿ ಮೂರು ಹೆಜ್ಜೆ ದಾನಬೇಡಿದ. ವಾಮನ ಮೋಸದ ವ್ಯಕ್ತಿ ಎಂದು ತಿಳಿದರೂ ಬಲಿಂದ್ರ ದಾನನೀಡಿ ಸರ್ವಸ್ವವನ್ನು ಕಳೆದುಕೊಂಡನು. ಅತೀವವಾದ ನೋವಿನಿಂದ ತನ್ನ ಮಣ್ಣಿನ ಮಕ್ಕಳನ್ನು ಅಗಲಿಹೋದ ಬಲೀಂದ್ರನಿಗೆ ಮತ್ತು ಅವನ ಕುಟುಂಬಕ್ಕೆ ವರ್ಷದಲ್ಲಿ ಮೂರು ಬಾರಿ ಭೂಮಿಗೆ ಬರಲು ವಾಮನ ಸಮ್ಮತಿಸಿದ. ಸೋಣೆ ತಿಂಗಳಲ್ಲಿ ಬಲೀಂದ್ರನ ತಾಯಿ ಹೊಸಲ್‌ಅಜ್ಜಿ[೨೫]ಯಾಗಿ, ನವರಾತ್ರಿಗೆ ಬಲೀಂದ್ರನ ಹೆಂಡತಿ ಸರ್ವೇಶ್ವರೀಯಾಗಿ, ಭೂಮಿಗೆ ಬಂದು ಮಕ್ಕಳನ್ನು ನೋಡಿ ಹೋಗುತ್ತಾರೆ. ಕೊನೆಗೆ ದೀಪಾವಳಿ ತಿಂಗಳಲ್ಲಿ ಬಲೀಂದ್ರ ಬರುತ್ತಾನೆ ಎಂಬುದು ಜನರ ನಂಬಿಕೆ.

ಬಸರೂರಿನ ಹಾಡಿಮನೆ, ನಡುಮನೆ, ಕಂದಾವರದ ಶೇರಿಗಾರರ ಮನೆಯಲ್ಲಿ ಬಲೀಂದ್ರ ಮತ್ತು ಅವನ ಮಂತ್ರಿಯನ್ನು ಆರಾಧಿಸುವ ಮೂಲಕ ಬಲೀಂದ್ರ ಭೂಮಿಯ ಒಡೆಯ ದ್ರಾವಿಡ ಸಂಸ್ಕೃತಿಯ ಪ್ರತೀಕಯೆನ್ನುವಂತೆ ಆತನ ಹಬ್ಬವನ್ನು ಆಚರಿಸುತ್ತಾರೆ. ಇದನ್ನು ದೀವಾಳಿಹಬ್ಬ ಅಥವಾ ಬಲೀಂದ್ರ ಹಬ್ಬ ಎಂದೂ ಕರೆಯುತ್ತಾರೆ. ದೀವ್ರೋಳಿ[೨೬] ತಿಂಗಳಲ್ಲಿ ಬರುವುದರಿಂದ ದಿವಾಳಿ ಹಬ್ಬವೆಂದು ಬಲೀಂದ್ರನನ್ನು ಭೂಮಿಗೆ ಕರೆಯುವುದರಿಂದ ಬಲೀಂದ್ರನ ಹಬ್ಬವೆನ್ನುವರು. ಅಮವಾಸ್ಯೆಯ ಮುನ್ನಾದಿನ ಬೂದನೀರ್ ಹಬ್ಬ. ಅಮವಾಸ್ಯೆಯ ಹಿಂದಿನ ದಿನವನ್ನು ಬೂದಿಯೆಂದು ಕರೆಯುವ ವಾಡಿಕೆ. ಬೂದಿಯ ಹಿಂದಿನ ದಿನ ರಾತ್ರಿ ನೀರಿನ ಹಂಡೆಯನ್ನು ತೊಳೆದು ಅಕ್ಷತೆ ಹಾಕಿ ಸುತ್ತಲೂ ಬೂದಿ ಹಚ್ಚಿ ಕೊರಳಿಗೆ ಸೋರೆ ಬೀಳನ್ನು ಸುತ್ತಿ ಉಣ್ಣುವ ಬಟ್ಟಲನ್ನು ಬಾರಿಸುತ್ತ ಬಾವಿಂದ ನೀರು ಸೇದಿ ಹಂಡೆಯನ್ನು ತುಂಬಿಸುತ್ತಾರೆ. ಹೀಗೆ ತುಂಬಲಾದ ನೀರೆ ಬೂದ್‌ನೀರ್.

ಮರುದಿನ ಬೆಳಿಗ್ಗೆ ಮೈಗೆ ಎಣ್ಣೆ ಹಚ್ಚಿಕೊಂಡು ಗಂಡಸರು ಸ್ನಾನ ಮಾಡುತ್ತಾರೆ. ಸ್ನಾನದ ನಂತರ ಮೆತ್ತಿಕಡಬು ತಿನ್ನಲು ನೀಡುತ್ತಾರೆ.

ಬಸರೂರಿಗೆ ಬಂದು ಕೃಷಿಯನ್ನು ವೃತ್ತಿಯಾಗಿ ಮಾಡಿಕೊಂಡ ಸೇರಿಗಾರರಿಗೆ ಬಲೀಂದ್ರನನ್ನು ಬರಮಾಡಿಕೊಳ್ಳುವ ದಿವಾಳಿಹಬ್ಬ ದೊಡ್ಡ ಹಬ್ಬವಾಗಿದೆ. ಈ ಹಬ್ಬ ಮೂರು ದಿನಗಳ ಕಾಲದವರೆಗೆ ನಡೆಯುತ್ತದೆ. ದೀವಾಳಿ ಹಬ್ಬವು ಆಶ್ವಿಜಬಹುಳ ತ್ರಯೋದಸಿಯಿಂದ, ಕಾರ್ತಿಕಶುದ್ಧ ಪ್ರತಿಪದೆಯವರೆಗೆ ನಡೆಯುತ್ತದೆ. ಬೂದ್ ನೀರ್ ತುಂಬುವ ದಿನ ಬಲೀಂದ್ರನನ್ನು ಕೂರಿಸುವ ಸ್ಥಳದಲ್ಲಿ ನೆಲವನ್ನು ಸೆಗಣಿಯಿಂದ ಸಾರಿಸಿ ಅಲ್ಲಿ ಚೌಕಾಕಾರದ[೨೭] ರಂಗೋಲಿಯನ್ನು ಬರೆದು ಅದರ ಮಧ್ಯದಲ್ಲಿ ಜೋಡು ಅರಸಿನ ಎಲೆಯ ಮೇಲೆ ಸಗಣಿಯಲ್ಲಿ ಕಣ್ಣು, ಕಿವಿ, ಮೂಗು ಬರೆದು ಅನ್ನ, ಸಾರು ಇಟ್ಟು ಮಧ್ಯಾಹ್ನ ನೈವೇದ್ಯ ಮಾಡಬೇಕು. ಆಕೆ ಬಲೀಂದ್ರ ಬರುವ ವರ್ತಮಾನವನ್ನು ತರುವ ದಕ್ಲಿದೇವ್ರ[೨೮]. ನರಕಚತುರ್ದಶಿಯ ದಿನ ಬೂದನೀರು ಮೀಯಲು ಬಲೀಂದ್ರನನ್ನು ಕರೆತರುತ್ತಾರೆ. ತುಳಸಿಕಟ್ಟೆಯ ಎದುರು ಹಡಿಮಂಚದ[೨೯] ಎದುರಿನಲ್ಲಿ ಐದು ಮೆಟ್ಟಿನ ಜಾಗ ಅಳೆದು ಅಲ್ಲಿ ರಂಗೋಲಿ ಬರೆಯಬೇಕು. ಗುಡಿಗಾರ ಜೇಡಿ ಮಣ್ಣಿನಿಂದ ಸಿಂಹಾಸನದ ಮೇಲೆ ಕುಳಿತ ಭಂಗಿಯಲ್ಲಿರುವ ಬಲಿಂದ್ರನನ್ನು, ಅವನಿಗೆ ಕೊಡೆ ಹಿಡಿಯುತ್ತಿರುವ ಬಲೀಂದ್ರನ ಮಂತ್ರಿಯನ್ನು ಮಾಡಿಡುತ್ತಾನೆ(ಚಿತ್ರ ೧೩). ಬಲೀಂದ್ರ ಮೂರ್ತಿಗೆ ವಿವಿಧ ಬಗೆಯ ಹೂವಿನಿಂದ ಅಲಂಕಾರ ಮಾಡಿ ಆ ದಿನ ರಾತ್ರಿ ಅವಲಕ್ಕಿ ಕಲಸಿ ನೈವೇದ್ಯ ಮಾಡುತ್ತಾರೆ. ಧೂಪ ಹಾಕುತ್ತಾರೆ. ಬೂದ್ನೀರು ತುಂಬಿದ ದಿನ ದಕ್ಲಿದೇವ್ರ, ಬಲೀಂದ್ರ ಬರುವ ವರ್ತಮಾನ ತಂದ ದಿನ 'ಹೊಲಿ ಕೊಟ್ರೊ ಬಲಿ ಕೊಟ್ರೋ,ಬಲೀಂದ್ರ ದೇವ್ರ, ತಮ್ಮ ರಾಜ್ಯಕ್ಕೆ ತಾವು ಬತ್ತರೋ' ಎಂದು ಮೂರು ಬಾರಿ ಕೂಗು ಹಾಕುತ್ತಾರೆ. ಬಲೀಂದ್ರ ಮೂರು ದಿನಗಳ ಮಟ್ಟಿಗೆ ಬಂದು ಕೋಟೆಯನ್ನೇರಿ ತನ್ನ ರಾಜ್ಯದ ಸಿರಿಯನ್ನು ನೋಡುತ್ತಾನಂತೆ. ಮೊದಲ ದಿನ ಭೂಮಿಯ ಒಡೆಯನಾದ ಬಲೀಂದ್ರನು ಬರ್ತಾನೆ ಎಂದು ಕರೆದರೆ, ಎರಡನೇಯ ದಿನ 'ಹೊಲಿಕೊಟ್ರೊ ಬಲಿ ಕೊಟ್ರೊ, ಬಲೀಂದ್ರ ದೇವ್ರೂ, ತಮ್ಮ ರಾಜ್ಯಕ್ಕೆ ತಾವು ಬಂದೊ' ಎಂದು ಹೇಳುತ್ತಾರೆ. ಒಂದನೇ ದಿನ ಕಡ್ಲೆಪಂಚಕಜ್ಜಾಯ, ಎರಡನೇಯ ದಿನ ಬಲೀಂದ್ರನಿಗೆ ತೆಳ್ಳಿನದೋಸೆ ಮಾಡಿ ಬಡಿಸಲಾಗುತ್ತದೆ. ಮೂರನೇದಿನ ಬಲೀಂದ್ರ ಈ ಭೂಮಿಯನ್ನು ಬಿಟ್ಟು ಹೊರಡುವ ದಿನವಾಗಿದ್ದು, 'ಹೊಲಿಕೊಟ್ರೊ ಬಲಿ ಕೊಟ್ರೊ, ಬಲೀಂದ್ರ ದೇವ್ರೂ, ತಮ್ಮ ರಾಜ್ಯಕ್ಕೆ ತಾವು ಹ್ವಾತ್ರೋ' ಎಂದು ಹೇಳುತ್ತಾರೆ. ಆ ದಿನ ರಾತ್ರಿ ಅಕ್ಕಿ ಮತ್ತು ಕಾಯಿ ಹಾಕಿದ ಚಿಕ್ಕಚಿಕ್ಕ ದೋಸೆ, ಮೊಸರು ಅನ್ನವನ್ನು ಸೋರೆ ಎಲೆಯಲ್ಲಿ ಗುತ್ತಿಕಟ್ಟಿ[೩೦] ಹುಲ್ಲುಕುತ್ತರಿಯಲ್ಲಿಡುವರು. ಕೆಲವು ಕಡೆ ಗೊಬ್ಬರರಾಶಿಯ ಮೇಲೆ ಕೋಲಿಗೆ ಕಟ್ಟಿ ಹುಗಿಯುವರು. ಮರುದಿನ ಮಕ್ಕಳು, ಬುತ್ತಿಯನ್ನು ತಿನ್ನುತ್ತಾರೆ. ಮರುದಿನ ಬೆಳಿಗ್ಗೆ ಬಲೀಂದ್ರನನ್ನು ಕೈ ಕಾಲು

ಮುರಿದು ಅರಸಿನದ ಏರಿಯಲ್ಲಿ ವಿಸರ್ಜನೆ ಮಾಡುತ್ತಾರೆ. ಅರಸಿನದ ಬೇರು ಪಾತಾಳಕ್ಕೆ ಚಾಚಿ ಕೊಂಡಿರುತ್ತದೆ. ಅಲ್ಲಿಂದ ಬಲೀಂದ್ರ ನೇರವಾಗಿ ಪಾತಾಳಕ್ಕೆ ಇಳಿಯುತ್ತಾನೆ ಎಂಬ ನಂಬಿಕೆ ಜನರಿಗಿದೆ. ಬಲೀಂದ್ರ ಹಬ್ಬದಲ್ಲಿ ಬಲೀಂದ್ರನನ್ನು ಕರೆಯುವಾಗ ಹೇಳುವ ಹೊಲಿಕೊಟ್ರೊ ಬಲಿಕೊಟ್ರೊ ಎಂಬ ಪದದಲ್ಲಿ ಹೊಲಿಯೆಂದರೆ ಭತ್ತ ಎಂದರ್ಥ. ಇದು ಬೆಳೆ ಸಮೃದ್ಧಿಯನ್ನು ಹಾರೈಸುತ್ತದೆ. ಬಲಿ ಎಂಬ ಪದ ಬಲಿಂದ್ರನಿಗೆ ಮೇಲ್ವರ್ಗದವರಿಂದ ಆದ ಅನ್ಯಾಯ ಮತ್ತು ಬಲಿಗೆ ನೀಡಿವ ಆಹಾರವನ್ನು ಸೂಚಿಸುತ್ತದೆ. ದೀಪಾವಳಿ ಹಬ್ಬದಂದು ಬಸರೂರಿನಲ್ಲಿ ಗದ್ದೆಪೂಜೆ, ಬಲೀಂದ್ರ ಪೂಜೆ, ತಿರಿಪೂಜೆ, ಮೇಟಿಪೂಜೆ, ಗೋಪೂಜೆ ಮಾಡುತ್ತಾರೆ.

ಬಸರೂರಿನ ಬಂಟ ಜನಸಮುದಾಯದ ದೀಪಾವಳಿ ಆಚರಣೆಯ ಕ್ರಮಗಳು ಬೇರೆ. ಬಂಟರು ಮೂಲತಃ ಕೃಷಿಕರಾಗಿರುವುದರಿಂದ ಈ ಹಬ್ಬವನ್ನು ಮೂರು ದಿನ ಆಚರಿಸುತ್ತಾರೆ. ಮೊದಲ ದಿವಸ ಬೂದ್‌ನೀರ್‌ಹಬ್ಬ(ನರಕ ಚತುರ್ದಶಿ) ಬೇಸಾಯದಿಂದ ದಣಿದ ಮೈಗೆ ಎಣ್ಣೆ ಸ್ನಾನ, ಮೆಂತ್ಯಯ ಕಡುಬು. ಆ ದಿನ ರಾತ್ರಿ ನೀರು ತುಂಬಿ ಬಲೀಂದ್ರನನ್ನು ಭೂಮಿಗೆ ಕರೆಯುವ ಕ್ರಮವಿದೆ. ಕೆಲವು ವರ್ಷ ತುಂಬಿ ಕರೆದರೆ ಇನ್ನು ಕೆಲವು ವರ್ಷ ಮಿಂದು ಕರೆಯುವ ಕ್ರಮವಿದೆ. ಇದು ಅಮವಾಸ್ಯೆಯನ್ನು ಹೊಂದಿಕೊಂಡಿದೆ. ಎರಡನೇಯ ದಿನ ಬಲೀಂದ್ರನನ್ನು ಭೂಮಿಗೆ ಕರೆದು ಬಲಿ ಸಿಹಿ ಕಡುಬು, ಅರಸಿನದ ಎಲೆಸಪ್ಪೆ ಕಡುಬು, ಅವಲಕ್ಕಿ ನೀಡಿ ಸಂತೃಪ್ತಿಗೊಳಿಸುತ್ತಾರೆ. ಬಸರೂರಿನಲ್ಲಿ ಬಲೀಂದ್ರ ಹಬ್ಬಕ್ಕೆ ಊರ ಮಡಿವಾಳ ಮಡಿಬಟ್ಟೆ ಕೊಟ್ಟು ಹೋಗುತ್ತಾನೆ. ಸಂಜೆಯ ತನಕ ಕೆಸ್ಕರ, ಕೋಳಿಹೂ, ಜಂಗಮ ಮುಂತಾದ ಹೂಗಳನ್ನು ಸಂಗ್ರಹಿಸಿ ಗದ್ದೆಯಲ್ಲಿ ನೆಡಲು, ದನಕರುಗಳಿಗೆ ತೋರಿಸಲು, ಮೇಟಿಕಂಬಕ್ಕೆ ಕಟ್ಟಲು ಸಿಲುಬೆಯಾಕಾರದಲ್ಲಿ ದೀಪದಕಂಬವನ್ನು ಕಟ್ಟಿ, ಅದಕ್ಕೆ ಈ ಎಲ್ಲಾ ಬಗೆಯ ಹೂ ಗೊಂಚಲನ್ನು ಕಟ್ಟಿ ಸಿದ್ಧಪಡಿಸುತ್ತಾರೆ. ಹಬ್ಬದ ಅಡಿಗೆ ಸಿದ್ಧವಾದ ಕೂಡಲೆ ಸಿಲುಬೆಯಾಕಾರದ ದೀಪದ ಕಂಬವನ್ನು ಕೊಟ್ಟಿಗೆಯಲ್ಲಿರುವ ದನ ಕರುಗಳಿಗೆ ತೋರಿಸಿ ಆಸಾಡಿ ಹಬ್ಬದ ಅಡ್ಡಿ(ಆಸಿ) ಕಾಣ್, ದೀವಾಳಿ ಹಬ್ಬದ ದೀಪೂ ಕಾಣ್, ಮುಂದಬಪ್ ಕೊಡಿಹಬ್ಬ[೩೧] ಕಾಣ್, ಎಂದು ಹಾರೈಸಿ, ದನ, ಕರುಗಳಿಗೆ ತಿನ್ನಲು ಕಡಬು ನೀಡುತ್ತಾರೆ. ಆನಂತರದಲ್ಲಿ ಮೇಟಿಕಂಬದ[೩೨] ಮುಂದೆ ದೀಪದ ಕಂಬವನ್ನು ನೆಟ್ಟು, ಕುಕ್ಕಿಯಲ್ಲಿ[೩೩] ತಂದಿಟ್ಟು ಕೊಂಡ ಕೆಸ್ಕರ ಹೂ, ವೀಳ್ಯದೆಲೆ, ಅಡಿಕೆ, ಜಂಗಮನ ಕೊಡಿ, ಕೋಳಿಹೂ, ಅವಲಕ್ಕಿ ಮುಂತಾದವುಗಳನ್ನು ಮೇಟಿ ಕಂಬದ ಮೇಲೆ ಹಾಕಿ ಹೊಲಿ ಕೊಟ್ರೊ, ಬಲಿ ಕೊಟ್ರೊ, ಬಲೀಂದ್ರ್ ದೇವ್ರೊ, ತನ್ನು ರಾಜ್ಯಕ್ಕ್ ತಾವು ಬಂದ್ರೊ, ಕೂ.. ಕೂ.. ಕೂ.. ಎಂದು ಹೇಳಿ ಪೂಜೆ ಸಲ್ಲಿಸುತ್ತಾರೆ. ಹಾಗೇಯೆ ಹುಲ್ಲುಕುತ್ತರಿ, ತಿರಿಗಳಿಗೆ ಪೂಜೆಸಲ್ಲುತ್ತದೆ. ಮೇಟಿಕಂಬದ ಪೂಜೆಯ ಬಳಿಕ ಮಡಿವಾಳ ಕೊಟ್ಟ ಮಡಿಬಟ್ಟೆಯಿಂದ ನೆಣೆಕೋಲು ಮಾಡಿ ಗದ್ದೆಗಳಲ್ಲಿ ನೆಣೆಕೋಲು ಇಟ್ಟು ಕಡಬು ಹಾಕಿ

ಭೂಮಿಯ ಒಡೆಯನಾದ ಬಲೀಂದ್ರನನ್ನು ಪ್ರಾರ್ಥಿಸುತ್ತಾರೆ.

ಹಬ್ಬದ ಮರುದಿನ ಬಲಿಪಾಡ್ಯದ ದಿನ ರಾತ್ರಿ ಮೇಟಿಕಂಬದಲ್ಲಿ ಕಟ್ಟಿದ. ಸಿಲುಬೆಯಾಕಾರದ ದೀಪದಕಂಬಕ್ಕೆ ಕುಚ್ಚಲು ಅಕ್ಕಿ ಅನ್ನಕ್ಕೆ ಮೊಸರು ಸೇರಿಸಿ ಸೋರೆ ಎಲೆಯಲ್ಲಿ ಗುತ್ತಿಕಟ್ಟಿ ಹುಲ್ಲಿನ ಎಳೆಯಿಂದ ದೀಪದಕಂಬಕ್ಕೆ ಕಟ್ಟುತ್ತಾರೆ. ಅನಂತರದಲ್ಲಿ ದೀಪದ ಕಂಬವನ್ನು ಗೊಬ್ಬರದ ಗುಂಡಿಯಲ್ಲಿ ಹುಗಿದು ಹೊಲಿಕೊಟ್ರೊ ಬಲಿಕೊಟ್ರೋ ಬಲೀಂದ್ರದೇವ್ರೂ, ತಮ್ಮ ರಾಜ್ಯಕ್ಕೆ ತಾವು ಹ್ವಾರೊ, ಹರ್ ಹರ ಎಂದು ಹಾಡುತ್ತಾರೆ.

ಬಸರೂರಿನ ಬಂಟರು ಆಚರಿಸುವ ದೀಪಾವಳಿಹಬ್ಬ ಸಂಪೂರ್ಣ ಕೃಷಿ ಕೇಂದ್ರಿತವಾಗಿದೆ. ಬಲೀಂದ್ರನನ್ನು ಭೂಮಿಗೆ ಕರೆದು ಗದ್ದೆಗಳಿಗೆ ದೀಪ ಹಚ್ಚಿ, ಕೊಟ್ಟಿಯಲ್ಲಿರುವ ದನ ಕರುಗಳಿಗೆ ದೀಪ ತೋರಿಸಿ, ಹುಲ್ಲು ಕುತ್ತರಿ, ಮೇಟಿಕಂಬ, ತಿರಿ, ಗೊಬ್ಬರ ಗುಂಡಿ ಮುಂತಾದವುಗಳನ್ನು ಪೂಜಿಸುವ ಕ್ರಮ ಕೃಷಿಸಂಬಂಧಿ ಆಚರಣೆಯಾಗಿದೆ. ಗದ್ದೆಗಳಿಗೆ ಹಾಕುವ ಕಡುಬನ್ನು ಹಿಂದೆ ಭೂಮಾಲಿಕರ ಮನೆಯಲ್ಲಿ ಕೆಲಸ ಮಾಡುವವರು ತೆಗೆದುಕೊಂಡು ಹೋಗುತ್ತಿದ್ದರಂತೆ. ಆದರೆ ಈಗ ಅಂತಹ ಕ್ರಮ ಬಸರೂರಿನಲ್ಲಿ ಇಲ್ಲ. ಭೂಮಿಯನ್ನು ಕಾಕತಾಳಿಯವಾಗಿ ಹೊಂದಿದ ಬಡವರು ಗದ್ದೆಗಳಿಗೆ ಕಡುಬಿನ ಬದಲು ಬೆಳ್ತಿಗೆ ಅಕ್ಕಿಯನ್ನು ಚೆಲ್ಲುತ್ತಾರೆ. ಈ ಮೂರುದಿನಗಳ ತನಕ ಭೂಮಿಗೆ ಸಂಬಂಧಿಸಿದ ಯಾವುದೇ ಕೃಷಿಚಟುವಟಿಕೆ ನಡೆಯುವುದಿಲ್ಲ.

### ೭.೧.೫ ಅಮ್ಮನವರ ದೇವಸ್ಥಾನದ ನವರಾತ್ರಿ /ಘಟಪೂಜೆ

ಬಸರೂರಿನ ಶ್ರೀದುರ್ಗಾ ದುರ್ಗಾಪರಮೇಶ್ವರಿ ದೇವಸ್ಥಾನ ಅಥವಾ ಶ್ರೀದೇವಿಅಮ್ಮನವರ ಗುಡಿಯಲ್ಲಿ ಜರಗುವ ನವರಾತ್ರಿ ಬಸರೂರಿಗೆ ಒಂದು ವಿಶಿಷ್ಟವಾದ ಆಚರಣೆಯಾಗಿದೆ. ಘಟಪೂಜೆ ಎಂದು ಕರೆಯುವ ಈ ಆಚರಣೆಗೆ ಧಾರ್ಮಿಕ ಮತ್ತು ಸಾಂಸ್ಕೃತಿಕ ಮಹತ್ವವಿದೆ. ಈ ಆಚರಣೆ ಬಸರೂರಿನ ಧಾರ್ಮಿಕ ಇತಿಹಾಸವನ್ನು ತಿಳಿಯಲು ಸಹಾಯಕವಾಗಿದೆ. ಬಸರೂರಿನ ಶ್ರೀದೇವಿಅಮ್ಮನವರ ದೇವಸ್ಥಾನದಲ್ಲಿ ಭೈರವನ ದೇವಸ್ಥಾನದಲ್ಲಿ, ಆಚರಿಸುವ ಘಟಪೂಜೆ ಆಶ್ವಿಜ ಶುದ್ಧ ಪಾಂಡ್ಯದಿಂದ ಪ್ರಾರಂಭವಾಗಿ ದಶಮಿಯವರೆಗೆ ಹತ್ತು ದಿನಗಳ ಕಾಲ ನಡೆಯುತ್ತದೆ. ಘಟಸ್ಥಾಪನೆಯ ಹಿಂದಿನ ದಿನ ಊರಿನವರಿಂದ ಸಂಗ್ರಹಿಸಿ ತಂದ ಭತ್ತ, ರಾಗಿ, ಕಡಲೆ, ಹೆಸರು, ಅಲಸಂಧಿ, ತೊಗರಿ, ಎಳ್ಳು, ಹುರುಳಿ, ಗೋಧಿ ಮುಂತಾದ ನವಧಾನ್ಯಗಳನ್ನು ಸಂಗ್ರಹಿಸಿ ನೀರಿನಲ್ಲಿ ನೆನಸಿಡುತ್ತಾರೆ. ಎರಡು ಮೂರು ಬುಟ್ಟಿ ಆಗುವಷ್ಟು ಗೊಬ್ಬರ ಮಿಶ್ರಿತ ಫಲವತ್ತಾದ ಮಣ್ಣನ್ನು ದೇವಸ್ಥಾನದ ಒಳಆಯದಲ್ಲಿ ಶಿಖರದೋಪಾದಿಯಲ್ಲಿ ರಾಶಿಹಾಕಿ ದೇವರ ಕೆರೆಯ ನೀರು ತುಂಬಿದ ಕುಂಭವನ್ನು ಮಣ್ಣು ರಾಶಿಯ ಮೇಲೆ ಸ್ಥಾಪಿಸುತ್ತಾರೆ. ಕುಂಭದ ಮೇಲೆ ಬಸರೂರಿನ ಪೇಟೆ ಮನೆಯವರು ನೀಡಿದ ಸಿಪ್ಪೆಸಹಿತ ತೆಂಗಿನಕಾಯಿಯನ್ನು ಇಟ್ಟು ಪಕ್ಕದಲ್ಲಿ ಹಣತೆ

ಹಚ್ಚಿಡುತ್ತಾರೆ. ನವಧಾನ್ಯಗಳನ್ನು ಗೊಬ್ಬರ ಮಿಶ್ರಿತ ಮಣ್ಣಿನ ರಾಶಿಗೆ ಬಿತ್ತಲಾಗುತ್ತದೆ. ಕಾಲಭೈರವನ ತ್ರಿಶೂಲವನ್ನು ಕುಂಭದ ಜೊತೆಗಿಡುತ್ತಾರೆ.

ಬಳೆಗಾರ ಅರ್ಚಕರು ಒಂಬತ್ತು ದಿವಸಗಳ ಕಾಲ ಬೆಳಿಗ್ಗೆ ಮತ್ತು ಸಂಜೆ ಎರಡೂ ಹೊತ್ತು ಘಟಕ್ಕೆ ಧೂಪ ಹಾಕಿ ಆರತಿ ಬೆಳಗಿಸಿ ಪೂಜೆ ಸಲ್ಲಿಸುತ್ತಾರೆ. ಪ್ರತಿದಿನ ಭೈರವನಿಗೆ ಮತ್ತು ಘಟೆಗೆ ಮಾಂಸಾಹಾರ. ರಾತ್ರಿ ಮೂರು ಎಡೆ ಹಾಕಿ ದೋಸೆ, ತೊವೆ, ಮೀನುಸಾರು, ಅನ್ನ ಬಳಸುತ್ತಾರೆ. ವೀರಭದ್ರನಿಗೆ ಮಾತ್ರ ಸಸ್ಯಾಹಾರ. ಹಿಂದೆ ಘಟೆಗೆ ಕಳ್ಳು ನೈವೇದ್ಯ ಮಾಡುತ್ತಿದ್ದರು. ವಿಜಯದಶಮಿಯ ದಿನ ನವಧ್ಯಾನಗಳನ್ನು ಬೇಯಿಸಿ ನೈವೇದ್ಯ ಮಾಡಿದ ನಂತರ ದಶಮಿಯ ದಿನ ಘಟೆ ಇಟ್ಟ ಮಣ್ಣಿನ ರಾಶಿಯ ಮೇಲೆ ಬೆಳೆದ ನವಧಾನ್ಯದ ಬೆಳೆಯನ್ನು ಬಳೆಗಾರ ಅರ್ಚಕರು ಕತ್ತರಿಸುತ್ತಾರೆ. ಅದನ್ನು ಪೂಜಿಸಿದ ಬಳಿಕ ಪೂಂಚ್‌ಕಟ್ಟಿ ಬೆತ್ತದ ಬುಟ್ಟಿಯಲಿಟ್ಟು ಅಪರಾತ್ರಿಯಲ್ಲಿ ಮೆರವಣಿಗೆ ಹೊರಡುತ್ತಾರೆ. ವಿಚಿತ್ರವಾದ ಡೋಲಿನ ಸದ್ದಿನೊಡನೆ ಬಸರೂರಿನ ಏಳು ಕೇರಿಗಳಲ್ಲಿ ಮೆರವಣಿಗೆ ಮುಗಿಸಿ ಗಡಿಗಳಲ್ಲಿ ಪ್ರಸಾದ ಹಾಕಿ ವಾರಾಹಿ ನದಿಯಲ್ಲಿ ಕುಂಭವನ್ನು ಮುಳುಗಿಸಿ ತೆಂಗಿನಕಾಯಿಯಿಂದ ಮಡಕೆಯನ್ನು ಒಡೆದು ಹಿಂತಿರುಗಿ ನೋಡದೆ ಏನೂ ಮಾತನಾಡದೇ ದೇವಸ್ಥಾನಕ್ಕೆ ಮರಳಿಬರುತ್ತಾರೆ. ಅನಂತರದಲ್ಲಿ ಪೌಂಚಗೆ ಪೂಜೆ ಸಲ್ಲಿಸುತ್ತಾರೆ. ಮರುದಿನ ಬೆಳಿಗ್ಗೆ ಪೌಂಚಿನಲ್ಲಿದ್ದ ನವಧಾನ್ಯದ ಬೆಳೆಯನ್ನು ಬಸರೂರಿನ ಏಳು ಕೇರಿಗಳಿಗೆ ಪ್ರಸಾದ ರೂಪದಲ್ಲಿ ಹಂಚುತ್ತಾರೆ. ಮನೆಗೆ ಪ್ರಸಾದ ವಿತರಣೆಗೆ ಬಂದ ಬಳೆಗಾರ ಅರ್ಚಕರಿಗೆ ಕಾಣಿಕೆಯನ್ನು ನೀಡಿ ಗೌರವಿಸುತ್ತಾರೆ. ಹೀಗೆ ನೀಡಿದ ಪ್ರಸಾಧವನ್ನು ಧಾನ್ಯ ಮತ್ತು ಅಕ್ಕಿ ಪತ್ತಾಸುಗಳಿಗೆ[೩೪] ಹಾಕುತ್ತಾರೆ. ಈ ದಿನ ಮಾತ್ರ ಅಮ್ಮನವರ ದೇವಸ್ಥಾನದಲ್ಲಿ ಪಾದುಕೆ ಪೂಜೆ ನಡೆಯುತ್ತದೆ.

ಬಸರೂರಿನ ಶ್ರೀದೇವಿದೇವಸ್ಥಾನದ ನವರಾತ್ರಿ ಅಥವಾ ಘಟೆ ಪೂಜೆ ಇವೆಲ್ಲವು ಕೃಷಿಸಂಸ್ಕೃತಿಗೆ ಸಂಬಂಧಿಸಿದ ಆಚರಣೆಗಳಾಗಿವೆ. ಗೊಬ್ಬರ, ಮಣ್ಣು, ಮಣ್ಣಿನಮಡಕೆ, ಕೃಷಿಸಂಸ್ಕೃತಿಯನ್ನು ಪ್ರತಿನಿಧಿಸುವುದರ ಜೊತೆಗೆ, ನಾಥ ಪಂಥದ ಸಂಕೇತಗಳಾಗಿ ನಿಲ್ಲುತ್ತದೆ. ಈ ಆಚರಣೆಯು ಫಲವಂತಿಕೆಯ ಸಂಕೇತಗಳಾಗಿವೆ.

ಘಟದಲ್ಲಿ ಯಾವ ಧಾನ್ಯ ಸಮೃದ್ಧವಾಗಿ ಬೆಳೆದಿದೆ ಎಂಬುದರ ಮೇಲೆ ಆ ವರ್ಷ ಮಳೆ ಬೆಳೆ ಭವಿಷ್ಯವು ನಿರ್ಧಾರವಾಗುತ್ತದೆ. ಆ ಘಟದ ರಾಶಿಯ ಮೇಲೆ ಯಾವ ಧಾನ್ಯ ಯಾವ ದಿಕ್ಕಿನಲ್ಲಿ ಸಮೃದ್ಧವಾಗಿ ಬೆಳೆದಿದೆ, ಆ ದಿಕ್ಕಿನಲ್ಲಿ ಆ ವರ್ಷ ಮಳೆ ಬೆಳೆ ಉತ್ತಮವಾಗಿ ಬರುವುದೆಂಬ ನಂಬಿಕೆ. ಒಂದು ಕಾಲಕ್ಕೆ ಕೃಷಿಕರು ತಮ್ಮ ಗ್ರಾಮದೇವತೆಯ ಆವರಣದಲ್ಲಿ ನಡೆಯುವ ಧಾರ್ಮಿಕ ಆಚರಣೆಯ ಮೂಲಕ ಆ ವರ್ಷದ ಹವಮಾನ ಮುನ್ಸೂಚನೆಯನ್ನು ಕಂಡುಕೊಳ್ಳುತ್ತಿದ್ದರು. ಹೀಗೆ ಧಾರ್ಮಿಕ ಆಚರಣೆಯ ಮೂಲಕ ಕಂಡುಕೊಳ್ಳುವ ವೈಜ್ಞಾನಿಕ ಮನೋಧರ್ಮ ಇದಾಗಿದೆ.

ಬಸರೂರಿನ ಬಳೆಗಾರರ ಘಟಪೂಜೆಯಲ್ಲಿ ಮಾತೃದೇವತಾರಾಧನೆಯೊಂದಿಗೆ ಪುರುಷ ಆರಾಧನ ಪದ್ಧತಿಯೂ ಸೇರ್ಪಡೆಗೊಂಡಿದೆ. ಘಟ ಸ್ಥಾಪಿಸುವಲ್ಲಿ ಬಳಸುವ ಫಲವತ್ತಾದ ಮಣ್ಣು, ಮಣ್ಣಿನ ರಾಶಿಯ ಮೇಲೆ ಕುಂಭವನ್ನಿಡುವುದು ಮಾತೃದೇವತೆಯ ಸಾಂಕೇತಿಕ ರೂಪಗಳಾಗಿವೆ. ಕುಂಭದ ಮೇಲೆ ಪೂರ್ಣಫಲವಿಡುವುದು, ಗೊಬ್ಬರ ಮಿಶ್ರಿತ ಮಣ್ಣಿನ ರಾಶಿಗೆ ಭೈರವನ ತ್ರಿಶೂಲವಿಡುವುದು ಪುರುಷ ದೈವತಾರಾಧನೆಯ ಸಂಕೇತವಾಗಿದೆ. ಘಟದ ವಿಸರ್ಜನೆಯ ಮೆರವಣಿಗೆಯಲ್ಲಿ ಘಟವನ್ನು ಹೊತ್ತುಕೊಳ್ಳುವವನು ಮತ್ತು ಮದ್ದಳೆ ಬಾರಿಸುವವನನ್ನು ಹೊರತುಪಡಿಸಿದರೆ ಬೇರಾರು ಜೊತೆಗಿರುವುದಿಲ್ಲ. ಇದು ಊರಿಗೆ ಮತ್ತು ಬೆಳೆಗೆ ಬಂದ ಮಾರಿ ಕಳೆಯುವ ಆಚರಣೆಯೆಂಬುದು ಅಧ್ಯಯನದಿಂದ ತಿಳಿಯುತ್ತದೆ(ಚಿತ್ರ ೧೪).

ಘಟಸ್ಥಾಪನೆಯೂ ಫಲವಂತಿಕೆ ಮತ್ತು ಸಮೃದ್ಧಿಯ ಸಂಕೇತವಾಗಿ ನಡೆಯುತ್ತ ಬಂದಿದೆ. ಕುಂಭ ಸ್ತ್ರೀಸಂಕೇತವಾದರೆ ಅದರ ಮೇಲಿಡುವ ಪೂರ್ಣಫಲ ಪುರುಷನನ್ನು ಸಂಕೇತಿಸುತ್ತದೆ. ಶಿವ ಮತ್ತು ಶಕ್ತಿಗಳ ಸಂಗಮ ನಾಥಪಂಥದ ಆರಾಧನೆ. ಶಿವ ಮತ್ತು ಶಕ್ತಿಯನ್ನು ಬೇರ್ಪಡಿಸಲಾಗದು ಎಂಬ ಸಂದೇಶವು ಈ ಆಚರಣೆಯಲ್ಲಿದೆ. ಇದೇ ಬಗೆಯ ಆಚರಣೆ ನಾಥಪಂಥದ ಕೇಂದ್ರವಾದ ಚಂದ್ರಗುತ್ತಿಯಲ್ಲಿ ರೇಣುಕಾಂಬೆಯ ನವರಾತ್ರಿಯಲ್ಲಿ ಕಂಡುಬರುತ್ತದೆ(ಓಂಕಾರನಾಯ್ಕ ಎಚ್;೨೦೦೭ಪುಟ:೧೨೯). ಬಸರೂರು ಕೂಡ ನಾಥಪಂಥದ ಪ್ರಮುಖ ಕೇಂದ್ರವಾಗಿತ್ತು ಎನ್ನುವುದನ್ನು ಈ ಆಚರಣೆ ಸ್ಪಷ್ಟಪಡಿಸುತ್ತದೆ. ಬಳೆಗಾರ ಜೋಗಿಗಳು ಆಚರಿಸುವ ನವರಾತ್ರಿ, ದರ್ಶನಪಡಿ ಮುಂತಾದವು ಕೃಷಿ ಸಂಸ್ಕೃತಿಯೊಂದಿಗೆ ನಾಥ ಆಚರಣೆಯನ್ನು ಜೀವಂತವಾಗಿ ಇಟ್ಟುಕೊಂಡು ಬಂದಿದೆ.

### (ಅ) ನಾವುಡರವೊಳಲಿನ ಚಪ್ಪೆಕಾರರ ನವರಾತ್ರಿ

ಬಸರೂರಿನ ನಾವುಡರವೊಳಲಿನ ಚಪ್ಪೆಕಾರರ ನವರಾತ್ರಿ ವಿಶಿಷ್ಟತೆಯಿಂದ ಕೂಡಿದೆ. ಮಹಾಲಯ ಅಮವಾಸ್ಯೆಯ ಮರುದಿನ ಒಂದು ಸೇರು, ಒಂದು ಪಾವು ಬೆಳ್ತಿಗೆ ಅಕ್ಕಿಯನ್ನು ಜೋಡಿ ಕೊಡಿ ಬಾಳೆಎಲೆಯ ಮೇಲೆ ಹಾಕಿ ತ್ರಾಮದ ಕೊಡಪಾನದಲ್ಲಿ ಪವಿತ್ರಕೆರೆಯ ನೀರು ತುಂಬಿ ಅಕ್ಕಿಯ ಮೇಲಿಟ್ಟು, ಊರಲ್ಲಿ ಸುತ್ತಾಡಿ ವಿವಿಧ ಬಗೆಯ ಹೂಗಳನ್ನು ಸಂಗ್ರಹಿಸಿ, ತಾಮ್ರದ ಕೊಡಪಾನಕ್ಕೆ ಹೂ ಸುತ್ತಿ ತೇರಿನ ರೀತಿ ಶೃಂಗಾರ ಮಾಡಿ ಕಳಸ ಸ್ಥಾಪನೆಮಾಡುತ್ತಾರೆ. ಮೊದಲದಿನ ಒಂದೇ ಭಕ್ಷ್ಯ ಮಾಡಬೇಕು. ಪ್ರತಿದಿನ ಮಧಾಹ್ನ ಹಾಲು ಬೆಲ್ಲ ದೇವರಿಗೆ ನೈವೇದ್ಯಕ್ಕೆ ಇಡಲಾಗುತ್ತದೆ. ಒಂಬತ್ತನೆಯ ದಿನ ಮಹಾನವಮಿ, ಆ ದಿನ ಮಧಾಹ್ನ ಒಂಬತ್ತು ಜನ ಚಪ್ಪೆಕಾರ ಜಾತಿಯ ಬ್ರಹ್ಮಚಾರಿಗಳನ್ನು ಕರೆಯಿಸಿ ಪೂಜಿಸಲಾಗುತ್ತದೆ. ಒಂಬತ್ತನೇಯ ದಿನ ಒಂಬತ್ತು ಬಗೆಯ ಎಣ್ಣೆ ತಿಂಡಿ, ಸಿಹಿ ಕಡುಬು, ಸುಕ್ಕಿನುಂಡೆ, ಎಣ್ಣೆಉರುಗೆ, ಉಂಡಲಕಾಯಿಯನ್ನು ಒಂಬತ್ತು ಆಕಾರದಲ್ಲಿ

ಮಾಡಿ ಬಡಿಸಬೇಕು. ಅದಕ್ಕೆ ಒಂದೇ ಬಗೆಯ ಹಿಟ್ಟನ್ನು ಬಳಸಬೇಕು. ಮಧ್ಯಾಹ್ನ ದೇವರಿಗೆ ನೈವೇದ್ಯಕ್ಕೆ ಬಡಿಸಿದ ಒಂಬತ್ತು ಎಡೆಯನ್ನು ರಕ್ತಸಂಬಂಧಿಗಳಲ್ಲದ ಒಂಬತ್ತು ಜನ ಬ್ರಹ್ಮಚಾರಿಗಳನ್ನು ಮನೆಗೆ ಕರೆದು ಚಾಪೆಹಾಕಿ ಕುಳ್ಳಿರಿಸಿ ಊಟಬಡಿಸಿಬೇಕು. ಪ್ರತಿಯೊಬ್ಬರಿಗೆ ಅಕ್ಷತೆ ಮತ್ತು ಧೂಪ ಹಾಕಬೇಕು, ದಕ್ಷಿಣೆ ನೀಡಬೇಕು. ಕೈಹಿಡಿದು ಎಲೆಯಿಂದ ಮೇಲಕ್ಕೇಳಿಸಿ ಕೈತೊಳೆಸಬೇಕು. ಮಧ್ಯಾಹ್ನ ಕಸಗ್ವಾಮಯ[೩೨] ಮಾಡಿ ರಾತ್ರಿಯ ಅಡುಗೆಯನ್ನು ಗಂಡಸರೇ ಮಾಡಬೇಕು. ರಾತ್ರಿ ಅಮ್ನೋರ ದರ್ಶನ ನಡೆಯುತ್ತದೆ. ಅನಂತರದಲ್ಲಿ ನವರಾತ್ರಿ ಕಳಸದ ಎದುರು ಬೆತ್ತದ ಹೆಡಿಗೆಯಲ್ಲಿ ಉದ್ದಿನದೋಸೆ, ಕುಂಬಳಕಾಯಿಪಳದಿ ಹಾಕಿ ನೈವೇದ್ಯ ಇಡಲಾಗುತ್ತದೆ. ಹತ್ತನೆಯದಿನ ದಶಮಿ. ಆ ದಿನ ಕಳಸಕ್ಕೆ ಪುನಃ ಹೊಸ ಹೂ, ಹೊಸನೀರು ತುಂಬಿಸಿ ಇಡಬೇಕು. ಒಂಬತ್ತನೆಯ ದಿನ ಮಾತ್ರ ರಾತ್ರಿ ಪೂಜೆ. ಹತ್ತನೆಯ ದಿನ ಮಧ್ಯಾಹ್ನ ಅಕ್ಕಿಹಾಲು ಪರಮಾನ್ನ ನೈವೇದ್ಯ ಮತ್ತು ಅನ್ನ, ಸಾರು, ಹುರುಳಿ ನುಗ್ಗೆಸೊಪ್ಪು, ಚರು ನೈವೇದ್ಯ. ಶ್ರೀಮಹಾಲಿಂಗೇಶ್ವರ ತೊಪ್ಪಲುಕಟ್ಟೆಗೆ ಬಂದು ಹಿಂತಿರುಗಿ ಹೋದ ಬಳಿಕ ದೇವರ ವಿಸರ್ಜನೆ ಮಾಡಲಾಗುತ್ತದೆ. ನವರಾತ್ರಿಯಲ್ಲಿ ಚಪ್ಪೆಕಾರ್‌ಬಂಡಾರಿ ನಾಯ್ಕರ ಕುಟುಂಬದವರೆಲ್ಲ ಪಾಲ್ಗೊಳ್ಳುತ್ತಾರೆ ಮತ್ತು ನವರಾತ್ರಿಯಲ್ಲಿ ಸಂಗ್ರಹಿಸಿದ ಕಾಣಿಕೆಯನ್ನು ಕಾಳವಾರ[೩೩] ಷಷ್ಠಿಯ ದಿನ ಬ್ರಾಹ್ಮಣರಿಗೆ ಅನ್ನದಾನ ಮಾಡುತ್ತಾರೆ. ಚಪ್ಪೆಕಾರರು ಪಿತೃಪ್ರಧಾನ ಕುಟುಂಬ ವ್ಯವಸ್ಥೆಗೆ ಸೇರಿದವರು. ನವರಾತ್ರಿಯ ದಿನ ಅವರು ಮನೆಗೆ ಕರೆದು ಆರಾಧಿಸುವ ಬ್ರಹ್ಮಚಾರಿಗಳು ಅವರ ದೃಷ್ಟಿಯಲ್ಲಿ ಪಿತೃಗಳಾಗಿರುತ್ತಾರೆ. ಬಸರೂರಿನ ನಾವುಡರವೊಳಲಿನ ಚಪ್ಪೆಕಾರ್‌ಬಂಡಾರಿ ನಾಯ್ಕ್‌ರು ಆಚರಿಸುವ ನವರಾತ್ರಿ ಅಧ್ಯಯನದ ದೃಷ್ಟಿಯಿಂದ ಮಹತ್ವಪೂರ್ಣವಾಗಿದೆ. ನವರಾತ್ರಿಯ ಒಂಬತ್ತನೆಯ ದಿನ ಮಹಾನವಮಿಯಂದು ನಡೆಯುವ ಅಮ್ನೋರ ದರ್ಶನ ಮತ್ತು ಹೆಡಿಗೆಯಲ್ಲಿ ದೋಸೆ ಮತ್ತು ಕುಂಬಳಕಾಯಿ ಪಳದಿ(ಪಲ್ಯ) ಇಟ್ಟು ಮೀಸಲಿಡುವುದು ಒಂದು ಬಗೆಯಲ್ಲಿ ಮಾರಿ ಆಚರಣೆ ಆಗಿದೆ. ಇಲ್ಲಿ ಬಳಸುವ ಹೊಸಅಕ್ಕಿ ಕೃಷಿಆಚರಣೆಯ ಸಂಕೇತವಾಗಿದೆ. ಹಿಂದೆಲ್ಲಾ ಅಮ್ನೋರಿಗೆ ಈ ದಿನ ಪ್ರಾಣಿ ಬಲಿಯನ್ನು ನೀಡುತ್ತಿದ್ದಿರಬೇಕು. ಕಾಲಕ್ರಮೇಣ ಮಾಂಸಹಾರದ ಬದಲಿಗೆ ಗುಂಬಳಕಾಯಿ ಬಂದಿರಬಹುದಾದ ಸಾಧ್ಯತೆಗಳು ನಿಚ್ಚಳವಾಗಿದೆ. ಚಪ್ಪೆಕಾರಬಂಡಾರಿ ನಾಯ್ಕರ ಮನೆಯೊಳಗೆ ಅಮ್ನೋರು, ಪಂಜುರ್ಲಿ, ಕಲ್ಲುಕುಟಿಕ ದೈವಗಳನ್ನು ತೆಂಗಿನಕಾಯಿಯಲ್ಲಿ ಆಹ್ವಾನಿಸಿ ಇಡಲಾಗಿದೆ. ಆರು ತಿಂಗಳಿಗೊಮ್ಮೆ ತೆಂಗಿನಕಾಯಿಯನ್ನು ಬದಲಿಸಿ ಇಡುತ್ತಾರೆ.

### ೭.೧.೬.ಕಂಬಳ

ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ಬಸರೂರು ಮಾಗಣೆಯ ಮೂಡ್ಲಕಟ್ಟೆ ಕಂಬಳ ಸಾಂಸ್ಕೃತಿಕಕ್ರೀಡೆ ಎನ್ನುವುದಕ್ಕಿಂತಲೂ ಹೆಚ್ಚಾಗಿ ಕೃಷಿಸಂಬಂಧಿ ಧಾರ್ಮಿಕ

ಆಚರಣೆಯಾಗಿದೆ. ಬಸರೂರು ಮಾಗಣೆಯ ಮೂಡ್ಲಕಟ್ಟೆ ಕಂಬಳವು ಈ ಮಾಗಣೆಯಲ್ಲಿ ನಡೆಯುವ ಒಂದೇ ಒಂದು ಕಂಬಳವಾಗಿದೆ. ಕೊಡಿಹಬ್ಬಕ್ಕೆ[೩೭] ಮೊದಲೇ ಈ ಕಂಬಳ ಜರಗುತ್ತದೆ. ಮೂಡ್ಲಕಟ್ಟೆ ದೊಡ್ಮನೆಯವರು ಕಂಬಳಕ್ಕೆ ದಿನವಿಡುತ್ತಾರೆ. ಸುತ್ತಮುತ್ತಲಿನ ಗ್ರಾಮದ ಕೋಣಗಳ ಯಜಮಾನರಿಗೆ ಹೇಳಿಕೆ ನೀಡಲಾಗುತ್ತದೆ. ಕಂಬಳದ ಹಿಂದಿನ ದಿನ ಕಂಬಳಗದ್ದೆಯ ಅಂಚಿಗೆ ಸೇಡಿ ಮತ್ತು ಜಾಜಿಯಿಂದ ಎರಡು ಬಿಳಿಯ ಪಟ್ಟಿಗಳ ನಡುವೆ ಕೆಂಪು ಪಟ್ಟಿ ಬರೆದು ಇತರ ಗದ್ದೆಗಳಿಂದ ಪ್ರತ್ಯೇಕವಾಗಿ ಕಾಣುವಂತೆ ಕೊರಗರು ಸಿಂಗರಿಸುತ್ತಾರೆ. ಸಂಜೆಗೆ ಮೂಡ್ಲಕಟ್ಟೆ ಕೊರಗರು ತಮ್ಮ ಒಡೆಯರ ಮನೆಯ ಕಂಬಳ ಗದ್ದೆಯನ್ನು ಕಾಯಲು ಗುಂಪು ಗುಂಪಾಗಿ ಬರುತ್ತಾರೆ. ಅವರಿಗೆ ಇದು ದೇವರ ಕೆಲಸ. ಸಂಜೆಯಾಗುತ್ತಿದ್ದಂತೆ ಕೊರಗ ಜನಸಮುದಾಯದ ಗಂಡಸರು, ಹೆಂಗಸರು, ಮಕ್ಕಳು ಮತ್ತು ಹೊರಗಿನ ನೆಂಟರು ಕೊಪ್ಪದಲ್ಲಿ[೩೮] ಸೇರುತ್ತಾರೆ. ಕತ್ತಲಾಗುತ್ತಿದ್ದಂತೆ ಕೊರಗರು ಡೋಲು ಹೊಡೆಯುತ್ತ ಕುಣಿತ ಆರಂಭಿಸುತ್ತಾರೆ. ನಾಳೆ ನಡೆಯುವ ಕಂಬಳದ ಮುನ್ಸೂಚನೆಯನ್ನು ಊರಿನವರಿಗೆ ಡೋಲಿನ ತಾಟಿನ ಮೂಲಕ ತಿಳಿಸುತ್ತಾರೆ. ಕೊಪ್ಪದಿಂದ ಆರಂಭವಾದ ಕುಣಿತ ಕತ್ತಲಾಗುತ್ತಿದ್ದಂತೆ ಕಂಬಳಗದ್ದೆಯ ಅಂಚಿನ ಮೂಲಕ ದೊಡ್ಮನೆಯ ಅಂಗಳಕ್ಕೆ ಬರುತ್ತದೆ. ಕೊರಗರ ಗುರಿಕಾರ ಒಂದು ಕೈಯಲ್ಲಿ ಕೋಲು ಮತ್ತೊಂದು ಕೈಯಲ್ಲಿ ಮಂಡೆಹಾಳಿ ಹಿಡಿದು ಕುಣಿಯುತ್ತ ಬರುತ್ತಾನೆ. ಅವನನ್ನು ಗುಂಪು ಅನುಸರಿಸುತ್ತದೆ. ಕಂಬಳದ ಯಜಮಾನರು ಹೆಬ್ಬಾಗಿಲಿನಲ್ಲಿ ಎದುರುಗೊಳ್ಳುತ್ತಾರೆ. ದೊಡ್ಮನೆಯ ಹೆಬ್ಬಾಗಿಲಿನಲ್ಲಿರುವ ಬಬ್ಬರ್ಯನ ಮುಂದೆ ಮಂಡೆಹಾಳೆ ಇಟ್ಟು ಕಂಬಳದ ಯಶಸ್ಸನ್ನು ಬೇಡುತ್ತಾರೆ. ಅನಂತರದಲ್ಲಿ ಹೊರಹೆಬ್ಬಾಗಿಲಿನಿಂದ ಒಳ ಹೆಬ್ಬಾಲಿಗೆ ಪ್ರವೇಶಿಸಿ ಮನೆಯ ಒಡತಿಯನ್ನು ಕರೆಯುತ್ತಾರೆ. ಅಲ್ಲೆ ಇರುವ ತುಳಸಿಕಟ್ಟೆಯ ಮುಂದೆ ಮಂಡೆಹಾಳಿ ಇಟ್ಟು ಡೋಲಿನ ತಟ್ಟಿಗನುಗುಣವಾಗಿ ಮಂದಗತಿಯಲ್ಲಿ, ಮಧ್ಯಮ ಗತಿಯಲ್ಲಿ ಮತ್ತು ತೀವ್ರಗತಿಯಲ್ಲಿ ಕುಣಿಯುತ್ತಾರೆ. ನಾಳಿನ ಕಂಬಳದ ವೈಭವವನ್ನು ವಿವರಿಸುತ್ತಾರೆ. ಯಾರ್‍ಯಾರು ಕಂಬಳಕ್ಕೆ ಎಷ್ಟೆಷ್ಟು ಕೊಡುತ್ತಾರೆ ಎಂದು ಗುರಿಕಾರ ಹೇಳಿದ ಕೂಡಲೇ ಉಳಿದವರು ಧ್ವನಿ ಸೇರಿಸುತ್ತಾರೆ. ಈ ಕುಣಿತದಲ್ಲಿ ಕೊರಗರ ಇಡೀ ಕುಟುಂಬ ಪಾಲ್ಗೊಳ್ಳುತ್ತದೆ. ಕುಣಿತ ಮುಗಿಸುವಂತೆ ಮನೆಯ ಯಜಮಾನರು ಆಜ್ಞೆಮಾಡುತ್ತಾರೆ. ಮನೆಒಡತಿ ತುಂಬಿದ ಅನ್ನದ ಮಡಕೆಯನ್ನು ತಂದು ಅವರ ಮುಂದಿಟ್ಟು ಅದರಿಂದ ಅನ್ನವನ್ನು ತೆಗೆದು ಕೊರಗರ ಹೆಡಿಗೆಗೆ ಬಡಿಸುತ್ತಾರೆ. ಅನಂತರದಲ್ಲಿ ತಲೆಗೆ ಎಣ್ಣೆ, ಬಟ್ಟೆ, ಎಲೆಅಡಿಕೆ, ಕಾಣಿಕೆ ನೀಡಿ ಕಂಬಳವನ್ನು ಸಸೂತ್ರವಾಗಿ ನಡೆಸುವಂತೆ ಕೇಳಿಕೊಳ್ಳುತ್ತಾರೆ. ತುಂಬಿದ ಅನ್ನದ ಹೆಡಿಗೆಯನ್ನು ಹೊತ್ತು ಕೊರಗರು ಕಂಬಳದ ಗದ್ದೆಯ ಕಡಗೆ ಕುಣಿಯುತ್ತ ಬರುತ್ತಾರೆ. ಕಂಬಳಗದ್ದೆಯ ಅಂಚಿನಲ್ಲಿ ರಾಹು ಮತ್ತು ಕೀಳಿಗೆ ಹಲಸಿನ ಎಲೆಯಲ್ಲಿ ನೈವೇದ್ಯಕ್ಕೆ ಇಡುತ್ತಾರೆ ಇದನ್ನು ಭೂತಕ್ಕೆ ಹಾಕಬೆಚ್ಚುದು ಎಂದು ಹೆಸರು. ಅನಂತರದಲ್ಲಿ

ಕಂಬಳಗದ್ದೆಯ ಸುತ್ತ ಒಂದು ಸುತ್ತು ಡೋಲು ಹೊಡೆದು ಬರುತ್ತಾರೆ ಸಮೂಹ ಭೋಜನ ಮಾಡಿದ ಕೊರಗರು ಬೆಂಕಿ ಕಾಯಿಸುತ್ತ ಹನಿಕಾಯುತ್ತಾರೆ.

ರಾತ್ರಿಯಿಡಿ ಎಚ್ಚರವಾಗಿದ್ದ ಕೊರಗರು ಮರುದಿನ ಬೆಳಿಗ್ಗಿನ ಜಾವಕ್ಕೆ ಕಂಬಳ ಗದ್ದೆಯಲ್ಲಿ ಅಣುಕು ಕಂಬಳ ಮಾಡಿ ಕೆಸರಿನಲ್ಲಿ ಕೋಣದಂತೆ ಹೊರಳಾಡುತ್ತಾರೆ. ಬೆಳಿಗ್ಗೆ ಪುನಃ ಕಂಬಳ ಗದ್ದೆಯ ಅಂಚಿನಲ್ಲಿ ಡೋಲು ಬಡಿಯುತ್ತ ಹನಿಕಾಯುವುದನ್ನು ಮುಗಿಸುತ್ತಾರೆ. ಹನಿಕಾಯುವುದನ್ನು ಮುಗಿಸಿದ ಕೊರಗರು ಕಂಬಳ ಕಾಯುವ ಚುಣ್ಣನನ್ನು ಸಿದ್ಧಮಾಡುತ್ತಾರೆ. ಕಂಬಳಗದ್ದೆಯ ಕೆಸರನ್ನು ಮೈಗೆಲ್ಲ ಉಜ್ಜಿ, ಮೈಗೆ ಕಪ್ಪುಚುಕ್ಕೆ ಇಟ್ಟು, ತಲೆಗೆ ಮಂಡಾಳಿ ಅದರ ಮೇಲೆ ಕಿಸ್ಕರ ಹೂ, ಸೊಂಟಕ್ಕೆ ಸಣ್ಣ ತುಂಡು ಅದರ ಮೇಲೆ ನುಕ್ಕಿ ಹಾಗೂ ಮಾವಿನಸೊಪ್ಪು ಸುತ್ತಿ ಚುಣ್ಣನನ್ನು ಅಲಂಕಾರ ಮಾಡಿ ಡೊಡ್ಮನೆಯ ಹೆಬ್ಬಾಗಿಲಿನ ಎದುರಗಡೆಗೆ ಡೋಲು ಬಡಿಯುತ್ತ ಕರೆತರುತ್ತಾರೆ. ಮನೆಯ ಒಡತಿ ಚುಣ್ಣನನ್ನು ಎದುರುಗೊಂಡು ಕಾಲಿಗೆ ಕಪ್ಪು ಹಾನ್[೩೯] ಚೆಲ್ಲುತ್ತಾಳೆ. ಚುಣ್ಣ ಮೇಲಕ್ಕೆ ನೆಗೆದು ತಪ್ಪಿಸಿಕೊಳ್ಳುತ್ತಾನೆ. ಅನಂತರ ಚುಣ್ಣ ಡೋಲಿನ ತಾಳಕ್ಕೆ ಕುಣಿಯುತ್ತ ಊರ ಹೇಳಿಕೆಗೆ ಹೊರಡುತ್ತಾನೆ. ಮಧ್ಯಾಹ್ನ ಕಂಬಳ ಆರಂಭಕ್ಕೆ ಮುನ್ನ ಮನೆಹೋರಿಯನ್ನು ಬೆನ್ನುಗವಚ, ಕೋಡುಮಿಟ್ಟೆ, ತಲೆಪದಕ ಹಾಕಿ ಸಿಂಗರಿಸಿ ಹೆಬ್ಬಾಗಿಲ ಮುಂದೆ ತರುತ್ತಾರೆ. ಚುಣ್ಣ ಮನೆಹೋರಿಯನ್ನು ಎದುರುಗೊಳ್ಳುತ್ತಾನೆ. ಹೆಬ್ಬಾಗಿಲಿಗೆ ಬಂದ ಕೋಣಗಳಿಂದ ದೈವ ದೇವರುಗಳಿಗೆ ಮಂಡರಿ[೪೦] ಹಾಕಿಸುತ್ತಾರೆ. ವಾದ್ಯ ಸಂಮ್ಮೇಳ ಸಮೇತ ಮನೆಹೋರಿ ಕಂಬಳಗದ್ದೆಯನ್ನು ಇಳಿಯುತ್ತದೆ. ಚುಣ್ಣ ಕೋಣವನ್ನು ಅನುಸರಿಸುತ್ತಾನೆ.

ಮನೆಹೋರಿಗೆ ಗೋರಿ ಹಾಕಿದ ಮೇಲೆ ಕಂಬಳ ಆರಂಭವಾದಂತೆ. ಬೇರೆಬೇರೆ ಪ್ರದೇಶದಿಂದ ಬಂದ ಕೋಣಗಳು ಡೊಡ್ಮನೆಯ ಹೆಬ್ಬಾಗಿಲಿನ ಎದುರು ಬಂದು ಕಂಬಳದ ಯಜಮಾನರಿಗೆ ಮಂಡ್ರಿ ಹಾಕಿ ಗೌರವ ಸೂಚಿಸುತ್ತದೆ. ಕೋಣದ ಯಜಮಾನರಿಗೆ ಕಬ್ಬು ಸೀಯಾಳ ನೀಡಿ ಗೌರವಿಸುತ್ತಾರೆ. ಚುಣ್ಣ ಪ್ರತಿಯೊಂದು ಕೋಣವನ್ನು ಎದುರುಗೊಳ್ಳುತ್ತಾನೆ. ಹೊರಗಿನಿಂದ ಬಂದ ಕೋಣಗಳೆಲ್ಲಾ ಓಡಿಯಾದ ಮೇಲೆ ಪುನಃ ಮನೆ ಹೋರಿಗೆ ಗೋರಿ ಹಾಕಲಾಗುತ್ತದೆ. ಅಲ್ಲಿಗೆ ಆ ವರ್ಷದ ಕಂಬಳವು ಮುಗಿದಂತೆ. ಕಂಬಳ ಮುಗಿದ ಮೇಲೆ ಗದ್ದೆಯ ಕಡುಕಟ್ಟುವ[೪೧] ಶಾಸ್ತ್ರವಿದೆ. ಕಂಬಳ ಮುಗಿದ ತರುವಾಯ ಚುಣ್ಣ ಡೊಡ್ಮನೆ ಹೆಬ್ಬಾಗಿಲ ಮುಂದೆ ಕುಣಿದು ಯಜಮಾನರಿಂದ ಚುಣ್ಣ ಬಿಡಿಸಲು ಅನುಮತಿ ಕೇಳುತ್ತಾನೆ.

ಬಸರೂರಿನ ದೃಷ್ಟಿಯಲ್ಲಿ ಕಂಬಳವೊಂದು ಕೃಷಿಸಂಬಂಧಿ ಆಚರಣೆಯಾಗಿದೆ. ಇಲ್ಲಿ ಮೂರು ನಾಲ್ಕು ದಿನಗಳಿಂದ ಕಂಬಳದಲ್ಲಿ ಸೇವೆ ಮಾಡುವ ದೇವಾಡಿಗರು, ಬಿಲ್ಲವರು, ಕೊರಗರು ನೇಮ ನಿಷ್ಠೆಯಿಂದ ಇರುತ್ತಾರೆ. ಕೊರಗರು ಇದನ್ನು ತಮ್ಮ

ಭೂತಗಳನ್ನು ಸಂತೃಪ್ತಿ ಪಡಿಸುವ ಉತ್ಸವವೆಂದು ಭಾವಿಸುತ್ತಾರೆ. ಚುಣ್ಣನನ್ನು ಕಟ್ಟುವವನು ಮದ್ಯ ಮಾಂಸಗಳಿಂದ ದೂರವಿರಬೇಕು ಎಂಬ ಕಟ್ಟಪ್ಪಣೆ ಮಾಡಿಕೊಂಡಿದ್ದಾರೆ.

### ೭.೧.೭ ಆರೂಡ್ ಹಬ್ಬ

ಬಸರೂರಿನ ಕೃಷಿಸಂಬಂಧಿ ಆಚರಣೆಗಳಲ್ಲಿ ಆರೂಡ್ ಹಬ್ಬವು ಮಹತ್ವಪೂರ್ಣವಾಗಿದೆ. ಕೃಷಿಸಂಸ್ಕೃತಿಯಲ್ಲಿ ಹೊಸ ವಾರ್ಷಿಕಸಂವತ್ಸರ ಯುಗಾದಿ ಹಬ್ಬದಿಂದ ಆರಂಭವಾಗುವುದು. ಈ ಹಬ್ಬದ ದಿನ ಕಾತಿ ಬೆಳೆಯ ಕೃಷಿ ಚಟುವಟಿಕೆ ಆರಂಭವಾಗುತ್ತದೆ. "ಆರೂಡ ಹಬ್ಬ. ಆರ್+ಹೂಡು, ಆರ್ ಎಂದರೆ ವ್ಯವಸಾಂಯು ಅಥವಾ ಒಕ್ಕಲುತನ"(ಪಾ.ನಮಯ್ಯ;೧೯೯೫;ಪುಟ;೧೫೭). ಹೂಡು[೪೨] ಎಂದರೆ ನೇಗಿಲು ಹೊಡೆ, ಎತ್ತು ಅಥವಾ ಕೋಣಗಳನ್ನು ನೊಗಕ್ಕೆ ಕಟ್ಟುವುದು ಎಂದರ್ಥ. ಕುಂದಾಪುರ ಕನ್ನಡದಲ್ಲಿ ಹೂಡ್‌ಕಟ್ಟುವುದು ಎಂಬ ಪದ ಪ್ರಯೋಗವಿದೆ. ಒಮ್ಮೆ ಆರೂಡಿದ ಮೇಲೆ ಗದ್ದೆಯ ಒಡೆತನದ ಬಗ್ಗೆ ಅದೆಷ್ಟೆ ವಿವಾದಗಳಿದ್ದರೂ ಆ ವರ್ಷದ ಒಡೆತನ ಆರೂಡಿದವನಿಗೆ ಹೋಗುತ್ತದೆ. ಚಾಲ್‌ಗೇಣಿ[೪೩] ಪದ್ಧತಿಯಲ್ಲಿ ಭೂಮಿಯನ್ನು ಉಳುವಾತನಾರೆಂದು ನಿರ್ಧರಿಸುವ ಆಚರಣೆ ಇದಾಗಿದೆ. ಯುಗಾದಿಯ ದಿನ ಬಸರೂರಿನ ರೈತರು ಗದ್ದೆಗಳಲ್ಲಿ ಆರೂಡುತ್ತಾರೆ. ಬೆಳಗ್ಗೆ ಬೇಗ ಎದ್ದು ಎತ್ತು, ಕೋಣವನ್ನು ನೇಗಿಲಿಗೆ ಕಟ್ಟಿ, ಎರಡು ಸೊನ್ನೆಗಳು ಸಂಧಿಸದ ಹಾಗೇ ಉಳುಮೆ ಮಾಡುವುದೇ ಈ ಹಬ್ಬದ ವಿಶಿಷ್ಟತೆ. ಗದ್ದೆಯನ್ನು ಆರು ಹೂಡಿ, ಆರು ಸಂದುಗಳಲ್ಲಿ ಹೊಟ್ಟು[೪೪] ಸುಡುವ ಆಚರಣೆ. ಆರೂಡುವ ದಿನ ಉಳುಮೆ ಮಾಡುವಾಗ ಕೋಣಗಳನ್ನು ಪೂರ್ವಕ್ಕೆ ಮುಖಮಾಡಿ ನಿಲ್ಲಿಸಿ ನೇಗಿಲು ಕಟ್ಟಬೇಕೇಂಬ ಸಂಪ್ರದಾಯವಿದೆ.

ಆರೂಡಿ ಬಂದ ಕೋಣಗಳನ್ನು ಕಾಲು ತೊಳೆದು ಕೊಟ್ಟಿಗೆ ಒಳಗೆ ಸೇರಿಸಲಾಗುತ್ತದೆ. ಉಳುಮೆ ಮಾಡಿಬಂದ ಕೋಣನ ಸಿರಿಪಾದವನ್ನು ತೊಳೆಯುವಂತೆ ಕೋರುವ ಜನಪದ ಗೀತೆಯೊಂದಿದೆ[೪೫]. ವೈದಿಕಸಂಸ್ಕೃತಿಯಲ್ಲಿ ಗೋವು ಮಾತ್ರ ಪ್ರಧಾನವಾದರೆ, ದ್ರಾವಿಡ ಸಂಸ್ಕೃತಿಯಲ್ಲಿ ಕೋಣವನ್ನು ಕೂಡಾ ಈ ಹಬ್ಬದಲ್ಲಿ ಪೂಜೆಯ ವ್ಯಾಪ್ತಿಗೆ ತರುತ್ತಾರೆ.

ಕೃಷಿಸಂಸ್ಕೃತಿ ಇರುವಲ್ಲೆಲ್ಲ ಸಮೃದ್ಧಿಯ ಆಶಯವು ಇರುತ್ತದೆ. ವಿಶೇಷವಾಗಿ ಬಸರೂರಿನ ಕೃಷಿಸಂಸ್ಕೃತಿಯು ಆರೂಡ ಹಬ್ಬ, ಕದಿರುಹಬ್ಬ, ಕೈಲಾಪೂಜೆ, ಬಲೀಂದ್ರಹಬ್ಬ, ದರ್ಶನಪಡಿ, ನವರಾತ್ರಿ, ಕಂಬಳ ಮುಂತಾದ ಆಚರಣೆಗಳ ಸ್ವರೂಪವನ್ನು ಪಡೆದಿದೆ. ಬಸರೂರು ಮೂಲತಃ ಕೃಷಿಸಂಸ್ಕೃತಿಯುನ್ನು ಪೋಷಿಸಿಕೊಂಡು ಬಂದ ಪ್ರದೇಶವಾಗಿರುವುದರಿಂದ ಈ ಪ್ರದೇಶದಲ್ಲಿ ಕೃಷಿಆಚರಣೆಗಳು ಜೀವಂತವಾಗಿದೆ. ಈ ನೆಲೆಯಲ್ಲಿ ಯೋಚನೆ ಮಾಡಿದರೆ ಬಸರೂರು ದ್ರಾವಿಡ ಆಚರಣೆಯ ಕೇಂದ್ರವಾಗಿದೆ ಎಂಬ ವಿಚಾರ ತಿಳಿಯುತ್ತದೆ. ಕೃಷಿಸಂಸ್ಕೃತಿಯು ದ್ರಾವಿಡ ಸಂಸ್ಕೃತಿಯ ಹೆಗ್ಗುರುತಾಗಿದೆ.

ಬಸರೂರಿನ ಪ್ರತಿಯೊಂದು ಕೃಷಿಆಚರಣೆಗಳು ಇಂದಿಗೂ ವೈವಿಧ್ಯತೆ ಮತ್ತು ಸಾಂಸ್ಕೃತಿಕ ಮಹತ್ವವನ್ನು ಉಳಿಸಿಕೊಂಡಿದೆ. ದಿನದಿಂದ ದಿನಕ್ಕೆ ಬಸರೂರು ಆಧುನಿಕರಣಕ್ಕೆ, ಜಾಗತೀಕರಣಕ್ಕೆ ತೆರೆದುಕೊಳ್ಳುತ್ತಿದ್ದರು ಹಳೆಯ ನೆನಪುಗಳೊಂದಿಗೆ ಹೊಸತನ ಸೇರಿಕೊಂಡು ಮುನ್ನಡೆಯುತ್ತಿದೆ. ಕೃಷಿಸಂಸ್ಕೃತಿ ಬೇರೆ ಕಡೆಗಳಲ್ಲಿ ನೆಲೆಯನ್ನು ಕಳೆದು ಕೊಂಡಂತೆ ಬಸರೂರಿನಲ್ಲಿ ಕಳೆದುಕೊಂಡಿಲ್ಲ. ಕದಿರು ಹಬ್ಬದ ಮಹತ್ವ ಕಡಿಮೆಯಾಗಿಲ್ಲ. ಬಲೀಂದ್ರ ಪೂಜೆಯಂತಹ ಆಚರಣೆಗಳು ಬಸರೂರಿನ ಕೃಷಿಸಂಸ್ಕೃತಿಯ ಆಚರಣೆಗಳನ್ನು ಹೆಚ್ಚು ಜೀವಂತಗೊಳಿಸಿದೆ. ಈ ಆಚರಣೆಯ ಮೂಲಕ ಬಸರೂರು ಕೃಷಿಸಂಸ್ಕೃತಿಯ ಪೋಷಣೆಯ ಕೇಂದ್ರ ಎನ್ನುವುದು ತಿಳಿಯುತ್ತದೆ. ಕೈಲಾಪೂಜೆ ಹೆಚ್ಚು ಹೆಚ್ಚು ಜನರನ್ನು ಆಕರ್ಷಿಸುತ್ತಿದೆ. ಬಲೀಂದ್ರಹಬ್ಬ ಮತ್ತು ದೀಪಾವಳಿಗೆ ಬಸರೂರಿನಲ್ಲಿ ಸಾಂಸ್ಕೃತಿಕ ಮತ್ತು ಧಾರ್ಮಿಕ ಮಹತ್ವವಿದೆ. ಸಂಪ್ರದಾಯಬದ್ಧ ಆಚರಣೆಯೊಂದಿಗೆ ಒಂದಿಷ್ಟು ಆಧುನಿಕತೆಯ ಸ್ಪರ್ಶತಾಗಿದೆ. ದರ್ಶನಪಡಿಯಂತ ಆಚರಣೆಗಳು ತನ್ನ ನೆಲೆಯನ್ನು ಕಳೆದುಕೊಂಡಿದ್ದು ಕೃಷಿಯ ಅವನತಿಯಿಂದಲ್ಲ ಬದಲಿಗೆ ಅದನ್ನು ಆಚರಿಸುವ ಜನಸಮುದಾಯದ ಕೀಳರಿಮೆ ಮತ್ತು ಸಾಮಾಜಿಕ ಪ್ರತಿಷ್ಠೆಯಿಂದ. ವಿದ್ಯಾವಂತರೆನಿಸಿಕೊಂಡ ಬಳೆಗಾರ ಜನಸಮುದಾಯಕ್ಕೆ ದರ್ಶನಪಡಿ ಯಾವುದೆ ಧಾರ್ಮಿಕ ಆಚರಣೆಯಲ್ಲ ಬದಲಿಗೆ ದೇವರ ಹೆಸರಿನಲ್ಲಿ ಭಿಕ್ಷೆ ಬೇಡುವುದು ಎಂಬ ಮನಸ್ಥಿತಿ ಬಂದಿದೆ. ಅದೊಂದು ಜೀವನೋಪಾಯಕ್ಕೆ ಮಾಡುವ ಉದ್ಯೋಗ ಮಾತ್ರ, ಇದಕ್ಕೆ ಧಾರ್ಮಿಕ ಮಹತ್ವವಿಲ್ಲ. ಈ ಬಗೆಯ ವೈರುಧ್ಯ ಚಿಂತನೆಗಳಿಂದ ಬಳೆಗಾರ ಸಮುದಾಯವೂ ತನ್ನ ಸುತ್ತಲಿನ ಮಾಗಣೆಯಲ್ಲಿ ಅಸ್ಥಿತ್ವ ಕಳೆದುಕೊಳ್ಳುವಂತಾಗಿದೆ.

### ೭.೨.ದೈವಸ್ಥಾನ ಸಂಬಂಧಿ ಆಚರಣೆ

ಬಸರೂರಿನ ಕ್ರಿಶ ೧೫೪೬ರ ಶಾಸನ ಬೊಬ್ಬರ್ಯನ ತೋಟವನ್ನು ಉಲ್ಲೇಖಿಸಿದೆ. ಇದರ ಆಧಾರದ ಮೇಲೆ ಈ ಪ್ರದೇಶದಲ್ಲಿ ದೈವಗಳ ಆರಾಧನೆ ಹಿಂದಿನಿಂದಲೂ ಇತ್ತು ಎನ್ನುವುದು ತಿಳಿಯುತ್ತದೆ. ಬಸರೂರಿನಲ್ಲಿ ಕೇರಿಕೇರಿಗೆ ಒಂದೊಂದು ದೈವಸ್ಥಾನವಿದೆ. ಜನಸಮುದಾಯಕ್ಕೊಂದು ದೈವಗಳಿದ್ದಾವೆ. ಬಸರೂರಿನಲ್ಲಿ ಜನರು ನೆಲೆನಿಲ್ಲುವ ಮೊದಲೇ ದೈವಗಳನ್ನು ಸ್ಥಾಪಿಸಿಕೊಳ್ಳುತ್ತಿದ್ದರು. ಬಸರೂರಿನಲ್ಲಿರುವ ದೈವಸ್ಥಾನಗಳ ಸಂಖ್ಯೆ ಸುಮಾರು ೫೦ಕ್ಕೂ ಮಿಕ್ಕಿ ಇದೆ. ಇಲ್ಲಿರುವ ದೈವಗಳನ್ನು ಸ್ವರೂಪಕ್ಕನುಗುಣವಾಗಿ, ಭೌಗೋಳಿಕ ಸನ್ನಿವೇಶಗಳಿಗೆ ಅನುಗುಣವಾಗಿ, ಪಂಜುರ್ಲಿ, ಚಿಕ್ಕು, ಉಮ್ಮಲ್ತಿ, ಬೊಬ್ಬರ್ಯ, ನಂದಿ, ಕಲ್ಲುಕುಟ್ಟಿಗ, ಜಟ್ಟಿಗರಾಯ, ಯಕ್ಷೀ, ರಕ್ತೇಶ್ವರಿ, ಮನ್ಸಾವರಿ, ವೀರಕಲ್ಲುಕುಟ್ಟಿಗ, ದೊಟ್ಟೆಕಾಲು ಚಿಕ್ಕು, ಮಹಾಂಕಾಳಿ, ಸ್ವಾಮಿ, ಹನಾರ ಹಾಯ್ಗುಳಿ, ಮಾಸ್ತಿಅಮ್ಮ, ಸಣ್ಣಮ್ಮ, ಭೂತೇಶ್ವರ, ಭದ್ರಮಾಂಕಾಳಿ ಎಂಬ ಹೆಸರಿನಿಂದ ಕರೆಯುತ್ತಾರೆ. ಈ ದೈವಗಳಿಗೆ ವಿವಿಧ ಬಗೆಯ ಆರಾಧನ ಕ್ರಮ ವರ್ಷವಿಡಿ ನಡೆಯುತ್ತಿರುತ್ತದೆ. ಬಸರೂರಿನ ಸಾಂಸ್ಕೃತಿಕ ಅಧ್ಯಯನದಲ್ಲಿ

ಬಸರೂರಿನ ದೈವಗಳ ಆರಾಧನೆಗೆ ಸಂಬಂಧ ಪಟ್ಟ ಕೆಲವು ವಿಶಿಷ್ಟ ಆಚರಣೆಗಳನ್ನು ಮಾತ್ರ ಅಧ್ಯಯನದ ದೃಷ್ಟಿಯಿಂದ ಗಮನಿಸಲಾಗಿದೆ.

### ೭.೨.೧.ಹರಿವಾಣ ನೈವೇದ್ಯ \ ಹಾರ್ಗೋಳಿ

ಬಸರೂರಿನಲ್ಲಿ ಅಮ್ಮನವರ ಗುಡಿ ಎಂದು ಕರೆಯಲಾಗುವ ಶ್ರೀದುರ್ಗಾದುರ್ಗಾಪರಮೇಶ್ವರಿ ದೇವಸ್ಥಾನದಲ್ಲಿ ವರ್ಷದ ಎಲ್ಲಾ ಕಾಲದಲ್ಲಿಯೂ ನಡೆಯುವ ಹರಿವಾಣ ನೈವೇದ್ಯ ವಿಶಿಷ್ಟವಾದುದಾಗಿದೆ. ಬಸರೂರು ಮತ್ತು ಹೊರಗಿನ ಮಾಗಣೆಯ ಜನರು ಮಕ್ಕಳು ತಾಯಂದಿರ ಸಂಕಷ್ಟಕ್ಕೆ ಮತ್ತು ತಮ್ಮ ಬೇಡಿಕೆಯ ಈಡೇರಿಕೆಗಾಗಿ ಭದ್ರಮಹಾಂಕಾಳಿಗೆ ಹರಿವಾಣ ನೈವೇದ್ಯ ಕೊಡುವ ಕ್ರಮವಿದೆ. ಹರಿವಾಣನೈವೇದ್ಯ ಎನ್ನುವ ಪದ ಶಿಷ್ಟ ಪದವಾಗಿದ್ದು ಅದನ್ನು ಹಾರ್ಗೋಳಿ ಕೊಡುವುದು ಅಥವಾ ಆಹಾರಕ್ಕೆ ಕೋಳಿ ಬಲಿಕೊಡುವುದು ಎಂದು ಹಿಂದೆ ಕರೆಯುತ್ತಿದ್ದರು. ಹರಕೆ ಹೊತ್ತವರು ಮಂಗಳವಾರ ಅಥವಾ ಶುಕ್ರವಾರ ಅಮ್ಮನವರ ಗುಡಿಗೆ ಬಂದು ಅರ್ಚಕರ ಕೈಯಿಗೆ ಕೋಳಿ, ತೆಂಗಿನ ಕಾಯಿ ಮತ್ತು ಅಕ್ಕಿ ಕೊಟ್ಟು ಹರಿವಾಣ ನೈವೇದ್ಯ ಕೊಡುವ ಬಗ್ಗೆ ಪ್ರಾರ್ಥಿಸಿಕೊಳ್ಳುತ್ತಾರೆ. ಮಧ್ಯಾಹ್ನ ಪೂಜೆಯ ಸಮಯಕ್ಕೆ ದೇವಸ್ಥಾನದ ಮುಂಬಾಗಿಲಿನ ಎದುರುಗಡೆ ಕೋಳಿಯನ್ನು ಬಲಿ ಕೊಡುತ್ತಾರೆ (ಚಿತ್ರ ೧೫). ಆದಿನ ಸಂಜೆ ಕೊಳಿಯಪಲ್ಯ, ಉದ್ದಿನದೋಸೆ ಮಾಡಿ ಭದ್ರಮಹಾಂಕಾಳಿಗೆ ನೈವೇದ್ಯ ಮಾಡುತ್ತಾರೆ. ಹರಕೆ ನೀಡಿದವರು ಹದಿನೈದು ಉದ್ದಿನದೋಸೆ ಮತ್ತು ಕೋಳಿಪಲ್ಯವನ್ನು ಪ್ರಸಾದದ ರೂಪದಲ್ಲಿ ಮನೆಗೆ ಕೊಂಡು ಒಯ್ಯುತ್ತಾರೆ. ಬಸರೂರು ಶಾಕ್ತ ಕೇಂದ್ರವಾಗಿತ್ತು ಎನ್ನುವುದನ್ನು ಈ ಆಚರಣೆ ದೃಢಪಡಿಸುತ್ತದೆ. ಶಾಕ್ತರು ದೇವರನ್ನು ಮಾನವ ಸಹಜವಾಗಿ ಕಾಣುತ್ತಾರೆ. ದೇವರಿಗೂ ಮಾನವನಂತೆ ಬಯಕೆಗಳಿರುತ್ತದೆ. ಹಾಗಾಗಿ ಮಾಂಸ, ಮಧ್ಯ, ಮತ್ಸ್ಯ, ಮೈಥುನ ಮತ್ತು ಮುದ್ರಗಳನ್ನು ಅರ್ಪಿಸುತ್ತಾರೆ. ಭದ್ರಮಹಾಂಕಾಳಿಗೆ ಕೋಳಿ ಮತ್ತು ಕುರಿ, ವೀರಭದ್ರನ ಎದುರಿಗೆ ಬೆತ್ತಲೆ ಹೆಣ್ಣು, ವೀರಭದ್ರನ ಸೇವಕನಿಗೆ ಚುಟ್ಟ ಈ ಬಗೆಯ ಆರಾಧನ ಕ್ರಮ ಬಸರೂರಿನಲ್ಲಿತ್ತು. ಶ್ರೀದೇವಿಅಮ್ಮನವರ ದೇವಸ್ಥಾನವೆಂದು ಕರೆಯುವ ಶ್ರೀದುರ್ಗಾದುರ್ಗಾಪರಮೇಶ್ವರಿ ದೇವಸ್ಥಾನದಲ್ಲಿ ಇಂದಿಗೂ ಕೆಲವು ಶಾಕ್ತ ಆಚರಣೆಗಳು ಮುಂದುವರಿದುಕೊಂಡು ಬಂದಿದೆ.

### ೭.೨.೨.ಕುರಿಪೂಜೆ

ಬಸರೂರಿನ ಶ್ರೀದೇವಿಅಮ್ಮನವರ ದೇವಸ್ಥಾನದಲ್ಲಿ ಭದ್ರಮಹಾಂಕಾಳಿಗೆ ಹರಕೆ ರೂಪದಲ್ಲಿ ಕುರಿಬಲಿ ನೀಡುವ ಕ್ರಮವಿದೆ. ಕುರಿ ಹೊಡೆಯುವವರು ಮುಂಚಿತವಾಗಿ ದೇವಸ್ಥಾನದಲ್ಲಿ ತಿಳಿಸಿ ದೇವರ ಅಪ್ಪಣೆಪಡೆದು ಕುರಿಕಡಿಯುವ ದಿನವನ್ನು ನಿಶ್ಚಯಿಸಿಕೊಂಡು ಹೋಗುತ್ತಾರೆ. ಕುರಿಕಡಿಯುವ ದಿನ ಬೆಳಿಗ್ಗೆ ದೇವಸ್ಥಾನಕ್ಕೆ ಬಂದು ಹರಕೆಯ ಕುರಿಯನ್ನು ತಂದು ಒಪ್ಪಿಸುತ್ತಾರೆ. ಮೊಗವೀರರು ಕುರಿಯನ್ನು ಸ್ನಾನ ಮಾಡಿಸಿ ಕ್ಷೌರಮಾಡಿಸಿ ದೇವಸ್ಥಾನದ

ಸುತ್ತು ವಾದ್ಯ ಬೇಂಡಿನೊಂದಿಗೆ ಮೆರವಣಿಗೆ ಬರುತ್ತಾರೆ. ಮಧ್ಯಾಹ್ನ ಹನ್ನೆರಡು ಗಂಟೆಗೆ ಮಂಗಳಾರತಿ ನಡೆಯುತ್ತದೆ. ಭದ್ರಮಹಾಂಕಾಳಿಯು ಪಾತ್ರಿಯ ಮೇಲೆ ಆವಾಹನೆಗೊಂಡು ದೇವಸ್ಥಾನದಿಂದ ಹೊರಬರುತ್ತದೆ. ದೇವಸ್ಥಾನದ ಮುಂಬಾಗಿಲಿನಲ್ಲಿ ಕಡಿಯಲು ನಿಲ್ಲಿಸಿದ ಕುರಿಗೆ, ಆವೇಶಗೊಂಡ ಪಾತ್ರಿ ಪ್ರಸಾದ ಹಾಕಿ ಅನುಮತಿ ನೀಡಿದ ಕೂಡಲೇ ದೇವಸ್ಥಾನದ ಬಳೆಗಾರ ಅರ್ಚಕರು ಕುರಿಯನ್ನು ಕಡಿಯುತ್ತಾರೆ. ಕುರಿಯನ್ನು ಕಡಿದ ಕ್ಷಣದಲ್ಲಿ ಪಾತ್ರಿ ಮೇಲೆ ಆವೇಶ ನಿಲ್ಲುತ್ತದೆ. ಸಂಜೆ ವೀರಭದ್ರನಿಗೆ ಸಸ್ಯಾಹಾರ ಉಳಿದ ದೈವಗಳಿಗೆ ಕುರಿಎಡೆಯನ್ನು ನೈವೇದ್ಯ ಮಾಡುತ್ತಾರೆ. ಅನಂತರ ಸಾಮೂಹಿಕ ಊಟವಿರುತ್ತದೆ. ಕುರಿಯನ್ನು ಭದ್ರಮಹಾಂಕಾಳಿಗೆ ಬಲಿ ನೀಡುವುದನ್ನೆ ಕುರಿಪೂಜೆ ಎಂದು ಕರೆಯುತ್ತಾರೆ. ಕುರಿ ಬಲಿ ಸಾಮಾನ್ಯವಾಗಿ ಮಂಗಳವಾರ ಮತ್ತು ಶುಕ್ರವಾರ ನಡೆಯುತ್ತದೆ. ಕುರಿ ಹೊಡೆಯುವ ದಿನ ಹರಕೆ ಹೊತ್ತವರು ಶುದ್ಧಾಚಾರದಿಂದ ಇರುತ್ತಾರೆ.

### ೭.೨.೩.ದೊಡ್ಡ ಮಾರಿಹಬ್ಬ

ಮಾನವ ಸಂಸ್ಕೃತಿಯ ಪ್ರಾಥಮಿಕ ಹಂತದಲ್ಲಿ ಜನಸಾಮಾನ್ಯರು, ಊರನ್ನು ಕಬಳಿಸುವ ಸಾಂಕ್ರಾಮಿಕ ರೋಗ, ಕ್ಷಾಮ ಡಾಮರಗಳನ್ನು ಕಂಡು ತತ್ತರಿಸಿದರು. ಇಂತಹ ದುಷ್ಟಶಕ್ತಿಗಳಿಗೆ ಶರಣಾದರೆ ಪೂಜೆ ಬಲಿಗಳಿಂದ ಸಂತೃಪ್ತಿಗೊಳಿಸಿದರೆ ತಮ್ಮ ಬದುಕಿಗೆ ನೆಮ್ಮದಿ ಎಂದು ತಿಳಿದಿದ್ದರು. ತಮ್ಮ ಭಕ್ತಿ ಭಾವವನ್ನು ಪ್ರತ್ಯಕ್ಷವಾಗಿ ವ್ಯಕ್ತಪಡಿಸಲು ಆ ಶಕ್ತಿಗೊಂದು ಉಗ್ರರೂಪ ಸೃಷ್ಟಿಸಿ ಅದಕ್ಕೊಂದು ರೋಮಾಂಚನಕಾರಿ ಕತೆಕಟ್ಟಿ ಭಯಭಕ್ತಿ ಪ್ರದರ್ಶಿಸಿದರು. ಹೀಗೆ ಸಂಸ್ಕೃತಿಯ ಮೊದಲ ಹಂತದಲ್ಲಿ ಮಾರಿಹಬ್ಬಗಳು ಪ್ರಾರಂಭವಾದವು. ಮಾರಿಹಬ್ಬಗಳು ಸಾಮಾನ್ಯವಾಗಿ ಒಂದು ದಿವಸದಿಂದ ಒಂದು ತಿಂಗಳ ತನಕ ನಡೆಯುತ್ತದೆ. ಸಾಮಾನ್ಯವಾಗಿ ಶಿವರಾತ್ರಿ ಹಬ್ಬದಿಂದ ಯುಗಾದಿಯವರೆಗೆ ಈ ಹಬ್ಬವನ್ನು ಹಮ್ಮಿಕೊಳ್ಳುತ್ತಾರೆ. ಕೃಷಿಕರ ಅನುಕೂಲತೆಯನ್ನು ಗಮನಿಸಿ ಜಾತ್ರೆಯ ದಿನವನ್ನು ನಿರ್ಧರಿಸುತ್ತಾರೆ. ಮಾರಿದೇವತೆಯನ್ನು ಸಂತೃಪ್ತಿಗೊಳಿಸಲು ಎಲ್ಲಾ ವರ್ಗದ ಜನರು ಈ ಹಬ್ಬದಲ್ಲಿ ಪಾಲ್ಗೊಂಡು ದನಕರು ಬೆಳೆ ಮುಂತಾದವುಗಳ ಸಮೃದ್ಧಿಗೆ ತಲೆಕಾಣಿಕೆ ಮತ್ತು ಬಾಲದ ಕಾಣಿಕೆಯನ್ನು ವರಾಡದ ರೂಪದಲ್ಲಿ ಅರ್ಪಿಸುತ್ತಾರೆ.

ಬಸರೂರಿನ ದೊಡ್ಡ ಮಾರಿಹಬ್ಬ ಸುತ್ತಮುತ್ತಲಿನ ಮಾಗಣೆಯಲ್ಲಿಯೇ ಅತ್ಯಂತ ದೊಡ್ಡ ಮಾರಿಹಬ್ಬವಾಗಿದೆ. ಇಲ್ಲಿನ ಶ್ರೀದೇವಿಅಮ್ಮನವರ ದೇವಸ್ಥಾನದಲ್ಲಿರುವ ಮಾರಿ ಮುಖವಾಡವು ನಾಗಬಂಧದಿಂದ ಕೂಡಿದೆ(ಚಿತ್ರ ೧೬). ಮಾರಿಹಬ್ಬದ ಸಂದರ್ಭದಲ್ಲಿ ಮಾರಿ ಹೊರುವವರು ಹಸ್ಲರ ಜಾತಿಗೆ ಸೇರಿದವರು ಈ ಮುಖವಾಡ ಧರಿಸಿ ಮೆರವಣಿಗೆ ಹೋಗುವ ಕ್ರಮ ಇದ್ದಿತ್ತು. "ಬಸರೂರಿನಲ್ಲಿ ಮಾತ್ರ ಮಾರಿಮುಖವಾಡ ಹೊತ್ತು ಮಾರಿ ಹಬ್ಬ ಆಚರಿಸುವ ಕ್ರಮ ಇದೆ. ಮಂದಾರ್ತಿಯಲ್ಲಿ ಇದೇ ಬಗೆಯ ಮುಖವಾಡ ಇದ್ದರೂ

ಮಾರಿಹಬ್ಬ ನಡೆದ ಬಗ್ಗೆ ಉಲ್ಲೇಖವಿಲ್ಲ"(ಉದಯಕುಮಾರ ಶೆಟ್ಟಿ;೨೦೦೭;ಪುಟ: ೯೫).

ಬಸರೂರಿನ ದೊಡ್ಡ ಮಾರಿಹಬ್ಬಕ್ಕೆ ಪ್ರಾಚೀನತೆಯಿದೆ. ಕ್ರಿ.ಶ. ೧೪೪೪ರಲ್ಲಿ ಮಾರಿಹಬ್ಬ ನಡೆದಿರಬಹುದೆಂದು ಕೆಲವು ಶಾಸನಗಳ ಘಟನೆಯನ್ನು ಆಧರಿಸಿ ಹೇಳಬಹುದು. ಕ್ರಿ.ಶ. ೧೪೫೫ರ ಜನವರಿ೨೩ರ ಶಾಸನವು ಶ್ರೀದೇವಿದೇವಸ್ಥಾನಕ್ಕೆ ಸಂಬಂಧಿಸಿದ ವಿವಾದವನ್ನು ಬಗೆಹರಿಸಿ ನ್ಯಾಯ ತೀರ್ಮಾನ ಮಾಡಿದ ವಿಚಾರವನ್ನು ಪ್ರಸ್ತಾಪಿಸುತ್ತದೆ. (ವಾದಿರಾಜ ಭಟ್ ಕನರಾಡಿ;೧೯೯೭;ಪುಟ:೨೫೪)ಈ ಆಧಾರವನ್ನು ಗಮನಿಸಿದರೆ ಮತ್ತು ೧೯೮೪ ರಲ್ಲಿ ನಡೆದ ದೊಡ್ಡ ಮಾರಿಹಬ್ಬದ ದಾಖಲೆಗಳನ್ನು ತಾಳೆ ಮಾಡಿ ನೋಡಿದರೆ ಕ್ರಿ.ಶ. ೧೪೫೫ ರಲ್ಲಿ ಬಸರೂರಿನಲ್ಲಿ ಮಾರಿಹಬ್ಬ ನಡೆದಿತ್ತು ಎಂಬುದು ಖಚಿತವಾಗುತ್ತದೆ. ಬೇರೆ ಊರುಗಳಲ್ಲಿ ಮಾರಿಹಬ್ಬ ಎರಡು ವರ್ಷಕ್ಕೊಮ್ಮೆ ನಡೆದರೆ ಬಸರೂರಿನ ಮಾರಿಹಬ್ಬ ಕಾಲುಸಂವತ್ಸರ ಮತ್ತು ಪೂರ್ಣಸಂವತ್ಸರಕ್ಕೆ ಒಮ್ಮೆ ನಡೆಯುತ್ತದೆ. ಮಾರಿಹಬ್ಬದಲ್ಲಿ ಮಾರಿದೇವತೆಯನ್ನು ಆರಾಧಿಸಿ ಮಾರಿ ಮುಖವಾಡವನ್ನು ಹಸ್ಲರ ಜಾತಿಯವರು ಧರಿಸಿ ಮೆರವಣಿಗೆ ಮೂಲಕ ಗಡಿಗಳಿಗೆ ಕೊಂಡು ಹೋಗಿ ಪುನಃ ದೇವಸ್ಥಾನದಲ್ಲಿ ಪ್ರತಿಷ್ಠಾಪಿಸುತ್ತಿದ್ದರು. ಅನಂತರದಲ್ಲಿ ರಥದ[೬೧] ಮೇಲೆ ಕುಳ್ಳಿರಿಸಿ ಮೆರವಣಿಗೆ ಮಾಡಲಾರಂಭಿಸಿದರು. ಬಸರೂರಿನಲ್ಲಿ ಮಾರಿಯನ್ನು ಓಡಿಸುವುದಲ್ಲ ಅವಳನ್ನು ಪೂಜಿಸಿ ಸಂಪ್ರೀತಳನ್ನಾಗಿ ಮಾಡುವ ಸಾತ್ವಿಕ ಕ್ರಮ ಜಾರಿಯಲ್ಲಿದೆ[೬೭].

ಬಸರೂರಿನ ಮಾರಿಹಬ್ಬದ ಕೇಂದ್ರ ಶ್ರೀದೇವಿಅಮ್ಮನವರ ದೇವಸ್ಥಾನ. ಇಲ್ಲಿ ಗರ್ಭಗೃಹದಲ್ಲಿ ಮಹಾಲಕ್ಷ್ಮಿ, ಮಹಾಕಾಳಿ, ಮಹಾಸರಸ್ವತಿ. ಹೊರಪ್ರಾಂಗಣದಲ್ಲಿ ಆಳೆತ್ತರದ ಭದ್ರಮಹಾಂಕಾಳಿ, ಮಾತಂಗಿ ವೀರಭದ್ರ, ಬೇತಾಳ, ಬತ್ತಲೆಪರಮೇಶ್ವರಿ. ಮಾರಿಮುಖ, ಮತ್ತೊಂದು ಸಿಂಹದ ಪ್ರತಿಮೆ ಇದೆ. ಬಸರೂರಿನ ಐದು ಗ್ರಾಮದ ದೈವಗಳು ಈ ದೇವಸ್ಥಾನಕ್ಕೆ ಅಧೀನವಾಗಿರುತ್ತದೆ. ಬಸರೂರಿನ ಐದು ಗ್ರಾಮದ ದೈವದ ಪಾತ್ರಿಗಳು, ಬಲ್ಲಾಳರು, ಮುಕ್ತೇಶ್ವರರು, ಊರಿನ ಪ್ರಮುಖರು ಸೇರಿ ದೊಡ್ಡ ಮಾರಿಹಬ್ಬಕ್ಕೆ ದಿನ ನಿಗದಿ ಮಾಡುತ್ತಾರೆ. ಮಾರಿಹೊರುವ ಹಸ್ಲರ ಜಾತಿಯ ಪ್ರತಿನಿಧಿಗಳ ಒಪ್ಪಿಗೆ ಪಡೆದು ಅಮ್ಮನವರಲ್ಲಿ ಚರ್ಚಿಸಿ ದಿನ ನಿರ್ಧರಿಸುವುದು ಮೊದಲಿನಿಂದಲೂ ನಡೆದುಕೊಂಡ ಬಂದ ಸಂಪ್ರದಾಯವಾಗಿದೆ.

ಬಸರೂರಿನ ಮಾರಿಹಬ್ಬಕ್ಕೆ ಕೇಂದ್ರಸ್ಥಾನ ಅಮ್ಮನವರ ದೇವಸ್ಥಾನವಾದರೆ ಈ ಎಲ್ಲಾ ಚಟುವಟಿಕೆಗಳ ಯಜಮಾನತ್ವ ಪಂಚ ಗ್ರಾಮದ ಮುಖ್ಯದೇವರಾದ ಶ್ರೀ ಮಹತೋಭಾರ ಮಹಾಲಿಂಗೇಶ್ವರನ ಅಧೀನದಲ್ಲಿರುತ್ತದೆ. ದೊಡ್ಡ ಮಾರಿಹಬ್ಬಕ್ಕೆ ದಿನವಿಟ್ಟ ಮೇಲೆ ಮಹಾಲಿಂಗೇಶ್ವರನ ದೇವಾಲಯ ಶುಚಿಗೊಳಿಸಿ ಕಲಶಾಭಿಷೇಕ, ಕಲಾಹೋಮ ಏರ್ಪಡಿಸಲಾಗುತ್ತದೆ. ಮಾರಿಹಬ್ಬದಲ್ಲಿ ಪಾಲ್ಗೊಳ್ಳುವ ಪಂಜುರ್ಲಿ, ಜಟ್ಟಿಗರಾಯ,

ಭದ್ರಮಾಂಕಾಳಿ ಅಮ್ಮನವರ ಉರುಗಳಿಗೆ ಬಣ್ಣ ಬಳಿದು ಪುನಃ ಪ್ರತಿಷ್ಠೆ ಮಾಡಲಾಗುವುದು. ಮಾರಿಹಬ್ಬಕ್ಕೆ ದಿನವಿಟ್ಟ ಮೇಲೆ ಪಂಚಮಾಗಣೆಯ ಜನ ಬೇರೆಕಡೆ ಹೋಗಿ ರಾತ್ರಿ ಉಳಿಯುವಂತಿಲ್ಲ ಯಾವುದೇ ಬಗೆಯ ಮಂಗಳಕಾರ್ಯವು ನಡೆಸುವಂತಿಲ್ಲ. ಜಾತ್ರೆಗೆ ದಿನವಿಡುದಕ್ಕಿಂತಲೂ ಪೂರ್ವದಲ್ಲಿ ಶುಭಕಾರ್ಯದ ದಿನ ನಿಗದಿಯಾಗಿದ್ದರೆ ಅಂತವರು ಭದ್ರಮಹಾಂಕಾಳಿ ಅಮ್ಮನವರಿಗೆ ತಪ್ಪು ಕಾಣಿಕೆ ಕಟ್ಟಿ ಶುಭಕಾರ್ಯ ನಡೆಸಬಹುದು.

ಮಾರಿ ಹಬ್ಬವಾಗಬೇಕಾದರೆ ಬಸರೂರಿನ ಮಹಾಲಿಂಗೇಶ್ವರನ ಮಹಾರಥೋತ್ಸವವು ಮುಗಿದಿರಬೇಕು. ದೊಡ್ಡಮಾರಿ ಮುಗಿಯುವವರೆಗೆ ರಥದ ಅಲಂಕಾರ ತೆಗೆಯಬಾರದು. ಒಂದೊಮ್ಮೆ ತೆಗೆದರೆ ಪುನಃ ರಥೋತ್ಸವ ನಡೆಸಿಯೇ ಮಾರಿಹಬ್ಬ ಮಾಡಬೇಕು. ಮಾರಿಹಬ್ಬದ ಏಳು ದಿನಗಳಲ್ಲಿಯೂ ಬಸರೂರ ಮಾಗಣೆಯ ದೈವದ ಪಾತ್ರಿಗಳು ಕಡ್ಡಾಯವಾಗಿ ಉತ್ಸವದಲ್ಲಿ ಪಾಲ್ಗೊಳ್ಳಬೇಕು. ಅವರ ದರ್ಶನಕ್ಕೆ ಬೇಕಾದ ವ್ಯವಸ್ಥೆ ದೇವಿದೇವಸ್ಥಾನದವರು ಮಾಡಿಕೊಡುತ್ತಾರೆ. ಜಾತ್ರೆಗೆ ದಿನ ನಿಗದಿ ಆದ ಕೂಡಲೇ ಅಮ್ಮನವರಪಾತ್ರಿ, ಪಂಜುರ್ಲಿಪಾತ್ರಿ, ಶ್ರೀದೇವಿದೇವಸ್ಥಾನದ ಅರ್ಚಕರು, ಬಲ್ಲಾಳರು, ಮುಕ್ತೇಶ್ವರರು ಧರ್ಮಸ್ಥಳಕ್ಕೆ ಹೋಗಿ ತೀರ್ಥಸ್ನಾನ ಮಾಡಿ ಪ್ರಸಾದ ಸ್ವೀಕರಿಸಿ ಬರುತ್ತಾರೆ. ಮಾರಿಹಬ್ಬದ ದಿನ ಮಧ್ಯಾಹ್ನ ಹನ್ನೆರಡು ಗಂಟೆಯ ನಂತರ ಭದ್ರಮಹಾಂಕಾಳಿ ಅಮ್ಮನವರ ಪಾತ್ರಿ, ಪಂಜುರ್ಲಿಪಾತ್ರಿ ಮತ್ತು ಇತರರು ಮಹಾಲಿಂಗೇಶ್ವರ ದೇವಾಲಯಕ್ಕೆ ಹೋಗಿ ಮಂಗಳಾರತಿ ಮಾಡಿ, ತೀರ್ಥಪ್ರಸಾದ ಪಡೆದು ಶ್ರೀದೇವಿಅಮ್ಮನವರ ದೇವಸ್ಥಾನಕ್ಕೆ ಸಂಪ್ರೋಕ್ಷಣೆ ಮಾಡುತ್ತಾರೆ. ಅನಂತರದಲ್ಲಿ ಮಂಗಳಾರತಿ ಮತ್ತು ದರ್ಶನ. ಮಧ್ಯಾಹ್ನ ಊಟ ಮುಗಿದ ಬಳಿಕ ಗರಡಿಯಲ್ಲಿ ಬಂಟರ[ಳಿ] ದರ್ಶನ ನಡೆಯುತ್ತದೆ. ಮೂಡುಕೇರಿಯ ಬಂಟರ ಗರಡಿಯಿಂದ ಮಹಾಲಿಂಗೇಶ್ವರ ದೇವಾಲಯದವರೆಗೆ ಮಡಿ ಹಾಸಲಾಗುತ್ತದೆ. ಮಡಿಮೇಲೆ ಶ್ರೀಮಹಾಲಿಂಗೇಶ್ವರ ದೇವಾಲಯದವರೆಗೆ ವಾದ್ಯಸಮ್ಮೇಳದೊಂದಿಗೆ ಬಂಟರು ಆಗಮಿಸಿ ನುಡಿಕೊಡುತ್ತಾರೆ. ಮಾರಿಹಬ್ಬವನ್ನು ಹೊರತುಪಡಿಸಿ ಬೇರಾವ ಸಂದರ್ಭದಲ್ಲಿಯೂ ಬಂಟರು ಗರಡಿ ಬಿಟ್ಟು ಹೊರಗೆ ಬರುವುದಿಲ್ಲ. ಆ ದಿನ ಸಂಜೆ ಜಟ್ಟಿಗ ದೇವಸ್ಥಾನದಲ್ಲಿ ಪಂಜುರ್ಲಿ, ಜಟ್ಟಿಗರಾಯ, ಹೊಯ್‌ಕೆರೆ ಚಿಕ್ಕು, ಎಡಗೋಳಿಚಿಕ್ಕು, ಕೊಂಗವಳ್ಳಿಅಮ್ಮ, ಕೊಂಗವಳ್ಳಿ ಮಹಾಂಕಾಳಿ, ಕೊಂಗವಳ್ಳಿ ಹೈಗುಳಿ, ಗುಂಡಿಗೋಳಿನಂದಿ, ಮಾದನಕೆರೆಹೈಗುಳಿ ಮೊದಲಾದ ದೈವಗಳ ದರ್ಶನ ನಡೆಯುತ್ತದೆ. ಅಲ್ಲಿಂದ ರಾಯರು, ಎಡಗೋಳಿ ಚಿಕ್ಕು, ಕೊಂಗವಳ್ಳಿಅಮ್ಮ ಹಾಗೂ ಹೊಯ್‌ಕೆರೆ ಚಿಕ್ಕು ತೆಂಕುಬಾಗಿಲಿನಿಂದ ಮಹಾಲಿಂಗೇಶ್ವರ ದೇವಾಲಯದ ಒಳಪ್ರಾಂಗಣಕ್ಕೆ ಬಂದು ದರ್ಶನ ಪಡೆದರೆ ಉಳಿದ ದೈವಗಳು ಪ್ರಾಂಗಣದ ಒಳಪ್ರವೇಶಿಸದೆ ದೇವಾಲಯದ ಎದುರುಗಡೆಯಲ್ಲಿ ದರ್ಶನ ಪಡೆಯುತ್ತವೆ. ಅನಂತರದಲ್ಲಿ ಎಲ್ಲಾ ದೈವಗಳು ಶ್ರೀದೇವಿ ಅಮ್ಮನವರ ದೇವಸ್ಥಾನಕ್ಕೆ ಹೊರಡುತ್ತವೆ. ಶ್ರೀದೇವಿಅಮ್ಮನವರ ಸನ್ನಿಧಿಯಲ್ಲಿ ದೈವಗಳು ಒಟ್ಟು ಸೇರಿ ಮಾರಿಹಬ್ಬ ಮುಂದುವರಿಯಲು ರಾಯರಲ್ಲಿ

ಅನುಮತಿ ಕೇಳುತ್ತವೆ. ರಾಯರು ಹೆಬ್ಬಾಗಿಲಿನಲ್ಲಿ ನಿಂತು ಅಮ್ಮನವರ ದರ್ಶನ ಪಡೆಯುತ್ತಾರೆ. ಉಳಿದ ದೈವಗಳು ಅಂಗಳದಲ್ಲಿ ಉಳಿದುಬಿಡುತ್ತವೆ.

ದೇವಸ್ಥಾನದ ಒಳ ಅಂಗಣದಲ್ಲಿ ಅಲಂಕರಿಸಿ ಇಟ್ಟ ಮಾರಿಯ ಮುಖವಾಡವನ್ನು ದೇವಸ್ಥಾನದ ಮುಕ್ತೇಶ್ವರರು ಮೂಲಸ್ಥಾನದಿಂದ ಎತ್ತಿ ಅರ್ಚಕರ ಕೈಗೆ ಕೊಟ್ಟನಂತರ ಮೆರವಣಿಗೆ ಹೊರಡುತ್ತದೆ. ಮಾರಿಮುಖದ ಹಿಂದೆ ಪಂಜುರ್ಲಿ ಮತ್ತು ಪರಿವಾರದೈವಗಳು, ದೈವಗಳ ಹಿಂದೆ ಜನರು ಸೇರಿಕೊಂಡು ಅಲಂಕೃತ ಮಾರಿ ರಥವಿರುವ ಪಶ್ಚಿಮ ಭಾಗದ ಹೆಬ್ಬಾಗಿಲಿಗೆ ಮಾರಿಮುಖವನ್ನು ಹೊತ್ತು ತಂದು ರಥದಲ್ಲಿ ಇಡುತ್ತಾರೆ. ರಾಯರ ಮತ್ತು ಪಂಜುರ್ಲಿಯ ಅಪ್ಪಣೆಯಂತೆ ಮಾರಿಯನ್ನು ಹೊತ್ತ ರಥವು ಮಹಾಲಿಂಗೇಶ್ವರ ದೇವಾಲಯದ ಕಡೆಗೆ ಹೊರಡುತ್ತದೆ. ಮಹಾಲಿಂಗೇಶ್ವರ ದೇವಾಲಯಕ್ಕೆ ಅಭಿಮುಖವಾಗಿ ರಥವನ್ನು ನಿಲ್ಲಿಸಿ ರಾಯರು, ಎಡಗೋಳಿ ಚಿಕ್ಕು, ಹೋಯ್‌ಕೆರೆಚಿಕ್ಕು, ಕೊಂಗವಳ್ಳಿಅಮ್ಮ, ದೇವಾಲಯದ ಒಳ ಬಂದು ಮಹಾಲಿಂಗೇಶ್ವರನ ದರ್ಶನ ಪಡೆದರೆ ಉಳಿದ ದೈವಗಳು ಮಾರಿಯ ಜೊತೆಗಿರುತ್ತವೆ. ಒಳಪ್ರಾಂಗಣದಿಂದ ಉಳಿದ ದೈವಗಳು ಹೊರಬಂದ ಮೇಲೆ ಮಾರಿರಥದ ಜೊತೆಗಿದ್ದ ದೈವಗಳು ತೀರ್ಥಪ್ರಸಾದ ಪಡೆಯುತ್ತವೆ. ದೈವದ ನುಡಿ ಆಗುತ್ತಿದ್ದಂತೆ ಮಾರಿರಥ ಮಾಹಾಲಿಂಗೇಶ್ವರ ದೇವಾಲಯವನ್ನು ಸುತ್ತುವರಿದು ರಾಹುತಕೇರಿ, ಗುಡಿಗಾರರ ಕೇರಿಯ ಮೂಲಕ ಜಪ್ತಿ ಗಡಿಪೂಜೆಗೆ ಹೊರಡುತ್ತದೆ. ಮಾರಿರಥ ಮುಂದೆ ಅದರ ಹಿಂದೆ ಪರಿವಾರ ದೈವಗಳು. ಪರಿವಾರ ದೈವಗಳ ಹಿಂದೆ ಬಸರೂರಿನ ಮಾಗಣೆಯ ಜನರು ಹಿಂಬಾಲಿಸುತ್ತಿರುತ್ತಾರೆ. ಜಪ್ತಿಯ ಜಾಗಟೆಕಟ್ಟೆಯಲ್ಲಿ ಕುಂಬಾರರು ಬೇಯಿಸಿದ ಚರು, ಮೊಗವೀರರು ಹೊತ್ತು ತಂದ ಕುರಿಯನ್ನು ಬಲಿಕೊಡುತ್ತಾರೆ. ಬಲಿಯ ನಿರ್ದೇಶನವನ್ನು ಪಂಜುರ್ಲಿ ದೈವ ನಡೆಸುತ್ತದೆ. ಅನಂತರದಲ್ಲಿ ಊರಿನವರು ತಾವು ತಂದ ಕೋಳಿಯನ್ನು ಗಡಿಗೆ ಕೊಯ್ದು ಮಾರಿ ಕಳೆದ ತೃಪ್ತಿಯನ್ನು ಪಡೆದುಕೊಳ್ಳುತ್ತಾರೆ. ಪಂಜುರ್ಲಿ ಗಡಿಗೆ ಕಾಯಿ ಒಡೆದು ಪ್ರಸಾದ ಹಾಕಿದ ನಂತರವೇ ಮಾರಿ ಹಿಂತಿರುಗುತ್ತದೆ. ಹಿಂತಿರುಗಿ ಬರುವಾಗ ಮಾಗಣೆಯ ಜನ ತಾವು ನಂಬಿದ ದೈವಗಳಿಗೆ ಹೂ, ಕಾಯಿ, ಎಳನೀರನ್ನು ಅರ್ಪಿಸುತ್ತಾರೆ.

ಗಡಿಪೂಜೆ ಮುಗಿಸಿ ಹಿಂತಿರುಗಿದ ಮಾರಿಗೆ ಪಂಜುರ್ಲಿ ಮತ್ತು ಅಮ್ಮನವರು ಕಾಯಿ ಸುಳಿದು ಒಡೆದ ನಂತರ ಮಾರಿಯ ಮುಖವಾಡವನ್ನು ರಥದಿಂದ ಕೆಳಗಿಳಿಸಿ ದೇವಸ್ಥಾನದ ಮುಖಮಂಟಪದಲ್ಲಿ ಕೂರಿಸುತ್ತಾರೆ. ಪಂಜುರ್ಲಿ ಮತ್ತು ಒತ್ತಿನದೈವಗಳು ಮೊದಲು ಹಿರಿದುಕೊಂಡರೆ^೪೯ ರಾಯರು ಕೊನೆಯಲ್ಲಿ ಹಿರಿದುಕೊಳ್ಳುತ್ತಾರೆ. ಗಡಿಪೂಜೆ ಮುಗಿಸಿ ಬಂದ ಅಮ್ಮನವರ ಪಾತ್ರಿ ಪುನಃ ಸ್ನಾನಮಾಡಿ ದರ್ಶನ ನೀಡುತ್ತಾರೆ. ಮಾರಿಹಬ್ಬಕ್ಕೆ ಸಂಬಂಧಿಸಿದಂತೆ ಉಳಿದ ದೈವಗಳೊಡನೆ ವಿಚಾರ ವಿನಿಮಯ ನಡೆಸುತ್ತದೆ.

ಮಂಗಳಾರತಿಯ ನಂತರ ಎಲ್ಲರಿಗೂ ಊಟದ ವ್ಯವಸ್ಥೆಯಾಗುತ್ತದೆ.

ಎರಡನೇಯ ದಿನ ಅಮ್ಮನವರ ದೇವಸ್ಥಾನದಿಂದ ಮಾರಿರಥದೊಡನೆ ಹೊರಟ ದೈವಗಳು ರಾಹುತಕೇರಿಯ ಮೂಲಕ ಮಹಾಲಿಂಗೇಶ್ವರ ದೇವಾಲಯಕ್ಕೆ ಬರುತ್ತವೆ. ಅಲ್ಲಿ ಮಡಿಲಸೇವೆಯ[೫೦] ಬಳಿಕ ಉತ್ಸವವು ರಾಹುತಕೇರಿಯ ಮೂಲಕ ರಾಯರ ಗದ್ದುಗೆಗೆ ಬಂದು ರಾಯರ ಗದ್ದುಗೆಯ ಸಂದರ್ಶನ ನಡೆಸಿ ನೇರವಾಗಿ ಸಟ್ವಾಡಿಗಡಿಗೆ ಹೋಗಿ ಗಡಿ ಪೂಜೆ, ಗಡಿ ಬಲಿ ನಡೆಯುತ್ತದೆ. ಪಂಜುರ್ಲಿ ಮತ್ತು ಅಮ್ಮನವರ ಅನುಮತಿ ಪಡೆದು ಮಾರಿರಥ ಮರುಪ್ರಯಾಣ. ಹಿಂದಿನ ದಿನದಂತೆ ನುಡಿಕಟ್ಟು, ಮಂಗಳಾರತಿ, ನೈವೇದ್ಯ ಜರಗುತ್ತದೆ.

ಮೂರನೇಯ ದಿನ ಆನಗಳ್ಳಿ ಗಡಿಪೂಜೆ. ಆನಗಳ್ಳಿ ಗಡಿಪೂಜೆಗೆ ಹೇರಿಕುದ್ರು[೫೧] ಮಾಂಕಾಳಿ ಸೇರಿಕೊಳ್ಳುವುದು ವಿಶೇಷವಾಗಿದೆ. ಶ್ರೀ ಮಹಾಲಿಂಗೇಶ್ವರ ದೇವಾಲಯದಲ್ಲಿ ನಿತ್ಯದಂತೆ ಸೇವೆ ಮುಗಿಸಿ ನೇರವಾಗಿ ಸಾಹೇಬರ ಕೇರಿಯ ಮೂಲಕ ಆನಗಳ್ಳಿಗೆ ಬಂದು ಗಡಿಪೂಜೆ ನಡೆಸುತ್ತಾರೆ. ಆನಗಳ್ಳಿ ಸೇತುವೆಯೇ ಮಾರಿಗಡಿ. ಆನಗಳ್ಳಿಗೆ ಹೋಗುವ ದಾರಿಯುದ್ದಕ್ಕೂ ಮುಸಲ್ಮಾನರು, ಕ್ರೈಸರು ಮನೆ ಎದುರು ತಳಿರು ತೋರಣಗಳಿಂದ ಸಿಂಗರಿಸಿ ಮಾರಿಯನ್ನು ಸ್ವಾಗತಿಸುತ್ತಾರೆ. ನಾಲ್ಕನೆಯ ದಿನ ಮಹಾಲಿಂಗೇಶ್ವರ ದೇವಾಲಯಕ್ಕೆ ಸುತ್ತು ಬಂದು ಮೂಡುಕೇರಿಯ ಬಂಟರ ಗರಡಿ ಮನೆಯ ಎದುರಿನಿಂದ ಮೂರ್ಹಾನೆಬಬ್ಬರ್ಯ ದೇವಸ್ಥಾನದ ಮಾರ್ಗವಾಗಿ ಖಾರಿಕುದ್ರು ದಾಟಿ ಕಂಡ್ಲೂರು ಕಳಿನಬಾಗಿಲ[೫೨]ವರೆಗೆ ಮಾರಿರಥದ ಮೆರವಣಿಗೆ ಬರುತ್ತದೆ. ಗಡಿಬಲಿ ಪೂರೈಸಿ, ಅದೇ ಮಾರ್ಗದಲ್ಲಿ ಅಮ್ಮನವರ ದೇವಸ್ಥಾನಕ್ಕೆ ಮಾರಿರಥ ಪುನಃ ಬಂದು ಸೇರುತ್ತದೆ.

ಐದನೇಯ ದಿನ ನಗರೋತ್ಸವ ಅಮ್ಮನವರ ದೇವಸ್ಥಾನದಿಂದ ಹೊರಟ ಮಾರಿರಥ ಮಹಾಲಿಂಗೇಶ್ವರ ದೇವಾಲಯಕ್ಕೆ ಸುತ್ತು ಹಾಕಿ ಮೂಡುಕೇರಿ ಮಾರ್ಗದಲ್ಲಿ ಬಂಟರ ಗರಡಿಮನೆಯವರೆಗೆ ಬಂದು, ಪುನಃ ಅದೇ ಮಾರ್ಗದಲ್ಲಿ ಹಿಂದಕ್ಕೆ ತಿರುಗಿ ಭೈರವ ದೇವಸ್ಥಾನ ದಾಟಿ ಆದಿನಾಥೇಶ್ವರ ದೇವಾಲಯದ ಎದುರಿನಿಂದ ಕಾಶಿಮಠದ ದಕ್ಷಿಣದಿಕ್ಕಿನ ಅಂತನಮನೆ ಗಡಿಯವರೆಗೆ ಬಂದು ನಿಲ್ಲುತ್ತದೆ. ಅಲ್ಲಿಂದ ಪಂಜುರ್ಲಿ, ಅಮ್ಮನವರು ಮತ್ತು ಜಟ್ಟಿಗರಾಯ ಹಿಂದಕ್ಕೆ ಬಂದು ಕೆರೆಕಟ್ಟೆಗೆ ಸುತ್ತು ಹಾಕಿ ಪುನಃ ಮಾರಿರಥ ಇರುವಲ್ಲಿಗೆ ಮರಳಿ ಬಂದ ಮೇಲೆ ರಥ ಮುಂದಕ್ಕೆ ಹೊರಡುತ್ತದೆ. ಅಲ್ಲಿಂದ ಪುನಃ ಹಿಂದಕ್ಕೆ ತಿರುಗಿ ಮೂಡುಕೇರಿ ಮಾರ್ಗದಲ್ಲಿ ಮುಂದೆ ಬಂದು ವಿಲಾಸಕೇರಿ, ಮಂಡಿಕೇರಿಗೆ ಸುತ್ತುಹಾಕಿ ಮಹಾಲಿಂಗೇಶ್ವರ ದೇವಾಲಯದ ಎದುರಿನಿಂದ ರಾಹುತಕೇರಿಯ ಮೂಲಕ ಗುಪ್ಪಿರಾಯರ ಮನೆಯ ಗದ್ದುಗೆಯಲ್ಲಿ ಸಂದರ್ಶನವಾಗುತ್ತದೆ. ಮಾರಿರಥ ಅಲ್ಲಿಂದ ತೆಂಕುಬಾಗಿಲು ಜಟ್ಟಿಗ ದೇವಸ್ಥಾದವರೆಗೆ ಹೋಗಿ, ಮರಳಿ ಬಂದ ನಂತರ ಸಣ್ಣಕೆರೆ

ಹತ್ತಿರ ಮಾರಿರಥವನ್ನು ನಿಲ್ಲಿಸಿ ಬಲ್ಲಾಳ ಸೆಟ್ಟಿಗೆ ಕಾಯುವಂತೆ ಆಜ್ಞೆಮಾಡಿ ದೈವಗಳೆಲ್ಲ ದೊಡ್ಡ ಕೆರೆಕಟ್ಟೆಗೆ ಒಂದು ಸುತ್ತು ಬಂದು ಮರಳಿ ಬಂದ ಬಳಿಕವೇ ಮಾರಿ ರಥ ಮುಂದುವರಿಯುತ್ತದೆ. ಸಣ್ಣಕೆರೆ ಕಟ್ಟೆಯಿಂದ ತೆಂಕುಬಾಗಿಲಿನ ಮೂಲಕ ದೇವಾಲಯದ ಎಡಪಾರ್ಶ್ವದಲ್ಲಿ ಮುಂದುವರಿದು ಅಮ್ಮನವರ ದೇವಸ್ಥಾನ ತಲುಪುತ್ತದೆ. ಹಿಂದಿನ ದಿನದಂತೆ ಮಾರಿಯ ಮುಖವಾಡವನ್ನು ಮಂಟಪದಲ್ಲಿ ಇರಿಸುತ್ತಾರೆ. ಮಾರಿಯು ಹೊರಗಡೆ ಹೋದಾಗ ಮಾರಿಯ ಜಾಗವನ್ನು ಖಾಲಿ ಮಾಡಬಾರದು ಎಂದು ಮಾತಂಗಿಯನ್ನು ಕೂರಿಸುತ್ತಾರೆ. ಪ್ರತಿದಿನ ಮಧ್ಯಾಹ್ನ ದೇವಸ್ಥಾನದಲ್ಲಿ ಕುರಿಬಲಿ ನಡೆಯುತ್ತದೆ. ಸಂಜೆ ಗಡಿಯಲ್ಲಿ ಮಾತ್ರ ಕುರಿಬಲಿ ಜರಗುತ್ತದೆ. ನಗರೋತ್ಸವದ ದಿನ ಯಾವುದೇ ಗಡಿಬಲಿ ಇರುವುದಿಲ್ಲ.

ಏಳನೇಯ ದಿನ ಕೊನೆಯದಿನ ಶ್ರೀಅಮ್ಮನವರ ದೇವಸ್ಥಾನದಲ್ಲಿ ಬೆಳಗ್ಗಿನಿಂದಲೇ ಹಣ್ಣುಕಾಯಿ, ಮಡಿಲುಸೇವೆ ಇತ್ಯಾದಿ ಧಾರ್ಮಿಕ ಕಾರ್ಯಕ್ರಮಗಳು ನಡೆಯುತ್ತಿರುತ್ತದೆ. ಮಧ್ಯಾಹ್ನ ಮಂಗಳಾರತಿ ಆದ ಬಳಿಕ ಹರಕೆಯ ಕುರಿಯನ್ನು ಕಡಿಯಲಾಗುತ್ತದೆ. ಸಂಜೆ ಎಂದಿನಂತೆ ಉತ್ಸವ ಪ್ರಾರಂಭವಾಗುತ್ತದೆ. ಮಾರಿಹಬ್ಬದ ಕೊನೆಯ ದಿನದಂದು ಮಹಾಲಿಂಗೇಶ್ವರನಿಗೆ ಏಕಾದಶರುದ್ರ ಹಾಗೂ ಮಹಾರಥೋತ್ಸವದ ರೀತಿಯಲ್ಲಿ ನೈವೇದ್ಯ ಅರ್ಪಣೆಯಾಗುತ್ತದೆ. ಈ ಧಾರ್ಮಿಕ ಕಾರ್ಯ ಮುಗಿದ ಮೇಲೆ ಮಾರಿಯನ್ನು ಹೊತ್ತ ರಥ ದೇವಾಲಯಕ್ಕೆ ಸುತ್ತುವರಿದು ರಾಹುತಕೇರಿ, ಗುಡಿಗಾರರಕೇರಿಯ ಮೂಲಕ ಸರಕಾರಿ ಪ್ರೌಢಶಾಲೆಯ ಎದುರಿನವರೆಗೆ ಬರುತ್ತದೆ. ಅಲ್ಲಿಂದ ಹಿಂತಿರುಗಿ ಮೂಡ್ಲಕಟ್ಟೆ ಮಾರ್ಗದಲ್ಲಿ ಮೇರ್ಡಿ ಮೋರಿಯ ಹತ್ತಿರ ಬಲಿ ಅರ್ಪಿಸಲಾಗುತ್ತದೆ. ಅಲ್ಲಿಂದ ಹಿಂತಿರುಗಿದ ಮಾರಿರಥ ಮಾಸ್ತಿಕಟ್ಟೆಯಿಂದ[೫೩] ಮುಂದಕ್ಕೆ ಸಶ್ಮಾನದ ಹತ್ತಿರ ತಿರುಗಿ ತೆಂಕುಬಾಗಿಲು ರಸ್ತೆಯ ಮೂಲಕ ಶ್ರೀಲಕ್ಷ್ಮೀದಾಮೋದರ, ಶ್ರೀಲಕ್ಷ್ಮೀನಾರಾಯಣ, ಶ್ರೀವೀರಭದ್ರ ಮತ್ತು ಶ್ರೀರಾಮಚಂದ್ರ ದೇವಾಲಯದ ಎದುರಿನಿಂದ ಸಾಗಿ ತೆಂಕುಬಾಗಿಲಿನ ಎಡಬದಿಯಿಂದ ಆನಗಳ್ಳಿ ಬಟಲ್ ಸಾಲಿನವರೆಗೆ ಹೋಗಿ ಪುನಃ ಶ್ರೀಮಹಾಲಿಂಗೇಶ್ವರನನ್ನು ಸುತ್ತುವರಿದು ಚಿನಿವಾರಕಟ್ಟೆ ಸುತ್ತಿ ಮೂಡ್ಕೇರಿ ಕಲ್ಸಂಕದಗಡಿಗೆ ಬರುತ್ತದೆ. ಕಲ್ಸಂಕದ ಗಡಿಪೂಜೆ ಮುಗಿಸಿ ಮೂಡುಕೇರಿಯ ಮಾರ್ಗದಲ್ಲಿ ಕಾಶಿಮಠದಿಂದ ದಕ್ಷಿಣಕ್ಕೆ ಹೋಗಿ ಅಮ್ಮನವರ ದೇವಸ್ಥಾನವನ್ನು ಸೇರಿಕೊಳ್ಳುತ್ತದೆ. ಆರು ದಿನವು ಗಡಿಪೂಜೆ ಮುಗಿಸಿ ಬಂದ ಮಾರಿ ಮಂಟಪದಲ್ಲಿ ಉಳಿಯುತ್ತದೆ. ಕೊನೆಯ ದಿನ ಸ್ವಸ್ಥಾನವನ್ನು ಸೇರಿಕೊಳ್ಳುತ್ತದೆ. ಅನಂತರದಲ್ಲಿ ಭದ್ರಮಾಂಕಾಳಿ ಅಮ್ಮನವರ ಆವಾಹನೆ ನಿಲ್ಲುತ್ತದೆ. ಉಳಿದ ಪರಿವಾರದೈವಗಳು ಜಟ್ಟಿಗ ದೇವಸ್ಥಾನಕ್ಕೆ ಹೋಗಿ ಆವಾಹನೆ ನಿಲ್ಲಿಸಿಕೊಳ್ಳುತ್ತವೆ. ಏಳನೇಯ ದಿನ ಮಾರಿರಥ ಮರಳಿ ದೇವಸ್ಥಾನಕ್ಕೆ ಬರುವಾಗ ಬೆಳಗ್ಗಿನ ಜಾವವಾಗಿರುತ್ತದೆ.

ಏಳು ದಿನದ ಮಾರಿಹಬ್ಬ ಮುಗಿದ ಮೇಲೆ ಮಾರನೆ ದಿನ ಬೆಳಿಗ್ಗೆ ಅಮ್ಮನವರ ದೇವಸ್ಥಾನದ ಎದುರು ಪಶ್ಚಿಮದ ಹೆಬ್ಬಾಗಿಲಿನ ಹೊರಭಾಗದಲ್ಲಿ ಕೆಂಪುಹಾನ ಚೆಲ್ಲಿ ಕುರಿಬಲಿ ಕೊಡುತ್ತಾರೆ. ಪಂಜುರ್ಲಿಗೆ ಗರಡಿಯಲ್ಲಿ ಕುರಿಬಲಿ ಕೊಡುತ್ತಾರೆ. ಈ ಏಳುದಿನವು ಬಲಿಯಾದ ಕುರಿಗಳು ಜಪ್ತಿ ಗಡಿಯಲ್ಲಿ ಕುಂಬಾರರಿಗೆ, ಸಲ್ವಾಡಿ ಗಡಿಯಲ್ಲಿ ದೇವಾಡಿಗರಿಗೆ, ಆನಗಳ್ಳಿ ಮತ್ತು ಬಳ್ಕೂರು ಗಡಿಯಲ್ಲಿ ಮೋಗವೀರರಿಗೆ ಪ್ರಸಾದ ರೂಪದಲ್ಲಿ ದೊರಕುತ್ತದೆ. ಬಸರೂರು ಮಾರಿಹಬ್ಬ ಮುಗಿದ ಮೇಲೆ ಹಟ್ಟಿಕುದ್ರಿನಲ್ಲಿ ಮೂಡುದಿಕ್ಕು, ಪಡುದಿಕ್ಕು ಮತ್ತು ಬಡಗುದಿಕ್ಕಿಗೆ ಕುರಿಬಲಿ ಕೊಡುವ ಕ್ರಮವಿದೆ. ಆದರೆ ತೆಂಕುದಿಕ್ಕಿಗೆ ಬಲಿ ಇಲ್ಲ. ಈಗಾಗಲೆ ಬಸರೂರಿನ ಮಾರಿಹಬ್ಬ ಮುಗಿದಿರುತ್ತದೆ. ಶ್ರೀಮಹಾಲಿಂಗೇಶ್ವರ ದೇವಾಲಯದ ಕಂಚಿನ ಗಣಪತಿಗೆ ಮೂಡುಗಣಪತಿ ಸೇವೆ ಅರ್ಪಿಸಿದ ನಂತರ ಮಾರಿಹಬ್ಬ ಮುಕ್ತಾಯವಾಗುತ್ತದೆ.

### ೭.೨.೪. ಸಣ್ಣ ಮಾರಿಹಬ್ಬ

ಬಸರೂರಿನ ಶ್ರೀದೇವಿಅಮ್ಮನವರ ದೇವಸ್ಥಾನದಲ್ಲಿ ೧೫ ರಿಂದ ೨೦ ವರ್ಷಗಳ ಅಂತರದಲ್ಲಿ ಸಣ್ಣ ಮಾರಿ ಹಬ್ಬ ಜರಗುತ್ತದೆ. ಸಣ್ಣ ಮಾರಿ ಜಾತ್ರೆ ಒಂದು ದಿನದ ಉತ್ಸವವಾಗಿದೆ. ಕೃಷಿಕರ ಬಿಡುವಿನ ವೇಳೆಯನ್ನು ಗಮನದಲ್ಲಿರಿಸಿಕೊಂಡು ಮಾರಿಹಬ್ಬ ಆರಂಭಿಸಲಾಗುತ್ತದೆ. ಜಾತ್ರೆಗೆ ದಿನ ನಿಗದಿ ಮಾಡುವ ಮೊದಲು ಅಮ್ಮನವರನ್ನು, ಜಟ್ಟಿಗರಾಯನನ್ನು ಮತ್ತು ಪಂಜುರ್ಲಿ ದೈವಗಳನ್ನು ಉಂಟುಮಾಡಿಕೊಂಡು ನುಡಿ ಪಡೆಯಲಾಗುತ್ತದೆ. ದೇವಿಯ ನುಡಿಯಂತೆ ದಿನ ನಿರ್ಧರಿಸಿ ಬಸರೂರಿನ ಮಾಗಣೆಗೆ ವರ್ತಮಾನ ಕಳುಹಿಸಿಕೊಡಲಾಗುತ್ತದೆ. ಗ್ರಾಮದ ಪ್ರತಿಯೊಬ್ಬರು ತಲೆಕಾಣಿಕೆ ಮತ್ತು ಬಾಲದ ಕಾಣಿಕೆಯನ್ನು ತಪ್ಪದೆ ಸನ್ನಿಧಾನಕ್ಕೆ ಕಳುಹಿಸಿಕೊಡಬೇಕು.

ಸಣ್ಣ ಮಾರಿ ಜಾತ್ರೆ ಜರುಗಬೇಕಾದರೆ ಮಹಾಲಿಂಗೇಶ್ವರನ ರಥೋತ್ಸವ ಮುಗಿದಿರಬೇಕು. ದೊಡ್ಡಮಾರಿ ಹಬ್ಬದಂತೆ ರಥದ ಶೃಂಗಾರ ಬಿಚ್ಚದೆ ಸಣ್ಣ ಮಾರಿಹಬ್ಬ ಮಾಡಬೇಕೆಂದೇನು ಇಲ್ಲ. ಮಾರಿಹಬ್ಬಕ್ಕೆ ದಿನ ನಿಗದಿಯಾದ ಮೇಲೆ ಅಮ್ಮನವರ ದೇವಸ್ಥಾನದಲ್ಲಿ ಕಲಾಸಂಕೋಚ ಹೋಮ ಜರಗುತ್ತದೆ.

ಮಾರಿಹಬ್ಬದ ದಿನದಂದು ಬೆಳಗ್ಗಿನಿಂದ ವಿವಿಧ ಧಾರ್ಮಿಕ ಕಾರ್ಯಕ್ರಮಗಳು ಜರಗುತ್ತದೆ. ಮಧ್ಯಾಹ್ನ ೧೨ ಗಂಟೆಗೆ ಮಹಾಮಂಗಳಾರತಿ ಆನಂತರದಲ್ಲಿ ದರ್ಶನಸೇವೆ ನಡೆಯುತ್ತದೆ. ಮಧ್ಯಾಹ್ನ ದೇವಸ್ಥಾನದಲ್ಲಿ ಎರಡು ಕುರಿಗಳನ್ನು ಬಲಿಕೊಡಲಾಗುವುದು. ಸಾಯಂಕಾಲ ಗಡಿಪೂಜೆ. ಗೋಧೂಳಿ ಸಮಯದಲ್ಲಿ ಜಟ್ಟಿಗ ದೇವಸ್ಥಾನದ ರಾಯರು, ಪಂಜುರ್ಲಿ ಮತ್ತು ಇತರ ದೈವಗಳ ದರ್ಶನವಾಗುತ್ತದೆ. ಅಲ್ಲಿಂದ ಹೊರಟ ದೈವಗಳು ಹಲರಕೆರೆಯ ಮಾರ್ಗವಾಗಿ ತೆಂಕುಬಾಗಿಲಿನ ಮೂಲಕ ಮಹಾಲಿಂಗೇಶ್ವರ ದೇವಾಲಯಕ್ಕೆ

ಬಂದು ಮಂಗಳಾರತಿ ಸ್ವೀಕರಿಸಿ ಅಮ್ಮನವರ ದೇವಸ್ಥಾನಕ್ಕೆ ಬಂದು ಸೇರುತ್ತವೆ. ಅಮ್ಮನವರ ದೇವಸ್ಥಾನದಲ್ಲಿ ಪುನಃ ದರ್ಶನ, ಮಂಗಳಾರತಿ ಅಲ್ಲಿಂದ ಅಮ್ಮನವರನ್ನು ಕೂಡಿಕೊಂಡು ಪಂಜುರ್ಲಿ ಮತ್ತು ಜಟ್ಟಿಗರಾಯರು ಮಹಾಲಿಂಗೇಶ್ವರ ದೇವಾಲಯಕ್ಕೆ ಬಂದು ಪುನಃ ದರ್ಶನ ಪಡೆದು ರಾವುತಕೇರಿಯ ಮೂಲಕ ಒತ್ತಿನೆಣೆ ಗಡಿಯವರೆಗೆ ಹೋಗಿ ಗಡಿಬಲಿ ಕೊಡುತ್ತಾರೆ. ಒತ್ತಿನಣೆ ಗಡಿಯಲ್ಲಿ ಬಲಿಕೊಟ್ಟ ಕುರಿಯನ್ನು ಕುಂಬಾರರು ಪ್ರಸಾದ ರೂಪದಲ್ಲಿ ಪಡೆಯುತ್ತಾರೆ. ಕುರಿಯ ತಲೆ ಕ್ಷೌರಿಕರಿಗೆ ಸಲ್ಲುತ್ತದೆ. ಗಡಿಬಲಿ ಆದ ಕೂಡಲೇ ಸಂಬಂಧ ಪಟ್ಟ ಗ್ರಾಮಸ್ಥರು ಕೋಳಿಗಳನ್ನು ಬಲಿಕೊಡುತ್ತಾರೆ.

ಒತ್ತಿನೆಣೆ ಗಡಿಬಲಿ ಮುಗಿದು ಪುನಃ ಹೋದ ದಾರಿಯಲ್ಲಿ ಮರಳಿ ಬಂದು ರಾಯರ ಗದ್ದುಗೆಯಲ್ಲಿ ಸಂದರ್ಶನ ನಡೆಯುತ್ತದೆ. ಅಲ್ಲಿಂದ ಗುಪ್ಪೆಹಾಡಿ ಸಶ್ಮಾನದ ಮಾರ್ಗವಾಗಿ ಮೇರ್ಡಿಕಟ್ಟೆಯವರೆಗೆ ಹೋಗಿ ಅಲ್ಲೊಂದು ಕುರಿಬಲಿ ಕೊಡುತ್ತಾರೆ. ಈ ಕುರಿಯು ದೇವಾಡಿಗರಿಗೆ ಮರ್ಯಾದೆ ರೂಪದಲ್ಲಿ ಸಲ್ಲುತ್ತದೆ. ಕುರಿಯ ತಲೆ ಕ್ಷೌರಿಕರಿಗೆ. ಪುನಃ ಅಲ್ಲಿಂದ ಮರಳಿ ಜಟ್ಟಿಗ ದೇವಸ್ಥಾನ ಸಣ್ಣಕೆರೆಕಟ್ಟೆ ದಾರಿಯಲ್ಲಿ ದೇವರಕೆರೆ ಸುತ್ತುಹಾಕಿ ತೆಂಕುಬಾಗಿಲಿನ ಎದುರಿನಿಂದ ಆನಗಳ್ಳಿಯ ನಿಲ್ಸಕಲ್ಲಿಗೆ ಹೋಗಿ ಗಡಿಪೂಜೆ ಮತ್ತು ಕುರಿಬಲಿ. ಈ ಕುರಿ ಮೊಗವೀರರಿಗೆ ಸಲ್ಲುತ್ತದೆ. ಅದೇ ದಾರಿಯಲ್ಲಿ ಮರಳಿ ಬಂದು ಮಹಾಲಿಂಗೇಶ್ವರ ದೇವಾಲಯದ ಉತ್ತರಭಾಗದ ಮೂಲಕ ಮಂಡಿಕೇರಿ, ವಿಲಾಸಕೇರಿ, ಮೂಡುಕೇರಿ ಕಲ್ಸಂಕ ದಾರಿಯಲ್ಲಿ ಮೂರ್ಹಾನೆಬಬ್ಬರ್ಯ ದೈವಸ್ಥಾನದ ಗಡಿಗೆ ಬಂದು ಗಡಿಪೂಜೆ ನಂತರ ಕುರಿಬಲಿ. ಈ ಕುರಿಯು ಮೊಗವೀರರಿಗೆ ಸಲ್ಲುತ್ತದೆ. ಅಲ್ಲಿಂದ ಹಿಂತಿರುಗಿ ಆದಿನಾಥೇಶ್ವರದ ಎದುರಿನಿಂದ ಮೂಡುಕೇರಿ ಅಗ್ರಹಾರದಿಂದ ಮುಂದೆ ಕಾಶಿಮಠದಿಂದ ದಕ್ಷಿಣದಲ್ಲಿ ಅಂತನಮನೆಯ ಎದುರಿನ ಗಡಿಪೂಜೆ. ಅಲ್ಲಿಂದ ಮೂಡುಕೇರಿ ಮಾರ್ಗದಿಂದ ಅಮ್ಮನವರ ದೇವಸ್ಥಾನಕ್ಕೆ ಹಿಂದಿರುಗುತ್ತಾರೆ. ಅಲ್ಲಿ ದರ್ಶನ ಸೇವೆ. ಜಟ್ಟಿಗರಾಯ ಮತ್ತು ಇತರ ದೈವಗಳು ಜಟ್ಟಿಗ ದೇವಸ್ಥಾನಕ್ಕೆ ಮರಳಿ ಬಂದು ಗದ್ದುಗೆ ಸೇರುವವು. ಅಮ್ಮನವರ ದೇವಸ್ಥಾನದಲ್ಲಿ ಮಂಗಳಾರತಿ ಅನಂತರದಲ್ಲಿ ನೈವೇದ್ಯವಾಗಿ ಮಾರಿಹಬ್ಬ ಮುಗಿಯುತ್ತದೆ. ಮರುದಿನ ಅಮ್ಮನವರ ದೇವಸ್ಥಾನದ ಪಡುಹೆಬ್ಬಾಗಿಲಿನಲ್ಲಿ ಕುರಿಬಲಿ. ಪಂಜುರ್ಲಿ ಗರಡಿಯಲ್ಲಿ ಪಂಜುರ್ಲಿಗೆ ಕುರಿಬಲಿಯಾಗುತ್ತದೆ. ಸಣ್ಣ ಮಾರಿ ಹಬ್ಬದಲ್ಲಿ ಮಾರಿ ಮುಖವಾಡವನ್ನು ದೇವಸ್ಥಾನದ ಹೊರಗೆ ತೆಗೆದುಕೊಂಡು ಹೋಗುವುದಿಲ್ಲ. ಒಳಗಡೆ ಪೂಜೆ ನಡೆಯುತ್ತದೆ. ಮಾರಿಹಬ್ಬದಲ್ಲಿ ಭಾಗವಹಿಸಿದ ದೈವದ ಪಾತ್ರಿಗಳಿಗೆ ಜೋಡುಫಲ ಮತ್ತು ಗೌರವಧನ ಸಲುತ್ತದೆ.

ಬಸರೂರಿನ ಸಣ್ಣಮಾರಿ ಹಬ್ಬ ಇತರ ಮಾರಿಹಬ್ಬಗಳಂತಲ್ಲ. ಇಲ್ಲಿ ಮಾರಿದೇವತೆಯ ಉತ್ಸವಮೂರ್ತಿಯನ್ನು ಮರದಿಂದ ಮಾಡಿ ಗಡಿಯಲ್ಲಿ ವಿಸರ್ಜಿಸುವ ಕ್ರಮವಿಲ್ಲ.

ನಾಗಬಂಧದಿಂದ ಕೂಡಿದ ಮಾರಿ ಮುಖವಾಡವನ್ನು ಪೂಜಿಸಿ ಊರಿಗೆ ಬಂದ ದುರಿತವನ್ನು ಕಳೆಯಬೇಕೆಂದು ಪ್ರಾರ್ಥಿಸುವುದು ಕಂಡು ಬರುತ್ತದೆ. ಸಣ್ಣ ಮಾರಿಹಬ್ಬದಲ್ಲಿ ಮಾರಿ ಹೊರಗೆ ಹೋಗದೆ ಒಳಗೆ ಉಳಿದು ಭಕ್ತಾಧಿಗಳಿಂದ ಸೇವೆ ಸ್ವೀಕರಿಸುತ್ತಾಳೆ.

ಮಾರಿಹಬ್ಬ ಕೇವಲ ಜಾತ್ರೆ ಮಾತ್ರವಲ್ಲ ಅಲ್ಲಿ ಮೆರವಣಿಗೆ ಊಟ ಅಷ್ಟೇ ಅಲ್ಲ, ಅದು ಅನೇಕ ಆಚರಣೆಗಳ ಮೊತ್ತವಾಗಿದೆ. ಕಾಲಕಾಲಕ್ಕೆ ಒದಗಿ ಬಂದ ಸಾಮಾಜಿಕ, ಧಾರ್ಮಿಕ ಮೊದಲಾದ ಕಾರಣಗಳ ಒತ್ತಡದಿಂದಾಗಿ ಅನೇಕ ಸಾಂಸ್ಕೃತಿಕ ಸಂಗತಿಗಳು ಧಾರ್ಮಿಕ ಮುಖವಾಡ ಹೊತ್ತು ಜಾತ್ರೆಯಾಗಿದೆ ಮತ್ತು ದೇವರ ಉತ್ಸವವಾಗಿದೆ. ಇಂದು ಜಾತ್ರೆಗಳು ದೈವ, ದೇವರುಗಳ ಆರಾಧನೆ ಮತ್ತು ಅವುಗಳ ಮೆರವಣಿಗೆ ಮೊದಲಾದ ಸೀಮಿತ ಉದ್ದೇಶಗಳ ಪರಿಧಿಯನ್ನು ದಾಟಿ ಬಹುಮುಖ ಉದ್ದೇಶವನ್ನು ತನ್ನಲ್ಲಿ ಅಳವಡಿಸಿಕೊಂಡು ಸಂಕೀರ್ಣ ಸ್ವರೂಪ ಪಡೆದಿದೆ. ನಮ್ಮ ಅನೇಕ ಸಾಮಾಜಿಕ, ಐತಿಹಾಸಿಕ ಸಂಗತಿಗಳು ಧಾರ್ಮಿಕ ಮುಖವಾಡವನ್ನು ಧರಿಸಿದೆ (ನಾಯಕ್ ಎನ್.ಆರ್;೧೯೮೮; ಪುಟ:೧೭೫)

ಬಸರೂರಿನ ಮಾರಿಹಬ್ಬದದಲ್ಲಿ ಮೊದಲು ಮಾರಿಯ ಮುಖವಾಡವನ್ನು ಧರಿಸಿ ಕುಣಿಯುತ್ತಿದ್ದರು. ಮುಖವಾಡಕುಣಿತ ಸಂಪ್ರದಾಯ ಅತ್ಯಂತ ಪ್ರಾಚೀನವಾದುದು. ಹತ್ತನೇಯ ಶತಮಾನದ ವಡ್ಡಾರಾಧನೆಯಲ್ಲಿ ಮುಖವಾಡದ ಉಲ್ಲೇಖವಿದೆ. (ನಾಯಕ ಎನ್.ಆರ್;೧೯೮೮;ಪುಟ:೧೬೬). ಈ ಆಧಾರದ ಮೇಲೆ ಬಸರೂರಿನ ಮಾರಿಹಬ್ಬದ ಪ್ರಾಚೀನತೆ ತಿಳಿಯುತ್ತದೆ. ಈ ಬಗೆಯ ಜಾತ್ರೆಗಳು ಬಸರೂರಿನ ಜನಸಮುದಾಯದ ಧಾರ್ಮಿಕ ಜೀವನವನ್ನು ರೂಪಿಸಿದೆ. ಬದುಕಿನಲ್ಲಿ ಎಂತಹ ಅನಾಹುತ ಘಟಿಸಿದರು ಅದರ ಪರಿಹಾರವು ಇಷ್ಟ ದೇವತೆಯನ್ನು ನಂಬಿ ಆಕೆಗೆ/ಆತನಿಗೆ ಶರಣಾಗುವುದರಿಂದ ಹೂ, ಹಣ್ಣು, ಕಾಯಿ, ಕೋಳಿ, ಕುರಿ ಹರಕೆ ಕೊಟ್ಟು ಸಂತೃಪ್ತಿಗೊಳಿಸುವುದರಿಂದ ಸಾಧ್ಯವೆಂದು ಬಸರೂರಿನ ಜನಸಮುದಾಯ ಭಾವಿಸಿದೆ.

ಬಸರೂರಿನ ಮಾರಿಹಬ್ಬದಲ್ಲಿ ಮಾರಿಯ ಮುಖವಾಡವನ್ನು ಹೊರುವವರು ಹಸ್ಲರ ಜಾತಿಯವರು, ಚರು ಬೇಯಿಸುವವರು ಕುಂಬಾರರು, ಕುರಿ ಹೊರುವವರು ಮೊಗವೀರರು, ರಾತ್ರಿ ನೈವೇದ್ಯದ ಅಡುಗೆ ಮಾಡುವವರು ಬಳೆಗಾರರು, ಡೋಲು ಬಾರಿಸುವವರು ಕೊರಗರು. ಇನ್ನು ದೈವದ ಪಾತ್ರಿಗಳು ಬಳೆಗಾರರು, ಪೂಜಾರಿಗಳು, ಚಪ್ಪೆಕಾರರು, ಗಾಣಿಗರು, ಶೆಟ್ಟರು, ಶೇರಿಗಾರರು, ಆಚಾರಿ, ಸೆಟ್ಟಿಕಾರರು. ಆಗಮೋಕ್ತ ದೇವಾಲಯದ ಒಳಗೆ ಜಟ್ಟಿಗರಾಯನಿಗೆ, ಹೊಯ್ಕೆರೆ ಚಿಕ್ಕು, ಎಡಗೋಳಿ ಚಿಕ್ಕು, ಕೊಂಗುವಳ್ಳಿ ಅಮ್ಮ ಮಾತ್ರ ಪ್ರವೇಶಿಸುವ ಹಕ್ಕನ್ನು ಹೊಂದಿರುತ್ತಾರೆ. ಏಕೆಂದರೆ ಇವರು ಬ್ರಾಹ್ಮಣ, ಬಂಟ, ಗಾಣಿಗ ಜಾತಿಗೆ ಸೇರಿದವರು. ಇಲ್ಲಿ ಊಳಿಗಮಾನ್ಯ ಪದ್ಧತಿ, ಶ್ರೇಣಿಕೃತ

ಜಾತಿಪದ್ಧತಿಯ ನೆರಳು ಮಾರಿ ಹಬ್ಬದಲ್ಲಿ ಕಂಡುಬರುತ್ತದೆ. ದೈವದ ಪಾತ್ರಿಗಳು ಗಡಿಬಲಿ[೫೪] ಕೊಡುವವರು ಪ್ರಾಣಿಬಲಿ[೫೫] ಕೊಡುವವರು ಮುಖವಾಡ ಕುಣಿಸುವವರು ಶ್ರೇಣಿಕೃತ ವ್ಯವಸ್ಥೆಯ ಕೆಳವರ್ಗದವರು. ಮಾರಿಮುಖವಾಡವನ್ನು ಹೊತ್ತ ಮಾರಿರಥ ಬ್ರಾಹ್ಮಣರ ಅಗ್ರಹಾರಕ್ಕೆ ಪ್ರವೇಶಿಸುವುದಿಲ್ಲ. ಮಾರಿಹಬ್ಬದಲ್ಲಿ ಆಹಾರ ಹಂಚಿಕೆಯು ಸಾಮಾಜಿಕ ಶ್ರೇಣಿಗನುಗುಣವಾಗಿರುತ್ತದೆ. ರಾಯರು ಶ್ರೀಅಮ್ಮನವರ ದೇವಸ್ಥಾನದ ಒಳ ಪ್ರವೇಶಿಸದೇ ಹೆಬ್ಬಾಗಿಲಿನಲ್ಲೇ ಉಳಿದುಬಿಡುತ್ತಾರೆ. ರಾಯರಲ್ಲಿ ಮಾರಿಹಬ್ಬ ಮುಂದುವರಿಯಲು ಉಳಿದ ದೈವಗಳು ಅನುಮತಿ ಕೇಳುತ್ತವೆ ಇದನ್ನೆಲ್ಲಾ ಗಮನಿಸಿದಾಗ ಬಸರೂರಿನಲ್ಲಿ ಶ್ರೇಣಿಕೃತ ಸಾಮಾಜಿಕ ವ್ಯವಸ್ಥೆ ಬಹಳ ಹಿಂದಿನಿಂದಲೂ ಇದ್ದಿತ್ತು ಎಂಬುದು ಸ್ಪಷ್ಟವಾಗುತ್ತದೆ.

### ೭.೨.೫. ದೊಟ್ಟೆಕಾಲುಚಿಕ್ಕು ಗೆಂಡ

ಬಸರೂರಿನ ದೊಟ್ಟೆಕಾಲುಚಿಕ್ಕು ದೈವಸ್ಥಾನದಲ್ಲಿ ಬಾರತ್ ತಿಂಗಳ ಆರಕ್ಕೆ ಹಾಲುಹಬ್ಬ ಅಥವಾ ಗೆಂಡ ಸೇವೆ ನಡೆಯುತ್ತದೆ. ಇಲ್ಲಿರುವ ದೊಟ್ಟೆಕಾಲುಚಿಕ್ಕು ಮತ್ತು ಪರಿವಾರ ದೈವಗಳಿಗೆ ಹಬ್ಬದ ದಿನ ವಿಶೇಷ ಪೂಜೆ ನಡೆಯುತ್ತದೆ. ಗೆಂಡದ ಹೈಗುಳಿ ಗೆಂಡಕ್ಕೆ ಹಾರಿದ ನಂತರ ಹರಕೆ ಹೊತ್ತವರು ಗೆಂಡ ತುಳಿದು ಹರಕೆ ತೀರಿಸಿಕೊಳ್ಳುತ್ತಾರೆ. ಬಸರೂರಿನ ಉಳಿದ ಗೆಂಡದ ಹಬ್ಬದಂತೆ ಇಲ್ಲಿನ ಧಾರ್ಮಿಕ ಕಾರ್ಯಕ್ರಮ ಜರಗುತ್ತದೆ.

### ೭.೨.೬. ಅಮ್ಮನವರ ಗೆಂಡ

ಬಸರೂರಿನ ಗ್ರಾಮದೇವತೆಯಾದ ಶ್ರೀದೇವಿಅಮ್ಮನವರ ಗುಡಿಯಲ್ಲಿ ಹಂಚೇಸಿ ತಿಂಗಳ ಹತ್ತೊಂಬತ್ತರಂದು ಗೆಂಡದಹಬ್ಬ ನಡೆಯುತ್ತದೆ. ಗೆಂಡದಹಬ್ಬ ಎಂದರೆ ದೇವಸ್ಥಾನದ ಎದುರುಗಡೆ ನಿರ್ಮಿಸಿದ್ದ ಗೆಂಡದಹೊಂಡದಲ್ಲಿ ಇಳಿದು ಭಕ್ತರು ಹರಕೆಯನ್ನು ತೀರಿಸುವುದು. ಗೆಂಡದ ಹಬ್ಬದ ಯಜಮಾನಿಕೆ ಸ್ತ್ರೀದೈವಗಳಿಗೆ ಸಂಬಂಧಿಸಿದ್ದಾಗಿದೆ. ಗೆಂಡಕ್ಕೆ ಹಾರುವುದು ಪುರುಷದೈವಗಳು. ಹಬ್ಬವು ಎರಡು ದಿನಗಳ ತನಕ ನಡೆಯುತ್ತದೆ. ದೈವಸ್ಥಾನಕ್ಕೆ ಸಂಬಂಧಿಸಿದ ಆಚಾರಿ ಗೆಂಡದ ಹೊಂಡವನ್ನು ಸಿದ್ಧಪಡಿಸಿ ಬೆಂಕಿಹಾಕಿ ಗೆಂಡದ ರಾಶಿಯನ್ನು ಸಿದ್ಧಮಾಡುತ್ತಾನೆ. ಅನಂತರ ಗೆಂಡದಹೈಗುಳಿ ಪಾತ್ರಿಯ ಮೇಲೆ ಆವಾಹನೆಗೊಂಡು ಗೆಂಡದ ಹೊಂಡಕ್ಕೆ ಹಾರುತ್ತದೆ. ದೈವ ಗೆಂಡದ ಹೊಂಡಕ್ಕೆ ಹಾರಿದ ಮೇಲೆ ಹರಕೆಹೊತ್ತ ಹೆಂಗಸರು ಗೆಂಡ ತುಳಿದು ಹರಕೆ ತೀರಿಸಿಕೊಳ್ಳುತ್ತಾರೆ. ಆರೋಗ್ಯಕ್ಕೆ, ಸಂತಾನಕ್ಕೆ ಗೆಂಡ ತುಳಿಯುವ ಹರಕೆ ಹೊತ್ತು ಕೊಳ್ಳುತ್ತಾರೆ. ಗೆಂಡ ತುಳಿಯುವವರು ಗೆಂಡದ ಆಚಾರಿಗೆ ಕೊಡಬೇಕಾದ ಮರ್ಯಾದೆ ಕೊಟ್ಟು ಗೆಂಡ ತುಳಿಯುತ್ತಾರೆ.

ಗೆಂಡದಹಬ್ಬ ಮುಗಿದ ಮೇಲೆ ದಕ್ಕೆಬಲಿ ಸೇವೆ ನಡೆಯುತ್ತದೆ. ಇದು ದೈವಗಳನ್ನು ಹೊಗಳುವ ಕಾರ್ಯಕ್ರಮವಾಗಿದೆ. ಈ ದಕ್ಕೆ ಬಲಿ ಬೆಳಗ್ಗಿನ ಹೊತ್ತಿನಲ್ಲಿ ನಡೆಯುತ್ತದೆ.

ಇದನ್ನು ಮಂಡಲ ಎಂದು ಕರೆಯುತ್ತಾರೆ. ದೈವ ಮತ್ತು ವೈದ್ಯರು ಮಂಡಲಾಕಾರದಲ್ಲಿ ಕುಣಿಯುವುದರಿಂದ ಮಂಡಲ ಎಂದು ಹೆಸರು ಬಂದಿದೆ. ಕೈಯಲ್ಲಿ ದಕ್ಕೆ ಹಿಡಿದು ಮಂಡಲದ ಸುತ್ತ ಕುಣಿಯುದರಿಂದ ದಕ್ಕೆ ಮಂಡಲವಾಗಿದೆ. ವೈದ್ಯರ ಹೊಗಳಿಗೆ ಅನುಗುಣವಾಗಿ ದೈವಸ್ಥಾನದಲ್ಲಿರುವ ಪರಿವಾರ ದೈವಗಳು ಪಾತ್ರಿಯ ಮೇಲೆ ಆವಾಹನೆಯಾಗಿ ಮಂಡಲದ ಸುತ್ತ ಕುಣಿಯುತ್ತವೆ. ಎಲ್ಲಾ ದೈವಗಳ ಲೀಲೆ ಮುಗಿದ ಮೇಲೆ ಹೊರಸುತ್ತಿನಲ್ಲಿರುವ ಹುಲಿದೇವರು[೫೬] ಪಾತ್ರಿಯ ಮೇಲೆ ಆವಾಹನೆಯಾಗಿ ಹುಲಿಯಂತೆ ನಟಿಸುತ್ತ ದೇವಸ್ಥಾನಕ್ಕೆ ಸುತ್ತು ಬರುತ್ತದೆ. ನಂಬಿದ ಕುಟುಂಬ ಕೋಳಿಯನ್ನು ನೀಡಿದ ನಂತರ ಆವಾಹನೆ ನಿಲ್ಲುತ್ತದೆ. ದಕ್ಕೆ ಮಂಡಲ ಮುಗಿದ ಮೇಲೆ ತುಲಾಭಾರ ಸೇವೆ, ಪಟ್ಟೆ ಸೇವೆ ನಡೆಯುತ್ತದೆ.

### ೭.೨.೭. ಗರಡಿ ಗೆಂಡ

ಬಸರೂರಿನ ಗರಡಿ ತುಳುನಾಡಿನ ಗರಡಿಗಳಿಗಿಂತ ಭಿನ್ನವಾಗಿದ್ದು ಇಲ್ಲಿನ ಆಚರಣೆಗಳಲ್ಲಿ ದ್ರಾವಿಡ ಸಂಸ್ಕೃತಿಯು ದಟ್ಟವಾಗಿದೆ. ಮೂಡುಕೇರಿಯ ಕೊನೆಯಲ್ಲಿರುವ ಪಂಜುರ್ಲಿ ಕೋಟಿಚೆನ್ನಯ್ಯರ ಗರಡಿ ಐತಿಹಾಸಿಕ ಮಹತ್ವನ್ನು ಪಡೆದುಕೊಂಡಿದೆ.

ತುಳುನಾಡಿಗೂ ಬಸರೂರು ಗರಡಿಗೂ ಸಂಬಂಧ ಇದ್ದ ಬಗ್ಗೆ ಐತಿಹ್ಯಗಳಿವೆ. ಕೋಟಿಚೆನ್ನಯ್ಯರು ಅವತಾರ ಮಾಡುವಾಗ ತುಳುನಾಡಿನಲ್ಲಿ ಎಷ್ಟು ಬಲ್ಲಾಳರ ಬೀಡುಂಟೋ ಅಷ್ಟು ಗರಡಿಯನ್ನು ಸ್ಥಾಪನೆ ಮಾಡಬೇಕೆಂದು ಅಪ್ಪಣೆ ಕೊಡಿಸಿದರಂತೆ. ಅದೇ ರೀತಿ ತುಳುವ ರಾಜ್ಯದಲ್ಲಿ ಅರವತ್ತಾರು ಬೀಡುಗಳಲ್ಲಿ ಅರವತ್ತಾರು ಗರಡಿಗಳು ಸ್ಥಾಪನೆಯಾದವಂತೆ ಅದರಲ್ಲಿ ಬಸರೂರು ಗರಡಿಯೂ ಒಂದು. ಈ ಗರಡಿಯಲ್ಲಿ ಕೋಟಿಚೆನ್ನಯ್ಯರು ಇದ್ದರು ಪಂಜುರ್ಲಿಯೇ ಯಜಮಾನನಾಗಿದ್ದಾನೆ.

ಗರಡಿಯಲ್ಲಿ ಪ್ರಧಾನದೈವ ಬ್ರಹ್ಮ. ಬ್ರಹ್ಮನಿರುವ ಗುಡಿಯನ್ನು ಗುಂಡ ಎಂದು ಕರೆಯುತ್ತಾರೆ. ಗುಂಡದ ಬಲ, ಎಡಗಳಲ್ಲಿ ಕೋಟಿಚೆನ್ನಯ್ಯರ ಮತ್ತು ಪಯ್ಯಬೈದ್ಯರ, ದೇಯಿಬೈದ್ಯತಿ ದೈವಗಳಿವೆ. ಗುಂದದ ಶಿಖರದಲ್ಲಿ ವೆಂಕಟರಮಣ, ಪದ್ಮಾವತಿ ಮತ್ತು ಲಕ್ಷ್ಮೀ ಈ ಮೂವರ ಮೇಲ್ಭಾಗದಲ್ಲಿ ನಂದಿ ಇದನ್ನು ಶಿಖರ ಎಂದು ಕರೆಯುತ್ತಾರೆ.

ಬಸರೂರಿನ ಕೋಟಿಚೆನ್ನಯ್ಯರ ಗರಡಿಯಲ್ಲಿ ಪಂಜುರ್ಲಿ, ನಂದಿ, ಶಿವರಾಯ, ಮಹಾಂಕಾಳಿ, ಹಾಯ್ಗುಳಿ, ಬೊಬ್ಬರ್ಯ, ಉಮ್ಮಾಲ್ತಿ, ಮಾಸ್ತಿ, ಮಾಸ್ತಿಕಟ್ಟೆ ಚಿಕ್ಕು, ಕಳಿನಚಿಕ್ಕ, ಮೈಂದಾಲ್ತಿ, ಬಾಲಯ್ಯ, ಬಾಲಮ್ಮ, ಜೋಗಿಪುರುಷ, ಚೀನಿಯರ ಭೂತ ಮುಂತಾದ ದೈವಗಳಿವೆ. ಗಂಡು ದೈವಗಳಿಗೆ ಪಂಜುರ್ಲಿ ಪ್ರಧಾನ ದೈವವಾಗಿದೆ. ಈ ಹೆಸರು ವರಾಹಮೂರ್ತಿ ಎಂದು ಸಂಸ್ಕೃತಿಕರಣಗೊಂಡಿದೆ.

ಕೋಟಿಚೆನ್ನಯ್ಯರ ಗರಡಿಯಲ್ಲಿ ಪಂಜುರ್ಲಿ ಸ್ಥಾಪನೆಗೊಂಡ ಬಗ್ಗೆ ಒಂದು ಐತಿಹ್ಯವಿದೆ. (ನೋಡಿ,ಸಾಹಿತ್ಯ ಮತ್ತು ಸಂಸ್ಕೃತಿ ಅಧ್ಯಾಯದಲ್ಲಿ, ಪಂಜುರ್ಲಿ ಐತಿಹ್ಯ) ಬಸರೂರು ಗರಡಿಗೆ ಪಂಜುರ್ಲಿ ಬರುವ ಮೊದಲು ನಂದಿಕೇಶ್ವರ ಪ್ರಧಾನದೈವವಾಗಿದ್ದಿತ್ತು. ಪಂಜುರ್ಲಿ ಬಂದ ಮೇಲೆ ಆಡಳಿತವನ್ನು ಪಂಜುರ್ಲಿಗೆ ಬಿಟ್ಟುಕೊಟ್ಟಿತು. ಈಗಲೂ ಮೊದಲ ಪೂಜೆ ನಂದಿಗೆ, ಎರಡನೆಯ ಪೂಜೆ ಬಬ್ಬರ್ಯನಿಗೆ, ಮೂರನೆಯ ಪೂಜೆ ಪಂಜುರ್ಲಿಗೆ ನಡೆಯುತ್ತದೆ.

ಬಸರೂರಿನ ಕದಿರು ಹಬ್ಬದ ದಿನ ಅಂದರೆ ಕೊಡಿ ಹಿಡಿಯುವ ಮೊದಲ ಸಂಕ್ರಮಣದ ದಿನ ಕೈಲಾ ಪೂಜೆಗೆ ದಿನ ಇಡುತ್ತಾರೆ. ಕೈಲಾ ಪೂಜೆಯ ದಿನ ಎಲ್ಲಾ ಗಣಗಳ ದರ್ಶನ ನಡೆಯುತ್ತದೆ. ಬಾರತ್ ತಿಂಗಳ ೧೧ಕ್ಕೆ ಜನವರಿ ಕೊನೆಯ ವಾರದಲ್ಲಿ ಗರಡಿಯಲ್ಲಿ ಗೆಂಡ ಅಥವಾ ಹಾಲುಹಬ್ಬ ಸೇವೆ ನಡೆಯುತ್ತದೆ. ಕೈಲಾ ಪೂಜೆಯಿಂದ ಗರಡಿಯ ಹಬ್ಬದ ಹೇಳಿಕೆ ಪ್ರಾರಂಭವಾಗುತ್ತದೆ ಮತ್ತು ಶುದ್ಧಾಚಾರ ಅಂದಿನಿಂದ ಆರಂಭವಾಗುತ್ತದೆ. ಬಸರೂರಿನ ಪಂಚಮಾಗಣೆಯ ಜನರಿಗೆ ಹಬ್ಬದ ಹೇಳಿಕೆ ತಲುಪುತ್ತದೆ. ಗೆಂಡದ ಹಬ್ಬದ ದಿನ ಬೆಳಿಗ್ಗೆ ಗರಡಿಯ ಕಳಶವನ್ನು ಬ್ರಾಹ್ಮಣರ ಮನೆಯ ಬಾವಿಯ ನೀರಿನಿಂದ ತುಂಬಿಸುತ್ತಾರೆ. ದೈವದ ಉರುಗಳನ್ನು ಬಗೆಬಗೆಯ ಹೂಗಳಿಂದ ಶೃಂಗಾರ ಮಾಡಲಾಗುತ್ತದೆ. ಈ ದಿನ ಪ್ರಧಾನದೈವ ಪಂಜುರ್ಲಿಗೆ ಒಂದು ಲೋಟ ಹಾಲು ಅರ್ಪಿಸುತ್ತಾರೆ. ಅನಂತರದಲ್ಲಿ ಅದನ್ನು ಪಾತ್ರಿ ಸ್ವೀಕರಿಸುತ್ತಾನೆ. ಪ್ರತಿ ದೈವಗಳ ಎದುರಿನಲ್ಲಿಯೂ ಅವಲಕ್ಕಿ ಪಂಚಕಜ್ಜಾಯ, ತೆಂಗಿನಕಾಯಿ ಮತ್ತು ದೀಪವನ್ನು ಹಚ್ಚಿಡುತ್ತಾರೆ. ಈ ಧಾರ್ಮಿಕ ಕಾರ್ಯಕ್ರಮ ರಾತ್ರಿ ವೇಳೆಯಲ್ಲಿ ನಡೆಯುತ್ತದೆ. ಅವಲಕ್ಕಿ ಪಂಚಕಜ್ಜಾಯವನ್ನು ಪ್ರಸಾದ ರೂಪದಲ್ಲಿ ಭಕ್ತರಿಗೆ ನೀಡುತ್ತಾರೆ.

ಕೋಟಿ ಚೆನ್ನಯ್ಯರು ಪಾತ್ರಿಯ ಮೇಲೆ ಆವಾಹನೆಗೊಂಡು ಬಲ್ಲಾಳರನ್ನು ಕರೆದು ಐದು ವೀಳ್ಯದೆಲೆ, ಐದು ತೆಂಗಿನಕಾಯಿ, ಎಳನೀರನ್ನು ನೀಡಿ ಹಬ್ಬದ ಆರಂಭಕ್ಕೆ ಅನುಮತಿ ಕೇಳುತ್ತಾರೆ. ಅನಂತರದಲ್ಲಿ ಕೋಟಿಚೆನ್ನಯ್ಯರ ದರ್ಶನವಾಗುತ್ತದೆ.

ಹಾಲಬ್ಬದ ದಿನ ಐದು ಎಡೆ ಬಳಸುವುದು ಈ ಗರಡಿಯ ವಿಶೇಷಕ್ರಮವಾಗಿದೆ. ಎಡೆಗೆ ಮೊದಲು ಅನ್ನ ಬಳಸಿ, ಅನಂತರ ಅನ್ನ ತೋರದ ಹಾಗೇ ಅದರ ಮೇಲೆ ಪದಾರ್ಥವನ್ನು ಮುಚ್ಚುತ್ತಾರೆ. ಐದು ಎಡೆಗಳಿಗೆ ಹಾಗೂ ಎಲ್ಲಾ ದೈವದ ಉರುಗಳಿಗೆ ಧೂಪದೀಪ ಬೆಳಗಿಸುತ್ತಾರೆ. ಬಾಲಯ್ಯ, ಬಾಲಮ್ಮ, ಮೈಂದಾಳ್ತಿಗೆ ಬಾಳೆಹಣ್ಣು, ಚೈಯ್ ಹರಕೆಯಾಗಿ ಅರ್ಪಿಸುತ್ತಾರೆ. ಜೋಗಿ ಪುರುಷನಿಗೆ ನವಿಲುಗರಿಯಿಂದ ಅಲಂಕಾರ ಮಾಡಿ ಭಂಗಿಯನ್ನು ಕೊಡುವ ಕ್ರಮ ಇದ್ದಿತ್ತು. ಈಗ ಹಸಿಹೆಸರನ್ನು ಅರ್ಪಿಸುತ್ತಾರೆ. ಕಳಿನಚಿಕ್ಕನಿಗೆ ಪ್ರಿಯವಾದ ಕಳ್ಳು, ಕೋಳಿ ಮುಂತಾದವುಗಳನ್ನು ಹಿಂದೆ ಅರ್ಪಿಸುತ್ತಿದ್ದರು.

ಇತ್ತೀಚಿನ ದಿನಗಳಲ್ಲಿ ಆಚರಣೆಗಳು ಶಿಷ್ಟಗೊಳ್ಳುತ್ತಿದೆ. ಹಾಲ್ಹಬ್ಬದ ನಂತರದಲ್ಲಿ ಕೋಳಿ ಕುರಿಗಳ ಬಲಿ ನಡೆಯುತ್ತದೆ. ಮಾಂಕಾಳಿ ಮತ್ತು ಶಿವರಾಯನಿಗೆ ಮಾಂಸದ ನೈವೇದ್ಯವಾದರೆ, ಬೊಬ್ಬರ್ಯ ಮತ್ತು ಪಂಜುರ್ಲಿಗೆ ಕಡುಬಿನ ನೈವೇದ್ಯ ಮಾಡುತ್ತಾರೆ. ಪಂಜುರ್ಲಿಗೆ ಮಾಡುವ ಕಡಬಿನ ನೈವೇದ್ಯಕ್ಕೆ ಗುರಿಪೂಜೆ[೫೭] ಎಂದು ಹೆಸರು. ಹಾಲ್ಹಬ್ಬದ ದಿನ ಎಲ್ಲಾ ದೈವಗಳ ಲೀಲೆ ನಡೆಯುತ್ತದೆ. ಆ ದಿನ ರಾತ್ರಿ ಗೆಂಡದಸೇವೆ ನಡೆಯುತ್ತದೆ. ಹೆಂಗಸರು ಮಕ್ಕಳೊಂದಿಗೆ ಗರಡಿಗೆ ಆಗಮಿಸಿ ಗೆಂಡತುಳಿದು ಹರಕೆಯನ್ನು ತೀರಿಸುತ್ತಾರೆ.

ಗೆಂಡದ ಆಚಾರಿ ಗರಡಿಯ ಎದುರುಗಡೆ ಗೆಂಡದ ಹೊಂಡವನ್ನು ಸಿದ್ಧಮಾಡಿ ಅದರಲ್ಲಿ ಕಟ್ಟಿಗೆ ರಾಶಿಹಾಕಿ ಬೆಂಕಿ ಮಾಡುತ್ತಾನೆ. ಗೆಂಡದ ಹೊಂಡಕ್ಕೆ ಗರಡಿಯ ಪ್ರಧಾನ ದೈವದ ನಂದಿಯ ಮೋಡದಲ್ಲಿ ಉರಿಯುವ ಹಣತೆಯಿಂದ ಬೆಂಕಿಯನ್ನು ವಾದ್ಯಮೇಳದೊಂದಿಗೆ ತಂದು ಗೆಂಡದ ಹೊಂಡಕ್ಕೆ ಬೆಂಕಿ ಹಾಕುತ್ತಾರೆ. ಬೆಂಕಿ ಕೆನ್ನಾಲಿಗೆಯನ್ನು ಚಾಚುತ್ತಿದ್ದಂತೆ, ನಂದಿ ಪಾತ್ರಿಯ ಮೇಲೆ ಆವಾಹನೆಗೊಂಡು ಗೆಂಡದ ಹೊಂಡಕ್ಕೆ ಹಾರುತ್ತದೆ. ಅನಂತರದಲ್ಲಿ ಹರಕೆ ಒಪ್ಪಿಸುವವರು ದೈವದ ಅಪ್ಪಣೆ ಪಡೆದು ಗೆಂಡದ ಆಚಾರಿಗೆ ಅಕ್ಕಿ, ಕಾಯಿ, ವೀಳ್ಯದೆಲೆ ಮರ್ಯಾದೆ ಕೊಟ್ಟು ಗೆಂಡ ತುಳಿಯುತ್ತಾರೆ. ಗೆಂಡದ ಹೊಂಡಕ್ಕೆ ಹೆಂಗಸರು ಮಾತ್ರ ಹಾರಬಹುದು, ಗಂಡಸರಿಗೆ ಅವಕಾಶ ಇಲ್ಲ[೫೮] ಗೆಂಡ ತುಳಿಯುವವರು ಎರಡು ಮೂರು ದಿನ ಮದ್ಯ, ಮಾಂಸ, ಮೈಥುನಗಳಿಂದ ದೂರವಿದ್ದು ಶುದ್ಧಾಚಾರದಲ್ಲಿರಬೇಕು. ಗೆಂಡ ತುಳಿಯುವ ದಿನ ಫಲಾಹಾರ ಮಾತ್ರ ಸೇವಿಸಬೇಕು. ಆ ದಿನ ರಾತ್ರಿ ದೈವಸ್ಥಾನದ ವತಿಯಿಂದ ಪ್ರಸಾದ ಊಟದ ವ್ಯವಸ್ಥೆ ನಡೆಯುತ್ತದೆ. ಮರುದಿನ ಬೆಳಿಗ್ಗೆಯಿಂದಲೇ ಎಲ್ಲಾ ದೈವಗಳ ದರ್ಶನ ಮತ್ತು ಕಟಕಟೆ ಸೇವೆ(ಕಟ್ಟುಕಟ್ಟಲೆ ಸೇವೆ) ನಡೆಯುತ್ತದೆ. ನಂಬಿದ ಕುಟುಂಬ ಕಟಕಟೆಯಲ್ಲಿ ತಮ್ಮ ಕುಲದೈವಕ್ಕೆ ಹೂ ಅರ್ಪಿಸಿ, ನೀರು ಹಾಕಿಸಿಕೊಳ್ಳುತ್ತಾರೆ[೫೯]. ಬಸರೂರಿನ ಗರಡಿಯಲ್ಲಿ ಎಲ್ಲರೂ ಒಂದೇ ಗೆಂಡದಹೊಂಡಕ್ಕೆ ಹಾರಿ ಹರಕೆ ಅರ್ಪಿಸುತ್ತಾರೆ.

ಈ ಅಧ್ಯಾಯದಲ್ಲಿ ಬಸರೂರಿನ ದೇವಸ್ಥಾನಗಳು ಮತ್ತು ದೈವಗಳ ಬಗೆಗಿನ ಆಚರಣೆಗಳಾದ ಕುರಿಪೂಜೆ, ಹರಿವಾಣನೈವೇದ್ಯ, ಮಾರಿಹಬ್ಬ, ಗೆಂಡಸೇವೆ, ದಕ್ಕೆ ಬಲಿಯ ಧಾರ್ಮಿಕ ಮತ್ತು ಸಾಂಸ್ಕೃತಿಕ ಮುಖಗಳನ್ನು ಅಧ್ಯಾಯದಲ್ಲಿ ಪರಿಚಯಿಸಿದೆ.

## ೭.೩. ದೇವಾಲಯ ಸಂಬಂಧಿ ಆಚರಣೆ

ಬಸರೂರು ಧರ್ಮಪಟ್ಟಣ. ಬಸರೂರಿನ ಕೇರಿಕೇರಿಗಳಲ್ಲಿ ವಿವಿಧ ಧರ್ಮದವರ ಆಗಮೋಕ್ತ, ಪುರಾಣೋಕ್ತ ದೇವಾಲಯಗಳಿವೆ. ಶ್ರೀಮಹೋತೋಭಾರ ಮಹಾಲಿಂಗೇಶ್ವರ ದೇವಾಲಯ,ಶ್ರೀಮಹಾಲಸ ನಾರಾಯಣಿ ದೇವಾಲಯ, ಶ್ರೀಶಾಂತೇರಿ ಕಾಮಾಕ್ಷಿ

ದೇವಾಲಯ, ಶ್ರೀ ಪಡುವಕೇರಿ ತಿರುಮಲ ವೆಂಕಟರಮಣ ದೇವಾಲಯ, ತುಳುವೇಶ್ವರ ದೇವಾಲಯ,ಶ್ರೀಉಮಾಮಹೇಶ್ವರ ದೇವಾಲಯ,ಶ್ರೀಲಕ್ಷ್ಮೀದಾಮೋದರ ದೇವಾಲಯ,ತೆಂಕುಬಾಗಿಲುಶ್ರೀರಾಮಚಂದ್ರ ದೇವಾಲಯ, ಶ್ರೀ ಪೇಟೆ ಆಂಜನೇಯ ದೇವಾಲಯ,ಕೋಟೆ ಆಂಜನೇಯ ದೇವಾಲಯ,ಹಲರಕೆರೆ ಶ್ರೀವೀರಭದ್ರ ದೇವಾಲಯ, ಮೂಡ್ಕೇರಿ ಆದಿನಾಥೇಶ್ವರ ದೇವಾಲಯ ,ಮೂಡ್ಕೇರಿ ಶ್ರೀ ರಾಮಚಂದ್ರ ದೇವಾಲಯ, ಮೂಡ್ಕೇರಿ ಕಾಶಿ ಮಠ,ಮೂಡ್ಕೇರಿ ಶ್ರೀ ವಿಜಯ ವಿಠಲ ದೇವಾಲಯ, ಮೂಡ್ಕೇರಿ ಶ್ರೀಲಕ್ಷ್ಮೀನಾರಾಯಣ ದೇವಾಲಯ,ಮೂಡ್ಕೇರಿಶ್ರೀವೆಂಕಟರಮಣ ದೇವಾಲಯ, ಶ್ರೀಗೋಕರ್ಣಮಠಗಳಿದ್ದು ವಿವಿಧ ಧಾರ್ಮಿಕ ಕಾರ್ಯಕ್ರಮಗಳು ನಡೆಯುತ್ತಿರುತ್ತದೆ. ಈ ಅಧ್ಯಾಯದಲ್ಲಿ ಬಸರೂರಿನ ಧಾರ್ಮಿಕ ಆಚರಣೆಯ ಕೇಂದ್ರ ಸ್ಥಾನವಾದ ಶ್ರೀಮಹಾಲಿಂಗೇಶ್ವರ ದೇವಾಲಯದಲ್ಲಿ ನಡೆಯುವ ಯುಗಾದಿಫಲ, ಗೌರಿಹಬ್ಬ ,ಕೇದಾರನಾಥೇಶ್ವರ, ಶಂಕರಗಂಡ, ಎಳೆಗೌರಿ, ಓಕಳಿ, ನವರಾತ್ರಿ, ದೀಪೋತ್ಸವ, ರಥೋತ್ಸವ, ಕಡುಬಿನಕಾಳಗ ಮುಂತಾದ ಧಾರ್ಮಿಕ ಆಚರಣೆಗಳನ್ನು ವಿವೇಚಿಸಲಾಗಿದೆ.

೭.೩.೧.ಯುಗಾದಿ ಫಲ

ಬಸರೂರಿನ ಮಹಾಲಿಂಗೇಶ್ವರ ದೇವಾಲಯದಲ್ಲಿ ಯುಗಾದಿದಿನ ಪಂಚಾಂಗ ಶ್ರವಣವಿರುತ್ತದೆ. ಆದಿನ ಬೆಳಿಗ್ಗೆ ಒಳಗಿನ ವಾಲಗ ಮಂಟಪದಲ್ಲಿ ಬಲಿಮೂರ್ತಿಯ ಮುಂದೆ ಕುಳಿತು ತಂತ್ರಿಗಳು ಮುಂದಿನ ವರ್ಷದ ಭವಿಷ್ಯವನ್ನು ತಿಳಿಸುತ್ತಾರೆ. ಬಸರೂರು ಗ್ರಾಮದ ಜನ ಅಲ್ಲಿ ಸೇರುತ್ತಾರೆ. ಮಳೆ, ಬೆಳೆ, ಸುಖ, ಕಷ್ಟದ ಬಗ್ಗೆ ಭವಿಷ್ಯ ನುಡಿಯುತ್ತಾರೆ. ಯುಗಾದಿ ಫಲ ಓದುವ ದಿನ ಮಹಾಲಿಂಗೇಶ್ವರನಿಗೆ ವಸಂತ ಮಾಡುತ್ತಾರೆ. ದೇವರಿಗೆ ಅರ್ಪಿಸಿದ ಪನಿವಾರವನ್ನು ಯುಗಾದಿಫಲ ಕೇಳಲು ಬಂದವರಿಗೆ ಹಂಚುತ್ತಾರೆ.

೭.೩.೨.ಗೌರಿಹಬ್ಬ

ಭಾದ್ರಪದ ಮಾಸದಲ್ಲಿ ಶ್ರೀಮಹಾಲಿಂಗೇಶ್ವರ ದೇವಾಲಯದ ಹೊರಮಂಟಪದಲ್ಲಿ ಗೌರಿಪೂಜೆ ನಡೆಯುತ್ತದೆ. ದೇವಾಲಯದಲ್ಲಿದ್ದ ಗೌರಿಯ ಮರದ ಮುಂಡಕ್ಕೆ ಬಸರೂರಿನ ಗುಡಿಗಾರರು ಮಣ್ಣಿನ ರುಂಡಮಾಡಿ ತಂದು ಜೋಡಿಸುತ್ತಾರೆ. ಎರಡು ದಿನ ಪೂಜೆ ಮುಗಿದು, ಮಂಗಳಾರತಿ ನಡೆದು ಬಳಿಕ ಗೌರಿಯ ಮುಂಡದಿಂದ ರುಂಡವನ್ನು ಬೇರ್ಪಡಿಸಿ ಮರದ ಪಲ್ಲಕ್ಕಿಯಲ್ಲಿಟ್ಟು ಮೆರವಣಿಗೆ ಹೊರಡಿಸುತ್ತಾರೆ. ಗೌರಿಯ ಮುಂಡದ ಎದುರುಗಡೆ ದೇವಾಲಯದ ಚಾವಡಿಗಣಪತಿ, ಗೌರಮ್ಮನಗಣಪತಿಯನ್ನು ಇಟ್ಟು ತಾಯಿ ಮಗನ ಮೆರವಣಿಗೆ ಹೊರಡಿಸುತ್ತಾರೆ. ಈ ಮೆರವಣಿಗೆಯ ಹಿಂದೆ ದೇವಾಲಯದ ಕಟ್ಟುಕಟ್ಟಲೆ ಮನೆಯವರ(ಹರಿಕಾರ ಮತ್ತು ಮಣಿಗಾರ) ಗಣಪತಿಯನ್ನು ವಿಸರ್ಜನೆಗೆ ತರುತ್ತಾರೆ. ಗಣಪತಿಯನ್ನು ಹೊತ್ತವರು ರಾಹುತಕೇರಿಯ ಮೂಲಕ ಶ್ರೀತಿರುಮಲವೆಂಕಟರಮಣ

ದೇವಾಲಯದವರೆಗೆ ಮೆರವಣಿಗೆಯಲ್ಲಿ ಬರುತ್ತಾರೆ. ಗಣಪತಿ ವಿಗ್ರಹವನ್ನು ಚಂದ್ರಪುಷ್ಕರಣಿ ಎಂದು ಕರೆಯುವ ದೇವರ ಕೆರೆಯಲ್ಲಿ ವಿಸರ್ಜನೆ ಮಾಡುತ್ತಾರೆ.

ಗೌರಿಯ ರುಂಡವನ್ನು ಹೊತ್ತ ಪಲ್ಲಕ್ಕಿ ಪುರಾಣಿಕರ ಮನೆಯ ಮುಂದಿನಿಂದ ಗುಪ್ಪೆಹಾಡಿಯ ಆರಂಭದವರೆಗೆ ಹೋಗಿ, ಹಿಂತಿರುಗಿ ಶ್ರೀಚೆನ್ನಕೇಶವ ದೇವಾಲಯದ ಬದಿಯಿಂದ ಅಗ್ರಹಾರ ಕೇರಿಗೆ ಬರುತ್ತದೆ. ಪ್ರತಿ ಬ್ರಾಹ್ಮಣರ ಮನೆಯಲ್ಲಿ ಮಹಿಳೆಯರು ಗೌರಿಯ ಹಣೆಗೆ ಕುಂಕುಮ, ಮುಖಕ್ಕೆಅರಸಿನ ಹಚ್ಚುತ್ತಾರೆ. ಪಲ್ಲಕ್ಕಿಯಲ್ಲಿ ಕಪ್ಪುಬಳೆ, ರವಕೆಕಣ, ವೀಳ್ಯದೆಲೆ, ಎರಡುಕಾಯಿ ಇಟ್ಟು ಮಡಿಲು ತುಂಬಿ ಆರತಿ ಬೆಳಗುತ್ತಾರೆ. ಕೆಳಅಗ್ರಹಾರದ ಮೂಲಕ ಶ್ರೀಮಹಾಲಿಂಗೇಶ್ವರ ದೇವಾಲಯದ ತೆಂಕುಬಾಗಿಲಿನಿಂದ ಒಳಪ್ರವೇಶಿಸಿ, ದೇವಾಲಯದ ಹೊರಪೌಳಿಯ ಮೂಲಕ ದೇವಾಲಯಕ್ಕೆ ಸುತ್ತುವರಿದು, ಮಂಡಿಕೇರಿಯ ಮೂಲಕ ವಾರಾಹಿ ನದಿಯ ತೀರಕ್ಕೆ ಬಂದು ಅಲ್ಲಿ ಮೂರು ಸುತ್ತುಹೊಳೆ ಆಯನ ನಡೆಸುತ್ತಾರೆ. ಗೌರಿರುಂಡದ ಜೊತೆಗೆ ದೇವಾಲಯದ ಗಣೇಶನ ವಿಸರ್ಜನೆ ನಡೆಯುತ್ತದೆ. ಪುನಃ ಅಲ್ಲಿಯೇ ನೀರಿನಲ್ಲಿ ಮುಳುಗಿ ಮರಳನ್ನು ತಂದು ಪಲ್ಲಕ್ಕಿಯಲ್ಲಿಟ್ಟು ಮೆರವಣಿಗೆಯ ಮೂಲಕ ದೇವಾಲಯಕ್ಕೆ ತರುತ್ತಾರೆ. ಗೌರಿಯ ಮುಂಡದ ಪಕ್ಕದಲ್ಲಿ ಎಳೆಗೌರಿಯನ್ನು ಸ್ಥಾಪಿಸುತ್ತಾರೆ. ಪಕ್ಕದಲ್ಲಿ ಕೇದಾರನಾಥನನ್ನು ಸ್ಥಾಪಿಸುತ್ತಾರೆ. ಮರುದಿನದಿಂದ ಜೇಷ್ಠಗೌರಿ, ಧಾನ್ಯಶಂಕರ, ಎಳೆಗೌರಿ ಮತ್ತು ಗೌರಿಮುಂಡದ ಪೂಜೆ ನಡೆಯುತ್ತದೆ. ಬಸರೂರಿನಲ್ಲಿ ಸೋಮವಾರ, ಮಂಗಳವಾರ, ಶುಕ್ರವಾರ ಗೌರಿ ವಿಸರ್ಜನೆ ಮಾಡುವುದಿಲ್ಲ. ಬಸರೂರು ಮಾಗಣೆಯಲ್ಲದೆ ಬೇರೆಬೇರೆ ಮಾಗಣೆಯ ಜನರು ಇಲ್ಲಿಗೆ ಬಂದು ಕನ್ನಿಕೆ ಎಳೆಗೌರಿಗೆ ಬಾಗಿನ ನೀಡುತ್ತಾರೆ. ಎಳೆಗೌರಿ ವ್ರತಕ್ಕೂ ಒಂದೊಂದು ಬಗೆಯ ಅರಳೆಎಳೆ ನೀಡುತ್ತಾರೆ. ಎಳೆಗೌರಿಯ ಸ್ಥಾಪನೆಯ ದಿನ ರಾತ್ರಿ ದೇವರಿಗೆ ಹತ್ತಿಯೇರಿಸಿ ಪ್ರಸಾದ ರೂಪದ ಹತ್ತಿಯಿಂದ ಎಳೆ ತಯಾರಿಸುತ್ತಾರೆ. ವ್ರತ ಹಿಡಿದವರು ಅರಳೆಎಳೆಯನ್ನು ಕೈಗೆ ಕಟ್ಟಿಕೊಂಡು ವ್ರತಾಚರಣೆ ಮಾಡುತ್ತಾರೆ. ಬ್ರಾಹ್ಮಣೇತರರು ಹಣ್ಣು ಕಾಯಿಯನ್ನು ಮಾಡಿಸಿಕೊಂಡು ಹೋಗುತ್ತಾರೆ. ಈ ವ್ರತಾಚರಣೆ ಬ್ರಾಹ್ಮಣರಿಗೆ ಮಾತ್ರ. ಧಾನ್ಯಶಂಕರ ವ್ರತವನ್ನು ಅವೈದಿಕರು ಶಂಕರಗಂಡವ್ರತ ಎಂದು ಕರೆಯುತ್ತಾರೆ.(ಚಿತ್ರ ೧೭)

೭.೩.೩.ದೀಪೋತ್ಸವ

ಬಸರೂರಿನ ದೀಪೋತ್ಸವವು ಕಾರ್ತಿಕ ಮಾಸದಲ್ಲಿ ಜರಗುತ್ತದೆ. ದೀಪೋತ್ಸವದ ದಿನ ಮಧ್ಯಾಹ್ನ ಶ್ರೀಮಹಾಲಿಂಗೇಶ್ವರನಿಗೆ ನವಕಲಶ ಹೋಮ ನಡೆಯುತ್ತದೆ. ರಾತ್ರಿ ದೀವಟಗೆ ಬೆಳಕಲ್ಲಿ ದೇವಾಲಯದ ಪಂಚಾಯತನ[೬] ದೇವರಿಗೆಲ್ಲ ಆರತಿ ನಡೆಯುತ್ತದೆ. ಅನಂತರ ಗಣಪತಿ ಮತ್ತು ದೇವಿಯ ಗುಡಿಗಳ ಮುಂದೆ ರಂಗಪೂಜೆ ನಡೆಯುತ್ತದೆ. ಈ ಗುಡಿಯ ಮುಂದೆ ಮಡಿ ಬಟ್ಟೆಹಾಸಿ ಈಶ್ವರನಿಗೆ ಐವತ್ತನಾಲ್ಕು ಎಡೆ, ದೇವಿಗೆ

ಹನ್ನೆರಡು ಎಡೆ, ಗಣಪತಿಗೆ ಒಂಬತ್ತು ಎಡೆ ಹಾಕಿ ಅಗಳು, ಉದ್ದಿನವಡೆ, ಬಾಳೆಹಣ್ಣು, ಎಲೆ ಅಡಿಕೆಯನ್ನು ಇಟ್ಟು ಸತ್ಕರಿಸುತ್ತಾರೆ. ಶ್ರೀಮಹಾಲಿಂಗೇಶ್ವರನ ಸನ್ನಿಧಿಯಿಂದ ಕೈಬೆಳಕನ್ನು ಹೊತ್ತಿಸಿಕೊಂಡು ಬಂದು ದೇವಾಲಯದಲ್ಲಿರುವ ವಿವಿಧ ದೀಪಗಳನ್ನು ಹೊತ್ತಿಸುತ್ತಾರೆ.(ಚಿತ್ರ ೧೮)

ಒಳಸುತ್ತಿನ ಹೊರಸುತ್ತಿನ ದೀಪಗಳೆಲ್ಲ ಹೊತ್ತಿಸಿದ ಬಳಿಕ ದೇವರ ಉತ್ಸವ ಆರಂಭವಾಗುತ್ತದೆ. ಶ್ರೀಮಹಾಲಿಂಗೇಶ್ವರನು ದೇವಾಲಯದಿಂದ ಪಲ್ಲಕ್ಕಿಯಲ್ಲಿ ಹೊರಹೊರಟು ಓಲಗಮಂಟಪದ ಎದುಗಡೆ ಬಂದ ಕೂಡಲೆ ಸೆಟ್ಟಿಗಾರರು ಕೊಟ್ಟ ಮಡಿಬಟ್ಟೆಗೆ ಮಡಿವಾಳರು ಎಣ್ಣೆ ಸುರಿದಿಟ್ಟಿರುತ್ತಾರೆ. ಮೊಗವೀರರು ದೇವರ ಪಲ್ಲಕ್ಕಿಯ ಮುಂದೆ ಸುಡುತ್ತಾರೆ. ಇದನ್ನು ಪರ್ಕಳಿ[೧] ಸುಡುವುದೆಂದು ಹೇಳುತ್ತಾರೆ. ದೇವಾಲಯದಿಂದ ಹೊರ ಹೊರಟ ದೇವರನ್ನು ರಾಹುತಕೇರಿಯ ಮಾರ್ಗದ ಮೂಲಕ ಶ್ರೀತಿರುಮಲ ವೆಂಕಟರಮಣ ದೇವಾಲಯದ ಕಟ್ಟೆಗೆ ತರುತ್ತಾರೆ. ಕಟ್ಟೆಯಲ್ಲಿ ದೇವರನ್ನು ಕೂರಿಸಿ ಮಂಗಳಾರತಿ ಮಾಡುತ್ತಾರೆ. ಮೊಗವೀರರು ದೇವರಕೆರೆಯಲ್ಲಿ ಸಂಗಡ ಕಟ್ಟಿ ದೇವರ ಕೆರೆಆಯನಕ್ಕೆ ಸಿದ್ಧತೆ ಮಾಡಿರುತ್ತಾರೆ. ಮೂರು ಸುತ್ತು ಕೆರೆಆಯನದ ಬಳಿಕ ದೇವರಕೆರೆಯ ಸುತ್ತಿನ ಅಗ್ರಹಾರದ ಬ್ರಾಹ್ಮಣರ ಮನೆಗಳಿಂದ ದೇವರಿಗೆ ಸೇವೆ ನಡೆಯುತ್ತದೆ. ಈ ಸಂದರ್ಭದಲ್ಲಿ ದೇವರ ದೀವಟಿಗೆಯಿಂದ ದೀಪ ಹಚ್ಚಿ ಆರತಿ ಬೆಳಗದೆ ಅಗ್ರಹಾರ ಬ್ರಾಹ್ಮಣರ ಮನೆಯಲ್ಲಿ ಹಚ್ಚಿಟ್ಟ ದೀಪದಿಂದ ಆರತಿ ಹೊತ್ತಿಸಿ ಬೆಳಗಿಸುತ್ತಾರೆ. ಕಟ್ಟು ಕಟ್ಟಲೆ ಸೇವೆ ಮುಗಿದ ಕೂಡಲೇ ಹಲರಕೆರೆಯ ಮಾರ್ಗದಲ್ಲಿ ಮೆರವಣಿಗೆ ಬಂದು ತೆಂಕುಬಾಗಿಲಿನ ಮೂಲಕ ದೇವಾಲಯನ್ನು ಪ್ರವೇಶಿಸುತ್ತಾರೆ. ದೇವಾಲಯವನ್ನು ಪ್ರವೇಶಿಸಿದ ದೇವರಿಗೆ ಬಾಗಿಲಲ್ಲೆ ಪೂಜೆ ನಡೆದು ದೀಪೋತ್ಸವ ಮುಗಿಯುತ್ತದೆ.

### ೭.೩.೪.ರಥೋತ್ಸವ

ಬಸರೂರಿನ ಶ್ರೀಮಹತೋಭಾರ ಮಹಾಲಿಂಗೇಶ್ವರ ದೇವಾಲಯದಲ್ಲಿ ರಥೋತ್ಸವವು ವರ್ಷದ ಆರಂಭದಲ್ಲಿ ಬರುತ್ತದೆ. ಚೈತ್ರ ಶುದ್ಧನವಮಿಯಿಂದ ಹುಣ್ಣಿಮೆಯವರೆಗೆ ಹತ್ತು ದಿನಗಳವರೆಗೆ ಈ ಉತ್ಸವ ನಡೆಯುತ್ತದೆ. ಒಂದನೆಯ ದಿನ ಮಯೂರರೋಹಣ , ಎರಡನೆಯ ದಿನ ಪನ್ನಗರೋಹಣ, ಮೂರನೆಯ ದಿನ ವೃಷಭರೋಹಣ, ನಾಲ್ಕನೆಯ ದಿನ ಕುಂಜರಾರೋಹಣ, ಐದನೆಯ ದಿನ ಅಶ್ವಾರೋಹಣ, ಆರನೆಯ ದಿನ ಸಿಂಹರೋಹಣ,ಹೂವಿನ ತೇರು, ಎಳನೆಯ ದಿನ ರಥೋತ್ಸವ, ಎಂಟನೆಯ ದಿನ ಓಕುಳಿ ಅವಭೃತಸ್ನಾನ, ಒಂಬತ್ತನೆಯ ದಿನ ಕೆರೆತೇರು. ಕೆರೆತೇರಿನ ದಿನ ರಾತ್ರಿ ಮಣಿಗಾರರ ಕಟ್ಟೆ ವಸಂತ ಮುಗಿದ ಬಳಿಕ ಮೂರು ಸುತ್ತು ಕೆರೆ ಆಯನ. ಆ ಬಳಿಕ ಪಲ್ಲಕ್ಕಿಯಲ್ಲಿರುವ ಶ್ರೀಮಹಾಲಿಂಗೇಶ್ವರನು ಪಲ್ಲಕ್ಕಿಯಿಂದ ಇಳಿದು ವಾಹನರೂಢನಾಗಿ ಅಗ್ರಹಾರ ಕೇರಿಯ

ಮೂಲಕ ದೇವಾಲಯವನ್ನು ಸೇರುತ್ತಾನೆ. ದೇವಾಲಯದಲ್ಲಿ ಬಲಿ ಮುಗಿದ ಮೇಲೆ ಪುನಃ ನಗರೋತ್ಸವ. ರಥೋತ್ಸವದ ಹತ್ತು ದಿನಗಳ ಕಾಲ ಬಲಿಮೂರ್ತಿಗೆ ಅಲಂಕಾರ ಮಾಡಿ ಕಂಕಣಕಟ್ಟಿ ಉತ್ಸವಮೂರ್ತಿಯಾಗಿಸುತ್ತಾರೆ.

ಮೊದಲದಿನ, ರಾಮನವಮಿಯಂದು ಮಧ್ಯಾಹ್ನ ವಾರಾಹಿ ನದಿಯಿಂದ ಮರಳು ತಂದು ನವಧಾನ್ಯಗಳನ್ನು ಬಿತ್ತಿ ಅಂಕುರಾರ್ಪಣೆ, ತಂತ್ರಿಗಳಿಂದ ಪಂಚಾಂಗ ಶ್ರವಣ, ನಾಂದಿ, ನಾಪಿತಮರ್ಯಾದೆ, ಕಂಕಣಕಟ್ಟುವುದು,[೨] ಧ್ವಜಕಟ್ಟೆಪೂಜೆ, ಧ್ವಜಕಟ್ಟೆಬಲಿ, ನವಗ್ರಹದಾನ, ವಾಸ್ತುಪೂಜೆ, ಭೇರಿಪೂಜೆ, ಓಕುಳಿ ಹೊಂಡದ ಪೂಜೆ, ರಾಕ್ಷೋಘ್ನಹೋಮ, ಹಲಗಪೂಜೆ ಅನಂತರದಲ್ಲಿ ಗರನಕಟ್ಟುವ ಕ್ರೀಯೆ ನಡೆಯುತ್ತದೆ. ಪ್ರತಿದಿನ ರಾತ್ರಿ ಮಹಾಪೂಜೆಯ ಬಳಿಕ ಮೂರುಸುತ್ತಿನ ಬಲಿ, ಪಾಲ್ಕಿ ಉತ್ಸವ, ಅಷ್ಟಾವಧಾನ ಸೇವೆ ನಡೆಯುತ್ತದೆ. ಅನಂತರ ಮಹಾಲಿಂಗೇಶ್ವರ ಮಯೂರರೋಹಣನಾಗಿ ಶ್ರೀವೆಂಕಟರಮಣ ದೇವಾಲಯದ ಕಟ್ಟೆ, ಹಲವರಿಕಟ್ಟೆ, ಗುಡಿಗಾರರಕಟ್ಟೆ ಮತ್ತು ಕೊಳ್ಕರೆಕಟ್ಟೆಗೆ ಹೋಗಿ ಅಲ್ಲಿ ಕಟ್ಟೆವಸಂತ. ಮೊದಲ ದಿನ ವೆಂಕಟರಮಣ ದೇವಾಲಯದಲ್ಲಿ ಸಲಾಂಮಂಗಳಾರತಿ[೨೩] ನಡೆಯುತ್ತದೆ.

ಪ್ರತಿದಿನ ಕಟ್ಟೆ ಸವಾರಿ ಹೋಗಿ ವಾಪಾಸ್ಸು ದೇವಾಲಯಕ್ಕೆ ಪ್ರವೇಶಿಸಿದ ಆನಂತರದಲ್ಲಿ ಆರತಿ ಪ್ರಸಾದ ವಿತರಣೆ ನಡೆಯುತ್ತದೆ. ಕಂಕಣ ಕಟ್ಟಿದವರು ಉತ್ಸವ ಮುಗಿಯುವವರೆಗೆ ತಮ್ಮ ತಮ್ಮ ಮನೆಗಳಿಗೆ ಹೋಗುವ ಹಾಗಿಲ್ಲ. ದೇವಾಲಯದ ಆವರಣದೊಳಗೆ ಅವರ ವಾಸ, ಊಟ, ನಿದ್ದೆ ಇತ್ಯಾದಿ ನಡೆಯುತ್ತದೆ. ಯಾಗ ಶಾಲೆಯ ಅಗ್ನಿ ಕುಂಡ ರಥೋತ್ಸವ ಮುಗಿಯುವವರೆಗೂ ಆರದಂತೆ ನೋಡಿಕೊಳ್ಳಲಾಗುತ್ತದೆ. ರಥೋತ್ಸವದ ಅವಧಿಯಲ್ಲಿ ದೇವರಿಗೆ ವಿಶೇಷ ಅಲಂಕಾರಿಕ ಆಭರಣ ತೊಡಿಸಿರುತ್ತಾರೆ.

ಎರಡನೆಯ ದಿನ ಕುಂಡಪೂಜೆ, ಪಂಚಾಂಗ ಶ್ರವಣ, ಅನಂತರದಲ್ಲಿ ವೆಂಕಟರಮಣ ದೇವಾಲಯದ ಬಾವಿಯಿಂದ ಅಗ್ರೋದಕ ತಂದು ದೇವರಿಗೆ ಅಭಿಷೇಕ. ಉದಯಬಲಿ, ಗಣಪತಿಪೂಜೆ ,ಅಮ್ಮನವರಪೂಜೆ, ಉತ್ಸವಮೂರ್ತಿ ಪೂಜೆ, ಕ್ಷೇತ್ರಪಾಲ ಪೂಜೆ, ಹರಿವಾಣ ನೈವೇದ್ಯ, ಮಧ್ಯಾಹ್ನ ಬಲಿ, ಸಂಜೆಯ ಬಲಿಯ ನಂತರ ಶ್ರೀಮಹಾಲಿಂಗೇಶ್ವರನಿಗೆ ದೇವಾಲಯದ ಓಲಗಮಂಟಪದಲ್ಲಿ ಸಲಾಂಮಂಗಳಾರತಿ. ಅನಂತರದಲ್ಲಿ ಪನ್ನಗರೋಹಣನಾಗಿ ಬಸದಿ ಬಾಗಿಲಿನ ಸುನ್ನಾರಿಕಟ್ಟೆಗೆ ಮಹಾಲಿಂಗೇಶ್ವರನ ಸವಾರಿ ಬಂದು ಅಲ್ಲಿ ಕಟ್ಟೆಪೂಜೆ. ಮೂರನೆಯ ದಿನ ಹಿಂದಿನ ದಿನದಂತೆ ಉದಯ ಬಲಿ, ಪ್ರಾತಃಪೂಜೆ, ಸುತ್ತು ಬಲಿ, ಯಾಗ ಮಂಟದಲ್ಲಿ ಹೋಮ, ಹರಿವಾಣನೈವೇದ್ಯ, ಸಂಜೆ ಕಟ್ಟೆ ಸವಾರಿ. ಮಂಡಿಕೇರಿಯ ನಿಲ್ಸಕಲ್‌ಕಟ್ಟೆ, ವೆಂಕಟರಾಯರ ಕಟ್ಟೆಗಳಿಗೆ ವೃಷಭವನ್ನು ಏರಿ ಶ್ರೀಮಹಾಲಿಂಗೇಶ್ವರನು ಹೊರಡುತ್ತಾನೆ. ಈ ಕಟ್ಟೆಗೆ ದೇವಾಲಯದ ಮುಕ್ತೇಶ್ವರರನ್ನು

ದೀವಟಿಗೆ, ವಾದ್ಯ ಸಮೇತ ರಾಜ ಮರ್ಯಾದೆಯಿಂದ ಕರೆತರುತ್ತಾರೆ.

ನಾಲ್ಕನೆಯ ದಿನ ಶ್ರೀ ಮಹಾಲಿಂಗೇಶ್ವರನು ಕುಂಜರಾರೋಹಣನಾಗಿ ವಿಲಾಸಕೇರಿ, ಮಂಡಿಬಾಗಿಲು ಮೂಲಕ ಚಿನಿವಾರಕಟ್ಟೆಯಲ್ಲಿ, ಸೋಮವಾರ ತೊಪ್ಪಲುಕಟ್ಟೆಯಲ್ಲಿ[೬೪] ಕಟ್ಟೆವಸಂತ ಸೇವೆ ಪಡೆಯುತ್ತಾನೆ. ಐದನೆಯ ದಿನ ಶ್ರೀಮಹಾಲಿಂಗೇಶ್ವರನು ಅಶ್ವಾರೋಹಣನಾಗಿ ಮೂಡುಕೇರಿ ತೊಪ್ಪಲುಕಟ್ಟೆ (ಶೆಟ್ಟರ ಕಟ್ಟೆ), ಅಡಿಗರ ಕಟ್ಟೆಯಲ್ಲಿ, ಕಟ್ಟೆ ವಸಂತವನ್ನು ಪಡೆಯುತ್ತಾನೆ. ಆರನೆಯ ದಿನ ಸಿಂಹವಾಹನನಾಗಿ ಹೋಗಿ ಕರಣಿಕರ ಕಟ್ಟೆ, ಹೇರಿಕುದ್ರು ಕಟ್ಟೆ, ಪುರಾಣಿಕರ ವೊಳಲು ಕಟ್ಟೆಗಳಲ್ಲಿ ಕಟ್ಟೆ ವಸಂತ. ಅದೇ ದಿನ ಹೂವಿನತೇರು[೬೫] ಉತ್ಸವ ಜರಗುತ್ತದೆ.

ಏಳನೇಯ ದಿನ ಚಿತ್ರಾ ಪೂರ್ಣಿಮೆಯ ದಿನ ರಥೋತ್ಸವ. ರಾಮನವಮಿಯ ದಿನದಿಂದ ರಥಕಟ್ಟಲು ಮೊಗವೀರರು ಆರಂಭಿಸುತ್ತಾರೆ. ಅವರಿಗೆ ರಥ ಕಟ್ಟಿದ ಮರ್ಯಾದೆಯಾಗಿ ಪಡಿಅಕ್ಕಿ ಕೊಡುತ್ತಾರೆ. ಈ ಕಾರ್ಯದಲ್ಲಿ ಬಸರೂರಿನ ಮೊಗವೀರರು, ಸೆಟ್ಟಿಕಾರರು, ಮಡಿವಾಳರು, ಮುಸಲ್ಮಾನರು ಭಾಗವಹಿಸುತ್ತಾರೆ. ಮೊಗವೀರರು ಜೋಡಿಸಿದ ರಥದ ಅವಯವಕ್ಕೆ ಸೆಟ್ಟಿಗಾರರು ಪತಾಕೆ ಜೋಡಿಸುತ್ತಾರೆ. ಮಡಿವಾಳರು ಮುಟ್ಟಿಕೊಟ್ಟ ಬಟ್ಟೆಯನ್ನು ಮುಸಲ್ಮಾನರು ಹೊದಿಸುತ್ತಾರೆ. ರಥೋತ್ಸವದ ದಿನ ಬೆಳಿಗ್ಗೆಯಿಂದಲೇ ವಿವಿಧ ಧಾರ್ಮಿಕ ಕಾರ್ಯಕ್ರಮಗಳು ಜರಗುತ್ತವೆ. ಬೆಳಿಗ್ಗೆ ಪಂಚಾಂಗ ಶ್ರವಣ, ರಥಸಿದ್ಧಿ ಹೋಮ, ಯಾಗ ಮಂಟಪದಲ್ಲಿ ಪುಣ್ಯಾಹ, ಹರಿವಾಣನೈವೇದ್ಯ, ನವಗ್ರಹ ದಾನ, ಬಲಿ, ಮಹಾಪೂಜೆ ಅನಂತರದಲ್ಲಿ ಶ್ರೀ ಮಹಾಲಿಂಗೇಶ್ವರನು ಪಾರ್ವತಿ ಸಮೇತನಾಗಿ ರಥವನ್ನು ಏರುತ್ತಾನೆ. ರಥವೇರುದಕ್ಕೆ ಮುಂಚೆ ಬಸರೂರು ಮನೆಯವರನ್ನು ವಾದ್ಯ ಸಮೇಳ ಸಮೇತ ಮರ್ಯಾದೆಯಿಂದ ಕರೆದುಕೊಂಡು ಬರುತ್ತಾರೆ. ಅವರ ಅನುಮತಿಯ ಮೇರೆಗೆ ರಥೋತ್ಸವ ನಡೆಯುತ್ತದೆ. ರಥಕ್ಕೆ ಬಲಿಯಾದ ಮೇಲೆ ಏರು ಹಗಲಿಗೆ ರಥೋತ್ಸವ ಆರಂಭವಾಗುತ್ತದೆ. ರಥವನ್ನು ದೇವಾಲಯದ ಆಗ್ನೇಯ ದಿಕ್ಕಿನಿಂದ ತೆಂಕುಬಾಗಿಲಿನವರೆಗೆ ಎಳೆದು ನಿಲ್ಲಿಸುತ್ತಾರೆ. ಶ್ರೀಮಹಾಲಿಂಗೇಶ್ವರ ರಥದಲ್ಲಿ ಉಳಿಯುತ್ತಾನೆ. ಸಂಜೆ ಇಡೀ ಮಾಗಣೆಯ ಜನ ರಥೋತ್ಸವದಲ್ಲಿ ಪಾಲ್ಗೊಂಡು ಬೈನತೇರು[೬೬] ಎಳೆಯುತ್ತಾರೆ. ದೇವಾಲಯಕ್ಕೆ ಒಂದು ಸುತ್ತು ಬಂದು ದೇವಾಲಯದ ಎದುರುಗಡೆ ರಥ ನಿಲ್ಲುತ್ತದೆ. ಆ ಹೊತ್ತಿಗೆ ವರ್ಷದ ರಥೋತ್ಸವ ಮುಗಿದಂತೆ. ಆ ದಿನ ರಾತ್ರಿ ಭೂತಬಲಿ[೬೭], ಕ್ಷೇತ್ರಪಾಲನಿಗೆ ಬಲಿ ನಡೆಯುತ್ತದೆ.

ಮರುದಿನ ಓಕುಳಿ(ಹೆಚ್ಚಿನ ವಿವರಗಳಿಗೆ ದೇವಾಲಯ ಸಂಬಂಧಿ ಆಚರಣೆಯಲ್ಲಿ ಓಕುಳಿ ಆಟ ) ಮುಗಿದ ಮೇಲೆ ನಂದಿರೋಹಣನಾದ ಶ್ರೀಮಹಾಲಿಂಗೇಶ್ವರನು ಮೂಡುಕೇರಿಯ ಮಾರ್ಗದಿಂದ ಅಗಸ್ತ್ಯತೀರ್ಥಕ್ಕೆ ಹೋಗಿ ಅಲ್ಲಿ ಅವಭೃತಸ್ನಾನ

ನಡೆಯುತ್ತದೆ. ತಂತ್ರಿಗಳು, ಉತ್ಸವಮೂರ್ತಿ ಹೊತ್ತವರು, ಹಲಗಬಾರಿಸುವವರು ದೇವರ ಅವಭೃತ ಸ್ನಾನದ ನಂತರ ಕಂಕಣ ಕಳೆಯುತ್ತಾರೆ. ಅವಭೃತ ಸ್ನಾನದ ಬಳಿಕ ಶ್ಯಾನುಭಾಗರ ಕಟ್ಟೆಯಲ್ಲಿ ಬೆಳಗಿನ ಜಾವದ ಕಟ್ಟೆವಸಂತ ನಡೆದು,ಮೂಡುಕೇರಿಯ ಮಾರ್ಗದಲ್ಲಿಯೇ ದೇವರು ಮರುಪ್ರಯಾಣ ಬೆಳೆಸುತ್ತಾನೆ. ದೇವಾಲಯಕ್ಕೆ ಮರಳಿದನಂತರ ಯಾಗ ಪೂರ್ಣಾಹುತಿ,ಅನಂತರದಲ್ಲಿ ಗರ್ನಇಳಿಸಲಾಗುತ್ತದೆ. ಅಲ್ಲಿಯು ಕೂಡಾ ನಾಟಕೀಯತೆ. ಧ್ವಜದಕಂಬದ ಮೇಲಿದ್ದ ಪತಾಕೆಯನ್ನು ಕೆಳಗಿಳಿಸಿದ ಕೂಡಲೇ ಅದು ಅಟ್ಟಿಸಿಕೊಂಡು ಬರುವುದು, ಬ್ರಾಹ್ಮಣರು ದೇವಾಲಯದ ಸುತ್ತ ಓಡುವುದು[೬೮] ಈ ಎಲ್ಲಾ ವಿದ್ಯಮಾನಗಳ ನಡುವೆ ಒಂಬತ್ತನೆಯ ದಿನದ ಕಾರ್ಯಕ್ರಮ ಮುಗಿಯುತ್ತದೆ.(ಚಿತ್ರ ೧೯)

ಹತ್ತನೆಯ ದಿನ ನಗರೋತ್ಸವ. ಪ್ರತಿ ಕೇರಿಗೂ ಶ್ರೀಮಹಾಲಿಂಗೇಶ್ವರನ ಪುನಃ ಪ್ರಯಾಣ. ನಗರೋತ್ಸವದ ದಿನ ಪ್ರತಿಯೊಬ್ಬರು ಎರಡು ಕಾಯಿಯನ್ನು ದೇವರಿಗೆ ಅರ್ಪಿಸುತ್ತಾರೆ. ಒಂದು ದೇವರ ಸೇವೆಗೆ ಇನ್ನೊಂದು ಹಬ್ಬದ ದಿನಗಳಲ್ಲಿ ಅರಿಯದೆ ಎಸಗಿದ ತಪ್ಪಿಗೆ. ನಗರೋತ್ಸವ ಮುಗಿಯುತ್ತಿದ್ದಂತೆ ಕಡುಬಿನ ಕಾಳಗ(ಹೆಚ್ಚಿನ ವಿವರಗಳಿಗೆ ದೇವಾಲಯ ಸಂಬಂಧಿ ಆಚರಣೆ ಕಡುಬಿನ ಕಾಳಗ, ನೋಡಿ).ಹತ್ತನೆಯ ದಿನ ಸಂಪ್ರೋಕ್ಷಣೆ.

೭.೩.೫.ಓಕುಳಿಆಟ

ಬಸರೂರಿನ ಶ್ರೀಮಹತೋಭಾರ ಮಹಾಲಿಂಗೇಶ್ವರ ದೇವಾಲಯದಲ್ಲಿ ಗರನಕಟ್ಟಿ ಏಳನೆಯ ದಿನಕ್ಕೆ, ಚಿತ್ರ ಹುಣ್ಣಿಮೆಯದಿನ ರಥೋತ್ಸವ ನಡೆಯುತ್ತದೆ. ರಥೋತ್ಸವದ ಮರುದಿನ ಓಕುಳಿಆಟ ನಡೆಯುತ್ತದೆ. ಓಲಗ ಮಂಟಪದ ಎದುರುಗಡೆ ಇರುವ ಬೃಹತ್ ಹೊಂಡದಲ್ಲಿ ಮೊಗವೀರರು ನೀರು ತುಂಬಿಸಿ ಇಡುತ್ತಾರೆ.

ಬಸರೂರು ಹಬ್ಬದ ಎಂಟನೆಯ ದಿನ ಬಯ್ಯನಬಲಿಯಾದ ಬಳಿಕ,ಹಲರಸೆಟ್ರು ದೇವಾಲಯದವರು ನೀಡಿದ ದೇವಕಾರಿ ಪಟ್ಟೆಯಿಂದ ಕಚ್ಚೆಹಾಕಿ ಮುಂಡಾಸು ಸುತ್ತಿ, ಅಲಂಕರಿಸಿಕೊಂಡು ಮಹಾಲಿಂಗೇಶ್ವರನ ಮಂಗಳಾರತಿ ಪಡೆದು, ದೇವರ ಕೊರಳ ಹೂ ಹಾರವನ್ನು ಹಾಕಿಕೊಂಡು ರಾಹುತ ಕೇರಿಯ ಕಟ್ಟುಕಟ್ಟಲೆ ಮನೆಯಿಂದ ತಂದ ಚಿನ್ನದ ಸರವನ್ನು ಧರಿಸಿ, ಬಂಟ ಹುರಿಯಾಳುಗಳೊಂದಿಗೆ ಹೌಂದ್ರಾಯೋ ಎಂದು ಘೋಷಣೆ ಕೂಗುತ್ತ ವಾದ್ಯಮೇಳದೊಂದಿಗೆ ಏಳು ಕೇರಿಗೆ ಒಂದು ಸುತ್ತು ಮೆರೆದು ಬರುತ್ತಾರೆ. ಕೇರಿ ಮೆರೆದ ಮೇಲೆ ಓಕುಳಿಹೊಂಡದ ಸಮೀಪದಲ್ಲಿರುವ ಹಲವರಿ ಕಟ್ಟೆಯಲ್ಲಿ ಕುಳಿತುಕೊಳ್ಳುತ್ತಾರೆ. ಕ್ಷೌರಿಕನು ಓಲೆಕೊಡೆ ಹಿಡಿದಿರುತ್ತಾನೆ.ಇವರನ್ನು ಹಿಂದೆ ಪಟ್ಟದಸೆಟ್ರ್ರ್ ಎಂದು ಕರೆಯುತ್ತಿದ್ದರು. ಹಿಂದೆ ಕೇರಿ ಮೆರೆಯಲು ಹೋದವರು, ಸೂಳೆಯರ ಮನೆಯಲ್ಲಿ ಅವಿತುಕೊಂಡಿದ್ದ ತಮ್ಮ ಜಾತಿಯ ಗಂಡಸರನ್ನು ಹೊತ್ತು ತಂದು ಓಕುಳಿ ಹೊಂಡಕ್ಕೆ ಎಸೆಯುತ್ತಿದ್ದರು(ಚಿತ್ರ ೨೦).

ಓಕುಳಿ ಹೊಂಡದ ಸುತ್ತ ಬಲಿಯಾದ ಕೂಡಲೆ ಓಲಗ ಮಂಟಪದಲ್ಲಿರುವ ಮಹಾಲಿಂಗೇಶ್ವರನಿಗೆ ಆರತಿ ಆಗುತ್ತದೆ. ಪಟ್ಟದಸೆಟ್ರ್ ಅಪ್ಪಣೆಗಾಗಿ ಕಾದಿದ್ದ ಯುವಕರು ಓಕುಳಿಹೊಂಡಕ್ಕೆ ಹಾರುತ್ತಾರೆ. ದೇವಾಡಿಗರು ಓಕುಳಿ ಹೊಂಡದ ಮೇಲೆ ಕಟ್ಟಿ ಹಗ್ಗದಿಂದ ನಿಯಂತ್ರಿಸುತ್ತಿದ್ದ ಬಾಳೆಹಣ್ಣಿನ ಕೊನೆಕೀಳಲು ಮೇಲಾಟ ನಡೆಯುತ್ತದೆ. ಕೈಗೆ ಸಿಕ್ಕಿದ ಬಾಳೆಹಣ್ಣನ್ನು ಪಡೆದು ನೀರಿಗೆ ಹಾರುತ್ತಾರೆ. ಈ ಆಟ ಗಂಟೆಗಟ್ಟಲೆ ನಡೆಯುತ್ತದೆ. ಓಕುಳಿಹೊಂಡಕ್ಕೆ ಹಾರದೇ ಅವಿತುಕೊಂಡಿದ್ದ ಬಂಟರ ಯುವಕರನ್ನು ಉಟ್ಟ ಉಡುಗೆಯಲ್ಲಿ ಹೊಂಡಕ್ಕೆ ನೂಕುತ್ತಾರೆ. ಪುನಃ ಮಂಗಳಾರತಿ ಆಗುತ್ತದೆ. ಓಕುಳಿ ಆಟ ನಿಲ್ಲುತ್ತದೆ. ಓಕುಳಿಹೊಂಡಕ್ಕೆ ಹಾರುವ ಯುವಕರು ಆ ದಿನದ ಮಟ್ಟಿಗಾದರೂ ಗೌಲು ಬಿಟ್ಟಿರುತ್ತಾರೆ. ಓಕ್ಲಿಹೊಂಡಕ್ಕೆ[೨೦] ಹಾರುವಾಗ ಹೌಂದ್ರಾ ಎಂದು ಉದ್ಗಾರ ಮಾಡುತ್ತಾರೆ. ಈ ಹೌಂದ್ರ ಎನ್ನುವುದು ಸಮುದ್ರರಾಜನನ್ನು ಕುರಿತ ಉದ್ಗಾರವಾಗಿದೆ. ಸಮುದ್ರ, ಸಂದ್ರ ಹೌಂದ್ರ್ ಆಗಿ ರೂಪ ಪರಿವರ್ತನೆಗೊಂಡಿರುತ್ತದೆ. ಓಕುಳಿ ಆಟದ ನಂತರ ಶ್ರೀ ಮಹಾಲಿಂಗೇಶ್ವರನು ಅವಭೃತ ಸ್ನಾನಕ್ಕೆ ಮೂಡುಕೇರಿಯ ಅಗಸ್ತ್ಯತೀರ್ಥಕ್ಕೆ ನಂದಿರೂಢನಾಗಿ ಹೊರಡುತ್ತಾನೆ.

ಬಸರೂರಿನ ಓಕುಳಿ ಹೊಂಡಕ್ಕೆ ಹಾರುವವರು ಹಲರು ಅಥವಾ ಬಂಟರು ಮಾತ್ರ, ಓಕುಳಿ ಹೊಂಡದ ಮೇಲೆ ನೇತಾಡುವ ಬಾಳೆಯ ಹಣ್ಣಿನ ಗೊನೆಗಾಗಿ ನಡೆಸುವ ಹೋರಾಟ,ಮೇಲಾಟ ಸಾಹಸಗಳು ರಂಜನೀಯವಾಗಿರುತ್ತದೆ.

### ೭.೩.೬.ನವರಾತ್ರಿ,ಬನ್ನಿಪೂಜೆ ಮತ್ತು ವನಭೋಜನ

ಬಸರೂರಿನ ಶ್ರೀ ಮಹಾಲಿಂಗೇಶ್ವರನ ದೇವರ ಸನ್ನಿಧಿಯಲ್ಲಿ ದುರ್ಗಾದೇವಿಗೆ ಅಶ್ವಯುಜ ಶುಕ್ಲ ಪ್ರತಿಪದೆಯಿಂದ ಮಹಾನವಮಿಯವರೆಗೆ ನವರಾತ್ರಿ ಉತ್ಸವ ಆಗಮೋಕ್ತವಾಗಿ ನಡೆಯುತ್ತದೆ. ಕ್ರಿಶ೧೫೩೧ರ ಶಾಸನವು ಈ ದೇವಿಯ ನವರಾತ್ರಿ ಉತ್ಸವಕ್ಕೆ ಮತ್ತು ಆ ದಿನಗಳ ಸುವಾಸಿನಿಯರ ಭೋಜನಕ್ಕೆ ಭೂಮಿ ಮತ್ತು ಹೊನ್ನಿನ ದಾನ ನೀಡಿದ ವಿಚಾರವನ್ನು ತಿಳಿಸುತ್ತದೆ. ಈಗಲೂ ಒಂಬತ್ತು ದಿನಗಳು ದೇವಿಗೆ ಚಂಡಿಕಾಪಾರಾಯಣ, ಸುವಾಸಿನಿಯರ ಪೂಜೆ ನಡೆಯುತ್ತದೆ. ವಿಜಯದಶಮಿಯ ದಿನ ಮಹಾಲಿಂಗೇಶ್ವರನು ತೊಪ್ಪಲು ಕಟ್ಟೆಗೆ ತೆರಳುತ್ತಾನೆ. ಶ್ರೀಮಹಾಲಿಂಗೇಶ್ವರನ ಸನ್ನಿಧಿಯಲ್ಲಿ ಬನ್ನಿ ಮರದ ಪೂಜೆ ನಡೆಯುತ್ತದೆ. ಆ ದಿನದ ಸಲಾಂಮಂಗಳಾರತಿ ಅಲ್ಲಿಯೇ ನಡೆಯುತ್ತದೆ. ಮೂಡುಕೇರಿ ಮಾರ್ಗದಲ್ಲಿ ಮರಳಿ ದೇವಾಲಯಕ್ಕೆ ಬಂದ ಮೇಲೆ ನವರಾತ್ರಿ ದೇವಿಯ ವಿಸರ್ಜನೆ. ಈ ಉತ್ಸವವು ವಿಜಯನಗರದ ಆಳ್ವಿಕೆ ಬಸರೂರಿನಲ್ಲಿ ಇದ್ದ ಮಾಹಿತಿ ನೀಡುತ್ತದೆ.

ಮಹಾಲಿಂಗೇಶ್ವರನು ಕೊಡಿ ಹಬ್ಬದ ಹಿಂದಿನ ದಿನ, ವೈಕುಂಠ ಚರ್ತುದಶಿಯಂದು ಪಲ್ಲಕ್ಕಿಯಲ್ಲಿ ಕುಳಿತು ತೊಪ್ಪಲು ಕಟ್ಟೆಗೆ ವನಭೋಜನಕ್ಕೆ ತೆರಳುತ್ತಾನೆ. ಮೂರು ತಿಂಗಳ

ಮಳೆಗಾಲ ಕಳೆದ ಬಳಿಕ ಇವನ ತಿರುಗಾಟ ಆರಂಭ. ಬೆಳಿಗ್ಗೆ ತೊಪ್ಪಲುಕಟ್ಟೆಗೆ ಹೋದವ ಪೂರ್ವಕ್ಕೆ ಮುಖಮಾಡಿ ಕುಳಿತುಕೊಳ್ಳುತ್ತಾನೆ.ಅಲ್ಲಿ ಹೋಮ.ಕುಂಬಳಕಾಯಿ ದಾನ, ನೆಲ್ಲಿಮರದ ಪೂಜೆ, ಸಾಲಿಗ್ರಾಮದ ಪೂಜೆ ನಡೆಯುತ್ತದೆ. ಅನಂತರ ಭೋಜನ. ಮಹಾಲಿಂಗೇಶ್ವರನಿಗೆ ವಡೆ, ತುಪ್ಪ, ಅನ್ನ ನೈವೇದ್ಯ. ಸಂಜೆ ದೇವಾಲಯಕ್ಕೆ ಮರಳುವಾಗ ಪಶ್ಚಿಮಕ್ಕೆ ಮುಖಮಾಡಿ ಕುಳಿತು ಹೊರಡುತ್ತಾನೆ. ಈ ಉತ್ಸವವು ಬಸರೂರು ಮತ್ತು ಕೋಟೇಶ್ವರದ ನಡುವಿನ ಧಾರ್ಮಿಕ ಸಂಬಂಧವನ್ನು ತಿಳಿಸಿಕೊಡುತ್ತದೆ.

### ೭.೩.೭.ಕಡುಬಿನ ಕಾಳಗ

ಬಸರೂರು ಹಬ್ಬವು ಗರ್ನಕಟ್ಟಿದ[೨೧] ದಿನದಿಂದ ಆರಂಭವಾಗುತ್ತದೆ. ಪ್ರತಿದಿನ ರಾತ್ರಿ ಒಂದೊಂದು ಕೇರಿ ಮತ್ತು ಕಟ್ಟೆ ಉತ್ಸವವು ಜರಗುತ್ತದೆ. ಶ್ರೀಮಹಾಲಿಂಗೇಶ್ವರ ದೇವಾಲಯದಲ್ಲಿ ಪ್ರತಿದಿವಸ ಬೈನಬಲಿ[೨೨] ಮತ್ತು ಓಡುಬಲಿ ಮುಗಿದ ಮೇಲೆ ಉತ್ಸವ ಆರಂಭವಾಗುತ್ತದೆ. ಹುಣ್ಣಿಮೆಯ ದಿನ ರಥೋತ್ಸವ. ರಥೋತ್ಸವದ ಮರುದಿನ ಓಕುಳಿ ಆಟ, ಓಕುಳಿಯ ಮರುದಿನ ಕೆರೆತೇರು, ಕೆರೆತೇರಿನ ರಾತ್ರಿ ನಗರೋತ್ಸವ, ಬೆಳಿಗ್ಗೆ ಕಡುಬಿನ ಕಾಳಗ.

ಈ ಕಡುಬಿನ ಕಾಳಗ ದೇವದಾಸಿಯರಿಗೆ ಸಂಬಂಧಿಸಿದ ಆಚರಣೆ. ನಗರೋತ್ಸವದ ಮರುದಿನ ಅವಭೃತ ಸ್ನಾನದಿಂದ ಶುದ್ಧಗೊಂಡು ಶ್ರೀಮಹಾಲಿಂಗೇಶ್ವರನು ಓಕುಳಿ ಮಂಟಪದ ಎದುರು ಓಲಗ ಮಂಟಪದಲ್ಲಿ ಬೆಳ್ಳಿಯ ತೂಗು ಮಂಚದಲ್ಲಿ ಕುಳಿತಿರುತ್ತಾನೆ. ಪಾರ್ವತಿ ದೇವಾಲಯದಿಂದ ಹೊರಬಂದು ಶಿವನ ಒಳಪ್ರವೇಶಕ್ಕೆ ತಡೆ ಒಡ್ಡುತ್ತಾಳೆ. ಶಿವ ಪಾರ್ವತಿಯರಿಗೆ ಜಗಳ ಆರಂಭವಾಗುತ್ತದೆ. ಹತ್ತು ದಿನಗಳಿಂದ ತಡವಾಗಿ ಮನೆಗೆ ಬರುತ್ತಿರುವುದು ಮತ್ತು ಶಿವನು ರಾತ್ರಿಯೆಲ್ಲಾ ಪಾರ್ವತಿಯನ್ನು ಬಿಟ್ಟು ದೇವದಾಸಿಯರ ಮನೆಗೆ ಹೋಗಿದ್ದಾನೆ ಎಂಬ ಕಾರಣ ಒಡ್ಡಿ ಶಿವನ ಮೇಲೆ ಪಾರ್ವತಿ ಮುನಿಸಿಕೊಂಡು ಜಗಳಕ್ಕೆ ನಿಲ್ಲುತ್ತಾಳೆ. ಹಿಂದೆ ಕೆಲವು ದೇವದಾಸಿಯರು ಶಿವನ ಪಕ್ಷವನ್ನು,ಕೆಲವರು ಪಾರ್ವತಿಯ ಪಕ್ಷದಲ್ಲಿ ನಿಂತು ಹೊದೆದಾಡಿಕೊಳುತ್ತಿದ್ದರಂತೆ. ಹೊಡೆದಾಟಕ್ಕೆ ಅಣಿಯಾದ ದೇವದಾಸಿಯರಿಗೆ ಕೀಳು ಶಾಂತಿಯವರು ಗಟ್ಟಿಕಡುಬನ್ನು ತಯಾರಿಸಿ ನೀಡುತ್ತಿದ್ದರು. ಪರಸ್ಪರ ಹೊಡೆದಾಡಿಕೊಂಡು ಜಗಳ ತಾರಕಕ್ಕೆ ಏರುತ್ತದೆ. ಇದನ್ನರಿತ ಶಿವನು ಪಾರ್ವತಿಗೆ ವಿವಿಧ ಆಸೆಯನ್ನು ತೋರಿಸುತ್ತಾನೆ ಆದರೂ ಪಾರ್ವತಿಯ ಮುನಿಸು ಕಡಿಮೆಯಾಗುದಿಲ್ಲ. ಕೊನೆಗೆ ಶಿವನ ಗಣಗಳು ಮಧ್ಯಸ್ಥಿಕೆ ಮಾಡಿ ಪಾರ್ವತಿಯನ್ನು ಒಲಿಸಿ ಗಂಡ ಹೆಂಡತಿಯನ್ನು ರಾಜಿ ಮಾಡಿಸುತ್ತವೆ. ಶಿವನು ಹೆಂಡತಿಗೆ ನಂದಿಯ ಮೂಲಕ ಚಿನ್ನಾಭರಣವನ್ನು ಕಳುಹಿಸಿಕೊಡುತ್ತಾನೆ.ದೇವದಾಸಿಯರ ಹೊಡೆದಾಟವು ನಿಲ್ಲುತ್ತದೆ. ಎರಡು ಪಕ್ಷದವರ ಸಂಧಾನದೊಂದಿಗೆ ಬಸರೂರುಹಬ್ಬ ಮುಗಿಯುತ್ತದೆ. ಆದರೇ ಈಗ ದೇವದಾಸಿಯರ

ಹೊಡೆದಾಟವಿಲ್ಲ. ಉಳಿದ ಕ್ರಿಯೆಗಳು ಮೊದಲಿನ ಹಾಗೆಯೇ ನಡೆಯುತ್ತದೆ.

ಕಡುಬಿನ ಕಾಳಗದಲ್ಲಿ ಸಂದರ್ಭದಲ್ಲಿ ಬಸರೂರಿನ ಜನಸಮುದಾಯ ದೇವರನ್ನು ಮಾನವ ಸಹಜವಾಗಿ ಭಾವಿಸುತ್ತಾರೆ. ಸಾಮಾನ್ಯರಂತೆ ಎರಡು ಪಕ್ಷಗಳಾಗಿ ಹೊಡೆದಾಡಿಕೊಳ್ಳುತ್ತಾರೆ. ಸಾಮಾನ್ಯ ಮಹಿಳೆಯಂತೆ ಪಾರ್ವತಿಯೂ ಗಂಡನನ್ನು ತಡೆಯುವುದು ಮತ್ತು ಚಿನ್ನದ ಆಸೆಗೆ ರಾಜಿಮಾಡಿಕೊಳ್ಳುವಂತಹ ವಿಚಾರಗಳೆಲ್ಲವೂ ಮನುಷ್ಯ ಜೀವನಕ್ಕೆ ತೀರ ಹತ್ತಿರವಾಗಿದೆ.ಈ ಬಗೆಯ ಆಚರಣೆಗಳಲ್ಲಿ ಆದರ್ಶವನ್ನು ಮೈಗೂಡಿಸಿಕೊಳ್ಳುವ ಬಸರೂರಿನವರ ಸಾಂಸ್ಕೃತಿಕಪ್ರಜ್ಞೆ ಗಮನಿಸುವಂತದ್ದಾಗಿದೆ. ದೇವದಾಸಿಯರು ದೇವರಿಗೆ ಹತ್ತಿರದವರು ಎಂಬ ಸಾಮಾಜಿಕ ಮಾನ್ಯತೆಯೂ ಇಲ್ಲಿ ಎದ್ದು ಕಾಣುತ್ತದೆ.

ಬಸರೂರಿನಲ್ಲಿ ಇಂದು ದೇವದಾಸಿ ಪದ್ಧತಿಯಿಲ್ಲ.ಆದರೆ ಈ ಬಗೆಯ ಆಚರಣೆಗಳು ಇಂದಿಗೂ ಸಾಂಕೇತಿಕವಾಗಿ ಹಾಗೆಯೇ ಉಳಿದುಕೊಂಡಿದೆ. ನಗರೋತ್ಸವ ಮುಗಿಸಿ ಬಂದವರು ಇಂದು ಕಡುಬಿನ ಬದಲು ಬಾಳೆಹಣ್ಣಿನಿಂದ ಹೊಡೆದಾಡುತ್ತಾರೆ.

ಬಸರೂರಿನ ವಾರ್ಷಿಕಾವರ್ತನ ಆಚರಣೆಗಳು ಬಸರೂರಿನ ಸಂಸ್ಕೃತಿಯನ್ನು ಅನಾವರಣಗೊಳಿಸುತ್ತದೆ. ಜೊತೆಗೆ ಈ ಆಚರಣೆಗಳ ಕುರಿತು ಒಂದಿಷ್ಟು ಅಂತರ್‌ದೃಷ್ಟಿಯನ್ನು ಬೀರುವ ಅಗತ್ಯ ಮತ್ತು ಸಾಂಸ್ಕೃತಿಕ ಅಧ್ಯಯನ ದೃಷ್ಟಿಯಿಂದ ಮಹತ್ವಪೂರ್ಣವಾಗಿದೆ. ಬಸರೂರಿನ ಕೃಷಿಆಚರಣೆಗಳು ಅವೈದಿಕ ಆಚರಣೆಗಳಾಗಿವೆ. ಆದರೆ ದೇವಾಲಯ ಸಂಬಂಧಿ ಆಚರಣೆಗಳನ್ನು ಗಮನಿಸಿದರೆ ಬಸರೂರು ಶ್ರೇಣಿಕೃತ ಜಾತಿ ವ್ಯವಸ್ಥೆಯನ್ನು ಈ ಬಗೆಯ ಆಚರಣೆಗಳ ಮೂಲಕ ಪೋಷಿಸಿಕೊಂಡು ಬಂದಂತೆ ತೋರುತ್ತಿದೆ. ನಗರೋತ್ಸವ, ರಥೋತ್ಸವ ಇಲ್ಲೆಲ್ಲಾ ಜಾತಿ ವ್ಯವಸ್ಥೆ ಕೆಲಸ ಮಾಡಿದೆ. ಕೆಳವರ್ಗದವರ ಹೆಗಲಿಗೆ ಶ್ರಮಭರಿತ ಕೆಲಸ, ಮೇಲ್ವರ್ಗದವರ ಯಜಮಾನ್ಯತನ ಎದ್ದು ಕಾಣುತ್ತದೆ. ಪೂಜೆಗೆ ಬ್ರಾಹ್ಮಣರು, ಪೂಜಾ ಪರಿಕರ ಸಿದ್ಧ ಮಾಡುವವರು ಪಾತಾಳಿಗಳು, ವಾದ್ಯ ದೇವಾಡಿಗರು, ದೀವಟಿಗೆ ಮಡಿವಾಳರು, ರಥಕಟ್ಟಲು ಮೊಗವೀರರು ಇಲ್ಲೆಲ್ಲಾ ಜಾತಿ ವ್ಯವಸ್ಥೆ ಕೆಲಸ ಮಾಡಿದೆ. ಬಸರೂರಿನ ಸಮಾಜದಲ್ಲಿ ಆರ್ಥಿಕವಾಗಿ ದುರ್ಬಲರೂ ಈ ಬಗೆಯ ಕೆಲಸದ ಮೂಲಕ ಶೋಷಣೆಗೆ ಒಳಗಾಗಿದ್ದಾರೆ. ಅದು ಅವರಿಗೆ ಆ ಕಾಲದ ದೃಷ್ಟಿಯಿಂದ ಅನಿವಾರ್ಯ ಕೂಡಾ. ಮಾರಿಮೂರ್ತಿಯನ್ನು ಹೊರುವವರು, ಬಲಿ ನೀಡುವವರೆಲ್ಲಾ ಕೆಳವರ್ಗದವರು. ಸಾಮಾನ್ಯವಾಗಿ ಅಪಾಯಗಳೆಲ್ಲವನ್ನು ಸಾಮಾಜಿಕವಾಗಿ ದುರ್ಬಲರಾಗಿರುವವರ ಮೇಲೆ ಹೇರಿಕೆ ಮಾಡುವುದು ಶ್ರೇಣಿಕೃತ ಸಮಾಜ ವ್ಯವಸ್ಥೆಯಲ್ಲಿ ಒಂದು ಸಾಮಾನ್ಯ ಸಂಗತಿಯಂತೆ ಕಾಣುತ್ತದೆ. ಮಾರಿಮುಖವಾಡವನ್ನು ಹೊತ್ತವನು ಅಗ್ರಹಾರ ಪ್ರವೇಶಿಸದೆ ಇರುವುದಕ್ಕೆ ಬೇರಾವ ಕಾರಣ ಸಿಗದಿದ್ದರೂ ಅಸ್ಪ್ರಶ್ಯತೆ ಎಂಬುದು ಎದ್ದು ಕಾಣುವ ಅಂಶವಾಗಿದೆ.

ಮಾರಿ ಹೊರಡುವ ಅನುಮತಿಯನ್ನು ಮೇಲ್ವರ್ಗದ ಪ್ರತೀಕವಾದ ರಾಯರಲ್ಲಿ ಕೇಳುವುದು, ಅಗ್ರಹಾರಕ್ಕೆ ದೇವರ ಮೆರವಣಿಗೆ ಬಂದಾಗಲೂ ದೀವಟಿಗೆಯಿಂದ ಆರತಿ ಹೊತ್ತಿಸದೆ ಇರುವುದು ಕೂಡಾ ಗಮನಿಸುವಂತದ್ದಾಗಿದೆ. ಬಸರೂರಿನ ಶಾಸನವೊಂದು ದೇವರ ಕೆರೆಯ ಅರಳಿಕಟ್ಟೆಯಲ್ಲಿ ಕುಡಿಯಲು ನೀರೆರೆಯುವ ಬ್ರಾಹ್ಮಣನಿಗೆ ದಾನನೀಡಿದ ಉದಾಹರಣೆಯನ್ನು ಗಮನಿಸಿದರೆ ಅಗ್ರಹಾರ ಕೇರಿಯಲ್ಲಿರುವ ದೇವರಕೆರೆ ಅವೈದಿಕರಿಗೆ ಪ್ರವೇಶಿಸಲು ನಿರ್ಬಂಧ ಇದ್ದಂತೆ ತೋರುತ್ತದೆ. ಇಲ್ಲಿರುವ ಕಟ್ಟೆಗಳು ಅಧಿಕಾರ, ಅಂತಸ್ತನ್ನು ಪ್ರತಿನಿಧಿಸುವ ಕಟ್ಟೆಗಳೇ ವಿನಹಃ ಸಾಮಾನ್ಯ ಜನರನ್ನು ಪ್ರತಿನಿಧಿಸುವ ಕಟ್ಟೆ ತೀರವಿರಳ. ಬಸರೂರಿನಲ್ಲಿ ಜಮೀನ್ದಾರರು ಅಧಿಕಾರಶಾಹಿಗಳು ಬ್ರಾಹ್ಮಣರು ಮತ್ತು ಬಂಟರಾಗಿದ್ದರು. ಆ ನೆಲೆಯಲ್ಲಿ ಕಟ್ಟೆಗಳು ಕೂಡಾ ಅವರದ್ದೆ ಆಗಿದೆ. ಬಸರೂರಿನ ಕಟ್ಟೆಪೂಜೆಯ ಸಂದರ್ಭದಲ್ಲಿ ಕಟ್ಟೆಯ ಯಜಮಾನರನ್ನು ವಾದ್ಯಸಮೇಳದೊಂದಿಗೆ ಕರೆದುಕೊಂಡು ಬರುವ ಕ್ರಮ ಇದೆ. ಈ ಕೆಲಸವನ್ನು ದೇವರ ಭಯದಿಂದ ಮಾಡುವರೇ ವಿನಃ ಅವರ ಪೂರ್ಣಮನಸ್ಸಿನಿಂದಲ್ಲ ಎಂಬುದು ಸ್ಪಷ್ಟವಾಗುತ್ತದೆ. ಅಧಿಕಾರ, ಸಾಮಾಜಿಕ ಅಂತಸ್ತು, ರಾಜಕಿಯ ಸ್ಥಾನಮಾನಗಳು ಕೆಲಸ ಮಾಡಿದ್ದು ಕಂಡುಬರುತ್ತದೆ. ಹಿಂದೆಲ್ಲಾ ಅರಸು ಮನೆತನದವರನ್ನು, ಬಲ್ಲಾಳರನ್ನು ಮೇನೆಗಳಲ್ಲಿ ಹೊತ್ತುತರುತ್ತಿದ್ದರು. ಕಟ್ಟೆವಸಂತದಲ್ಲಿ ನಡೆಯುವ ಅಷ್ಟವದಾನ ಪೂರ್ವಪರಂಪರೆಯನ್ನು ನೆನಪಿಸಿದರು ಅಲ್ಲಿರುವುದು ಪುನಃ ಶ್ರೇಣಿಕೃತ ವ್ಯವಸ್ಥೆಯ ಮೇಲ್ವರ್ಗದವರ ಅಂತಸ್ತು, ಸ್ಥಾನಮಾನ ಎದ್ದುಕಾಣುತ್ತದೆ. ಅವೈದಿಕರ ದೇವಸ್ಥಾನಗಳು ಕೂಡಾ ಸಾಮಾಜಿಕ ನ್ಯಾಯವನ್ನು ಒದಗಿಸಿದಂತೆ ಕಾಣುದಿಲ್ಲ. ಮೇಲ್ವರ್ಗದವರ ಅಧಿಕಾರ ಇರುವ ದೈವಸ್ಥಾನದಲ್ಲಿ ಎರಡು ಗೆಂಡದ ಹೊಂಡಗಳು ಸಾಮಾಜಿಕ ಶ್ರೇಣಿಯ ಕೆಳಹಂತದವರಿಗೆ ಮತ್ತು ಮೇಲ್ವರ್ಗದವರಿಗೆ ಪ್ರತ್ಯೇಕವಾಗಿರುತ್ತದೆ. ಮಾರಿ ಹಬ್ಬದಲ್ಲಿನ ಬಲಿಪ್ರಾಣಿಗಳ ಮಾಂಸ ವಿತರಣೆಯಲ್ಲಿ ಸಾಮಾಜಿಕ ಅಂತಸ್ತು, ಸಮುದಾಯದ ಬಾಹುಳ್ಯ ಕೆಲಸಮಾಡುವುದು ಕಂಡುಬರುತ್ತದೆ.

ಬಸರೂರಿನ ರಥೋತ್ಸವದಲ್ಲಿ ಜನಪದರು ದೇವರನ್ನು ಮಾನವ ಸಹಜವಾಗಿ ನೋಡುತ್ತಾರೆ. ದೇವರು ಕಟ್ಟೆಪೂಜೆಗೆ ಹೋಗುವ ಸಮಯದಲ್ಲಿ ಒಂದೊಂದು ದಿನವೂ ಬೇರೆಬೇರೆ ವಾಹನವನ್ನು ಏರಿ ಪ್ರಯಾಣ ಹೊರಡುತ್ತಾನೆ. ತೊಪ್ಪಲುಕಟ್ಟೆಯಂತಹ ದೂರದ ಕಟ್ಟೆಗೆ ಅಶ್ವದ ಮೇಲೆ ಕುಳಿತು ಹೋಗುವುದು, ದೇವದಾಸಿಯರ ಕೇರಿಯಲ್ಲಿ ಮಯೂರನನ್ನು ಏರಿಹೋಗುವುದು, ಕಾಡಿನಿಂದ ಆವೃತವಾಗಿದ್ದ ಪ್ರದೇಶವೆಂದು ಹೇಳುವ ಗುಪ್ಪೆಹಾಡಿ, ಆನಗಳ್ಳಿಕಟ್ಟೆಗೆ ಸಿಂಹವಾಹನವನ್ನೇರಿ ಹೋಗುವುದು. ಮಂಡಿಕೇರಿಗೆ ಆನೆಯನ್ನೇರಿ ಹೋಗುವುದು. ಇದೆಲ್ಲಾ ಜನಪದರು ದೇವರನ್ನು ಮಾನವ ಸಹಜವಾಗಿ ನೋಡುವದರಿಂದ ಹುಟ್ಟಿಕೊಂಡಿದೆ.

ಈ ಅಧ್ಯಾಯದಲ್ಲಿ, ಬಸರೂರಿನ ವಾರ್ಷಿಕಾವರ್ತನಗಳು ಬಸರೂರಿನ ಕೃಷಿ ಸಂಸ್ಕೃತಿಯನ್ನು ನೆಲೆಯನ್ನು ಗಮನದಲ್ಲಿರಿಸಿಕೊಂಡು ಹುಟ್ಟಿದ್ದಾಗಿದೆ ಎಂಬುವುದು ತಿಳಿಯುತ್ತದೆ. ಬಸರೂರಿನ ಎಲ್ಲಾ ಬಗೆಯ ಕೃಷಿ ಆಚರಣೆಗಳು ಹಗ್ಗಿನಿಂದ, ಸುಗ್ಗಿಯವರೆಗೆ ಜರಗುತ್ತದೆ. ಪ್ರತಿ ಆಚರಣೆಗಳು ಕೃಷಿ ಸಮೃದ್ಧಿಯ ಆಶಯವನ್ನು ಹೊಂದಿದೆ. ಬಸರೂರು ಕೃಷಿ ಸಂಸ್ಕೃತಿಯನ್ನು ಹೊಂದಿದ ಪ್ರದೇಶವೆಂಬುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಇಲ್ಲಿ ನಿರೂಪಿದವಾದ ದೇವಾಲಯದ ಆಚರಣೆಗಳಲ್ಲಿ ಸಾಮಾಜಿಕ ಪಾಲ್ಗೊಳ್ಳುವಿಕೆಯನ್ನು ಗಮನಿಸಲಾಗಿದೆ.

**ಕೊನೆ ಟಿಪ್ಪಣಿ**

೧. ಸ್ವಾಮಿ ಶಂಕರಗಂಡ, ಭೂಮಿ ತೂಕದಒಡೆಯ ನೆಲ್ಲುಬಿದ್ದಲ್ಲಿ ಬೆಳೆವರು।ಶಂಕರಗಂಡ ಸರ್ವರ ಸಂಸಾರ ಹೊರುವರು.

೨. ಮಳೆಗಾಲದಲ್ಲಿ ಮಾಡುವ ಬೇಸಾಯ.

೩. ಮಾರ್ಚ ೧೫ರಿಂದ ಎಪ್ರಿಲ್ ೧೫ ರವರೆಗೆ.

೪. ಎಪ್ರಿಲ್ ೧೫ ರಿಂದ ಮೇ ೧೫ ರವರೆಗೆ.

೫. ನೀರಾವರಿ ಸೌಲಭ್ಯವನ್ನು ಉಪಯೋಗಿಸಿಕೊಂಡು ಮಾಡುವ ಮೂರನೇ ಬೇಸಾಯ.

೬ ಜೋಳಿಗೆ

೭ ಕೋಟ ಹದಿನಾಲ್ಕು ಗ್ರಾಮದಲ್ಲಿ ಅಮೃತೇಶ್ವರೀ ದೇವಿಯನ್ನು ಹೊತ್ತು ಪಡಿ ಬೇಡುತ್ತಾರೆ. ಕೋಟ

೮. ಮೂತ್ರಮಾಡಿಕುಳಿತುಕೊಳ್ಳುವುದು.

೯. ಬಸರೂರಿನಲ್ಲಿ ಪ್ರಾಚೀನ ಭೈರವ ದೇವಸ್ಥಾನವಿದೆ. ಈ ಭೈರವ ಮೂರ್ತಿ ಅತ್ಯಂತ ಪ್ರಾಚೀನವಾದದ್ದು ಮತ್ತು ಅತ್ಯಂತ ವಿಶಿಷ್ಟ ಅಪರೂಪದ ಶಿಲ್ಪ ಇದಾಗಿದೆ. ನಾಥವೂ ಬೌದ್ಧರ ಶಾಖೆ ಎಂಬುವುದನ್ನು ಪುಷ್ಟಿಕರಿಸುವಂತಿರುವ ಸ್ತೂಪ ಮಾದರಿಯ ಕಟ್ಟಡ ಅತ್ಯಂತ ಮನಮೋಹಕವಾಗಿದೆ. ಆದರೆ ಈಗ ಜೀರ್ಣಾವಸ್ಥೆಯಲ್ಲಿದೆ.ಅಲ್ಲಿರುವ ಮನೆಯನ್ನು ಮಠದಮನೆಯೆಂದು ನಾಥಪಂಥದ ಯೋಗಿಗಳು ಅಲ್ಲಿ ತಂಗುತ್ತಿದ್ದರು ಎಂಬ ಪ್ರತೀತಿ ಇದೆ.

೧೦. ಕೋಟೆಯ ಅವಶೇಷ ಗುಪ್ಪೆಹಾಡಿಯಲ್ಲಿ ಕಾಣಬಹುದು.

೧೧. ತೆಂಗಿನ ಗರಿಯ ನಾರಿನಿಂದ ಮಾಡಿದ ಹಗ್ಗ.

೧೨. ಹೊಲಿ ಹಿಟ್ಟು ಎಂದರೆ ಒಲೆಯ ಬಿಳಿಬೂದಿ ಸಾಮಾನ್ಯವಾಗಿ ಕೃಷಿಸಂಬಂಧಿ ಆಚರಣೆಯ ಸಮಯದಲ್ಲಿ ಹೊಲಿಹಿಟ್ಟಿ ನಿಂದ ಬರೆಯುವುದು ವಾಡಿಕೆ.ಬೆಳೆ ಮನೆಯ ಒಳಗೆ ಬರುವಾಗ ಅಂಗಳದಲ್ಲಿ ಈ ಹಿಟ್ಟನಿಂದ ರಂಗೋಲಿ ಹಾಕುತ್ತಾರೆ.ಹೊಲಿ ಎಂದರೆ ಎಂದರೇ ಬತ್ತ ಎನ್ನುವ ಪ್ರಾದೇಶಿಕ ಅರ್ಥವಿದೆ. ಹೊಲದಲ್ಲಿ ಬೆಳೆದಿದ್ದು.ಬತ್ತದ ಹೊಟ್ಟಿನ ಬೂದಿಯನ್ನೆ ಹೊಲಿಹಿಟ್ಟು ಎಂದು ಕರೆಯುವುದಾಗಿದೆ.

೧೩. ಭತ್ತವನ್ನು ಅಳೆಯುವ ಸಾಧನ.

೧೪. ಕದಿರು ಕಟ್ಟೆಯಿಂದ ಕದಿರಿನಲ್ಲಿ ಏಳು ಅಕ್ಕಿಯನ್ನು ಗಾಯವಾಗದಂತೆ ಸುಲಿದು ತೆಂಗಿನ ಕಾಯಿಯ ಹಾಲಿನಲ್ಲಿ ಬೇಯಿಸಿ ತಯಾರಿಸುವ ಪಾಯಸ.

೧೫. ಕುಂದಾಪುರ ಕನ್ನಡದಲ್ಲಿ ಹೊಸ್ತುಂತೆ ಎಂದರೇ ಹೊಸಅಕ್ಕಿ ಅನ್ನ ಊಟ ಮಾಡುತ್ತೇನೆ.

೧೬. ಮುಳ್ಳು ಸವತೆ ಮೊಸರು ಹಸಿಮೆಣಸು ಹಾಕಿ ಮಾಡಿದ ಹಸಿ ಖಾದ್ಯ.

೧೭. ಚೆಕ್ಕರ್ಪೆ,ಚೇವದ್ರೆ,ಪುದ್ವಾರ್‌ಗ್ ಬುಕ್ಕರ್ಪೆ(ಮುಳ್ಳು ಸೌತೆ,ಕೆಸವು,ಹರಿವೆ,ಹೊಸ ಅಕ್ಕಿ ಊಟಕ್ಕೆ ಮತ್ತೆ ಬರುವೆ)

೧೮. ನವೆಂಬರ್ ೧೫ ರಿಂದ ದಶಂಬರ್ ೧೫ ರವರೆಗೆ.

೧೯. ಇಲ್ಲಿ ಮಂಡಲವನ್ನು ಬರೆಯುವವರು ಬಿಲ್ಲವರು.

೨೦. ಬಾಣಂತಿಗೆ ಶುಂಠಿ,ಈರುಳ್ಳಿ,ಬೆಲ್ಲ ಇತ್ಯಾದಿಗಳನ್ನು ಸೇರಿಸಿ ಮಾಡುವ ಲೇಹವನ್ನು ಚೈಯ್ ಎಂದು ಕರೆಯುತ್ತಾರೆ.ಇದನ್ನು ತಿನ್ನುವುದರಿಂದ ಬಾಣಂತಿಗೆ ಶೀತ,ಕಫ ಆಗುವುದಿಲ್ಲ ಮತ್ತು ಹಸಿವು ಹುಟ್ಟಲು ಪೂರಕವಾಗಿ ಕೆಲಸ ಮಾಡುತ್ತದೆ.

೨೧. ಪಂಚಕಜ್ಜಾಯ.

೨೨. ಪಂಜುರ್ಲಿ ಭೂತದ ಉಗಮವಾದ ಬಗೆ ಪಾಡ್ದನದಲ್ಲಿ ಹೀಗಿದೆ ಅಣ್ಣ ತಂಗಿಯರಾಗಿದ್ದ ಹಂದಿಮರಿಗಳು ದೇವರ ವರದ ಮೂಲಕ ಗಂಡ ಹೆಂಡಿತಿಯರಾಗುತ್ತವೆ.ಒಂದು ದಿನ ಹೆಣ್ಣು ಹಂದಿಯು ಗರ್ಭಧರಿಸಿ ಮರಿಗಳಿಗೆ ಜನ್ಮ ನೀಡುತ್ತಾಳೆ.ಪಾಡ್ದನದಲ್ಲಿ ಮರಿಗಳನ್ನು ಅನಿಷ್ಟ ಬೀಜವೆಂದು ಕರೆಯಲಾಗಿದೆ.ಒಂದು ದಿನ ಈಶ್ವರನು ಬೇಟೆಗೆಂದು ಹೋದಾಗ,ಈ ಹಂದಿಯ ಮರಿಗಳು ಗೋಚರಿಸುತ್ತವೆ.ತನಗೆ ಮಕ್ಕಳಿಲ್ಲದುದರಿಂದ ಈಶ್ವರನು ಈ ಹಂದಿ ಮರಿಗಳನ್ನುಮನೆಗೆ ತಂದು ಸಾಕುತ್ತಾನೆ. ಬೆಳೆದು ದೊಡ್ಡದಾದ ಹಂದಿ ಮರಿಗಳು ಈಶ್ವರನ ನಂದನವನವನ್ನು ಹಾಳುಮಾಡುತ್ತವೆ.ಇದರಿಂದ ಸಿಟ್ಟಾದ ಈಶ್ವರನು ಸ್ವತಃ ತಾನೇ ಹಂದಿ ಮರಿಗಳನ್ನು ಬೇಟೆಯಾಡುತ್ತಾನೆ.ಹಂದಿಯು ಸತ್ತು ಪಂಜುರ್ಲಿ ಭೂತವಾಗುತ್ತದೆ.

೨೩. ಬೇಸಾಯ ಮುಗಿದೊಡನೆ ಆಷಾಢ ತಿಂಗಳಲ್ಲಿ ಊರವರೆಲ್ಲಾ ಒಟ್ಟು ಸೇರಿ ಕೋಳಿ ಕೊಯ್ದು ಅಲ್ಲಿಯೇ ಅನ್ನ ಪಲ್ಯ ಮಾಡಿ ದೈವಗಳಿಗೆ ಎಡೆ ಇಡುವುದು.ಇದು ಹರಕೆಯಾಗಿಯೂ ಮಾಡುತ್ತಾರೆ.

೨೪. ಕೋಟಿ ಚೆನ್ನಯ್ಯರ ಗರಡಿಗಳಲ್ಲಿ ಜೋಗಿ ಪುರುಷನ ಉರುವಿದೆ. ಈತ ಬಳೆಗಾರ ಜೋಗಿಯಾಗಿದ್ದು ಗರಡಿಯ ಪಂಚಕಜ್ಜಾಯ ಸೇವೆಯನ್ನು ನೋಡಲು ಬಂದಿದ್ದನಂತೆ. ಕೋಟಿ ಚೆನ್ನಯ್ಯರಿಗೆ ಅರ್ಪಿಸಿದ್ದ ಪಂಚ ಕಜ್ಜಾಯಕ್ಕೆ ಕೈಹಾಕಿ ತಿಂದ ಕಾರಣ ಕಲ್ಲಾಗಿ ಬಿದ್ದನೆಂದು ಹೇಳುತ್ತಾರೆ. ಬಸರೂರಿನಲ್ಲಿ ಮತ್ತೊಂದು ಐತಿಹ್ಯವಿದೆ.ಕೊಟಿ ಚೆನ್ನಯ್ಯರನ್ನು ಬಲ್ಲಾಳರು ಅಟ್ಟಿಸಿಕೊಂಡು ಬರುವಾಗ ಜೋಗಿಪುರುಷ ಅವರನ್ನು ತನ್ನ ಹಸಬಿಗೆ ಹಾಕಿಕೊಂಡು ರಕ್ಷಿಸಿದನಂತೆ ಆ ಉಪಕಾರ ಸ್ಮರಣೆಗೆ ಜೋಗಿ ಪುರುಷನ ಮೂರ್ತಿಯನ್ನು ಗರಡಿಯಲ್ಲಿ ಸ್ಥಾಪಿಸಿದ್ದಾರೆ.

೨೫. ಸ್ವಾಣಿ ತಿಂಗಳಲ್ಲಿ (ಅಗಸ್ಟ ೧೫ ರಿಂದ ಸಪ್ಟಂಬರ್ ೧೫ )ಕುಂದಾಪುರದ ಕಡೆಗಳಲ್ಲಿ ಮಾಡುವ ಹೊಸ್ತಿಲು ಹಬ್ಬದ ದೇವರು.ಆಕೆ ಬಲಿಂದ್ರನ ತಾಯಿ ಎನ್ನುವ ಭಾವನೆಯಿದೆ.

೨೬. ದೀವೋಳಿ ಎಂದರೆ ದೀಪಾವಳಿಯೆಂದು.

೨೭. ಈ ಬಗೆಯ ರಂಗೋಲಿಯನ್ನು ಬಲೀಂದ್ರನ ಕೋಟೆಯೆಂದು ನಾಡವರು ನಂಬಿದ್ದರು.

೨೮. ನಾಡವರಲ್ಲಿ ಬೊರಜ್ಜಿ ಬಲೀಂದ್ರ ಬರುವ ವರ್ತಮಾನವನ್ನು ತರುವವಳು.

೨೯. ಬತ್ತದ ಹುಲ್ಲನ್ನು ಬಡಿಯುವ ಮರದ ಮಂಚ.

೩೦. ಬುತ್ತಿ.

೩೧. ಬಸರೂರಿನ ಕೆಲವು ಪ್ರದೇಶದಲ್ಲಿ ಕೊಡಿಹಬ್ಬದ ದಿನ ಗೋಪೂಜೆಯನ್ನು ಆಚರಿಸುವ ಕ್ರಮವಿದೆ.

೩೨. ಅಂಗಳದ ಮಧ್ಯದಲ್ಲಿ ನೆಟ್ಟ ಕಂಬ.

೩೩. ಸಣ್ಣ ಬೆತ್ತದ ಬುಟ್ಟಿ

೩೪. ಅಕ್ಕಿಯನ್ನು ತುಂಬಿಡುವ ಮರದ ದೊಡ್ಡ ಪೆಟ್ಟಿಗೆ.

೩೫. ಮನೆಯನ್ನು ಶುದ್ಧಗೊಳಿಸುವುದು.

೩೬. ಕಾಳವಾರ ನಾಗನ ಆರಾಧನೆಗೆ ಸಂಬಂಧಿಸಿದ ಸ್ಥಳ.

೩೭. ಕೋಟೇಶ್ವರ ಹಬ್ಬ.

೩೮. ಕೊರಗರ ಮನೆಗಳನ್ನು ಕೊಪ್ಪವೆಂದು ಕರೆಯುತ್ತಾರೆ.

೩೯. ಕಪ್ಪು ಬಣ್ಣದ ನೀರು.

೪೦. ಮುಂದಿನ ಕಾಲೂರಿ ನಮಸ್ಕಾರ ಮಾಡುವುದು.

೪೧. ಕಂಬಳ ಗದ್ದೆಯನ್ನು ಪ್ರವೇಶಿಸುವ ಸ್ಥಳ

೪೨. ಕುಂದಾಪುರ ಕನ್ನಡದ ಹೂಡು ಪದದ ಅರ್ಥ ಉಳುಮೆಯನ್ನು ಮಾಡುಯೆಂದು.

೪೩. ಭೂಮಿಯ ಒಡೆಯನಿಂದ ಭೂಮಿಯನ್ನು ಒಂದು ವರ್ಷಕ್ಕೆ ಮಾತ್ರ ಪಡೆದು ಬೇಸಾಯ ಮಾಡಿ ಗೇಣಿ ನೀಡುವುದು.

೪೪. ಭತ್ತದ ಬಡಿಯುವಾಗ ಬೀಳುವ ಭತ್ತದ ಹುಲ್ಲಿನ ಕರೆ. ಇದನ್ನು ದುಂಬು ಎಂದು ಕರೆಯುತ್ತಾರೆ.ಇದರಲ್ಲಿ ಹೊಟ್ಟು ಬತ್ತವು ಇರುತ್ತದೆ.

೪೫. ಆರೂಡಿ ಬರುವಾಗ ಯಾರಮ್ಮ ಮನೆಯಲ್ಲಿ, ತಾರ ತಂಬಿಗೆಯ ಉದಕವತಕ್ಕೊಂಡುಕೋಣನ ಸಿರಿಪಾದ ತೊಳಿಬನ್ನಿ.

೪೬. ಮಾರಿ ಮುಖವಾಡವನ್ನು ಹೊತ್ತು ಕೊಂಡು ಹೋಗುತ್ತಿದ್ದ ಹಸ್ಲರ ಜಾತಿಯವರು ಮಾರಿ ಮುಗಿದ ಮೇಲೆ ಸಾಯುತ್ತಿದ್ದರಂತೆ.ಇದರಿಂದ ಭಯಗೊಂಡ ಆಜಾತಿಯವರು ಮಾರಿಹೊರಲು ಮುಂದೆ ಬಾರದಿದ್ದಾಗ,ರಥವನ್ನು ಮಾಡಬೇಕಾಯಿತು.

೪೭. ಶಿರಸಿಯ ಮಾರಿಯ ಹಬ್ಬವು ಕೂಡಾ ಇದೇ ಮಾದರಿಯದ್ದಾಗಿದೆ.

೪೮. ಕೋಟಿಚೆನ್ನಯ್ಯರನ್ನು ಬಂಟರು ಎಂದು ಕರೆಯುವುದು.

೪೯. ಪಾತ್ರಿಯ ಮೇಲೆ ಆವಾಹನೆಯಾದ ದೈವ ಆವಾಹನೆಯನ್ನು ನಿಲ್ಲಿಸುವುದು.

೫೦ ರಥರೂಢಳಾದ ಮಾರಿಗೆ ಬಳೆ,ಅಕ್ಕಿ ,ಕಾಯಿಯಿಂದ ಸತ್ಕರಿಸುವಂತದ್ದು.

೫೧. ಕ್ರಿಶ ೧೪೮೨ ರ ಶಾಸನದಲ್ಲಿ ಹೆರಿಯಕುದ್ರ (ಹೇರಿಕುದ್ರು)ನ್ನು ದೇವಾಲಯಕ್ಕೆ ದಾನವಾಗಿ ಕೊಟ್ಟ ವಿಚಾರವಿದೆ.

೫೨ ಹೊಳೆಯನ್ನು ದೋಣಿಯಲ್ಲಿ ದಾಟುವಾಗ ದೋಣಿಗೆ ಪ್ರಯಾಣಿಕರನ್ನು ಹತ್ತಿಸಿಕೊಳ್ಳುವ ನಿಲ್ದಾಣ.

೫೩. ಬಸರೂರಿನ ಮಾರ್ಗೋಳಿಯಲ್ಲಿ ಮಾಸ್ತಿಕಟ್ಟೆ ಇದೆ.ಈ ಕಟ್ಟೆಗು ಬಸರೂರಿನ ಶಾರದಾ ಕಾಲೇಜಿನಲ್ಲಿರುವ ಮಾಸ್ತಿಕಲ್ಲಿಗೂ ಸಂಬಂಧವಿದೆಯೇ ಎನ್ನುವುದು ಅಧ್ಯಯನ ಯೋಗ್ಯವಾದುದು.

೫೪. ಬಲಿಪಶುಗಳ ರಕ್ತದಿಂದ ಅನ್ನವನ್ನು ಕಲಸಿ ಅದನ್ನು ಊರಗಡಿಯ ಭೂತಗಳಿಗೆ ಹಾಕುವವರು

೫೫. ಗಡಿಗಳಲ್ಲಿ ಇದ್ದ ಗಣಗಳು ಬೆಂಬತ್ತಿ ಬರಬಾರದು ಎಂಬ ಉದ್ದೇಶದಿಂದ ಅವುಗಳಿಗೆ ಕೋಳಿ,ಕುರಿ ಬಲಿಕೊಡುವವರು.

೫೬ ಹುಲಿಯೊಂದರ ಬಾಯಿಗೆ ಸಿಕ್ಕಿ ಸತ್ತ ವ್ಯಕ್ತಿಯ ಭೂತ ಹೆಂಗಸಿನ ಮೇಲೆ ಆಗಾಗ ಬಂದು ತೊಂದರೆ ಕೊಡುತ್ತಿತ್ತಂತೆ.ಇದರಿಂದ ಬೇಸತ್ತ ಕುಟುಂಬದವರು ಶ್ರೀ ದೇವಿಅಮ್ಮನವರನ್ನು ಮೊರೆಹೋದರಂತೆ. ಹುಲಿಯ ಉರುವನ್ನು ಪ್ರತಿಷ್ಠಾಪಿಸುವಂತೆ ಅಮ್ಮನವರು ಸೂಚಿಸಿದರಂತೆ. ಅಂದಿನಿಂದ ಆಕೆಗೆ ತೊಂದೆರೆ ನಿಂತುಹೋಯಿತಂತೆ.

೫೭ ಹಿಂದೆ ಪಂಜುರ್ಲಿಗೆ ಮಾಂಸಾಹಾರವಿತ್ತು. ಈಗ ಮಾಂಸಹಾರದ ಬದಲು ಹನ್ನೆರಡು ಕಡುಬಿನನೈವೇದ್ಯ ಮಾಡುತ್ತಾರೆ ಇದನ್ನು ಗುರಿಪೂಜೆ ಎನ್ನುತ್ತಾರೆ.

೫೮. ಇತ್ತೀಚಿನ ದಿನದಲ್ಲಿ ಗಂಡಸರು ಗೆಂಡ ತುಳಿದ ಉದಾಹರಣೆ ಗರಡಿ ಹಬ್ಬದಲ್ಲಿದೆ.

೫೯. ದೈವಗಳು ಪಾತ್ರಿಯ ಮೇಲೆ ಆವಾಹನೆಯಾದಾಗ ಭಕ್ತರು ನೀರು ಹಾಕಿಸಿಕೊಳ್ಳುತ್ತಾರೆ.

೬೦. ಶಿವ,ವಿಷ್ಣು,ದೇವಿ,ಸೂರ್ಯ ಮತ್ತು ಗಣೇಶ ಇವರುಗಳಿಗೆ ಸಂಯುಕ್ತಪೂಜೆ ಇದು ಶಂಕರಾಚಾರ್ಯರ ಪ್ರಭಾವದಿಂದ ಬಂದಿರುವುದು.

೬೧. ರಥೋತ್ಸವದ ಸಂದರ್ಭದಲ್ಲಿ ದೇವಾಲಯದ ಮುಂದುಗಡೆ ನಾಲ್ಕು ಕಂಬಗಳನ್ನು ನೆಟ್ಟು,ಅದರ ಮೇಲೆ ಒಂದು ಮಾಡನ್ನು ಕಟ್ಟಿ,ಅದಕ್ಕೆ ಗ್ರಾಮ ಮಡಿವಾಳನು ವಸ್ತ್ರವನ್ನು ಕಟ್ಟುವ ವಾಡಿಕೆ ಇದ್ದಿತ್ತು. ಈ ಕ್ರಮ ಸೀಮೆ ದೇವಾಲಯಗಳಲ್ಲಿ ಮಾತ್ರ ಇದ್ದಿತ್ತು ಎಂಬುದನ್ನು ಗಮನಿಸಿದರೆ ಇದು ಅದೇ ಆಚರಣೆಯ ಸಾಂಕೇತಿಕ ರೂಪ ಇರಬಹುದು.

೬೨. ತಂತ್ರಿಗಳು, ಅರ್ಚಕರು, ಪಂಚವಾದ್ಯ, ಕಟ್ಟಿಗೆಕೋಲಿನವರು ಕಂಕಣ ಕಟ್ಟಿಕೊಳ್ಳುತ್ತಾರೆ.

೬೩. ಟಿಪ್ಪುಸುಲ್ತಾನ ತುಳುನಾಡಿಗೆ ಬಂದ ನಂತರ ಆರಂಭವಾದ ಮಂಗಳಾರತಿಯೇ ಸಲಾಂ.ಇದು ಭಾವೈಕ್ಯದ ಸಂಕೇತವಾಗಿದೆ.ಈ ಸಂಪ್ರದಾಯ ದೇವಾಲಯದ ರಥೋತ್ಸವದ ದಿನಗಳಲ್ಲಿ ಪ್ರತಿದಿನ ನಡೆಯುವಂತದ್ದು. ಉತ್ಸವ ಮೂರ್ತಿ ಮುಂದೆ ಕಟ್ಟಿಗೆಕೋಲು, ದೊಂದಿ ಹಿಡಿದು ಸಲಾಂ ಹಾಡು ಹಾಡುದಾಗಿದೆ.

೬೪. ಪ್ರತಿ ಸೋಮವಾರ ಮಹಾಲಿಂಗೇಶ್ವರನು ದೇವಾಲಯಕ್ಕೆ ಸುತ್ತುಬಂದು ಈ ಕಟ್ಟೆಯಲ್ಲಿ ಕುಳಿತು ಪೂಜೆ ಪಡೆಯುತ್ತಾನೆ.

೬೫. ದೇವಾಲಯದ ಸಣ್ಣ ತೇರನ್ನು ಅಲಂಕಾರ ಮಾಡಿ ದೇವರನ್ನು ಕೂರಿಸಿ ದೇವಾಲಯದ ಸುತ್ತು ಎಳೆಯುವುದು.

೬೬. ತೇರುರಥೋತ್ಸವದ ದಿನ ಸಂಜೆ, ತೇರನ್ನು ಎಳೆಯುದಕ್ಕೆ ಬಯ್ಯನ ತೇರು ಎನ್ನವುದಾಗಿದೆ.

೬೭. ಅಪರಾತ್ರಿಯಲ್ಲಿ ಗಂಟೆ ಜಾಗಟೆಗಳ ಸದ್ದಿಲ್ಲದೆ ವಿಚಿತ್ರವಾಗಿ ಹಲಗವನ್ನು ಬಾರಿಸುತ್ತ ಬೂತ, ಪ್ರೇತಾದಿಗಳನ್ನು ಉಚ್ಚಾಟಿಸಿ ಶಿಷ್ಟಶಕ್ತಿಯನ್ನು ಆಮಂತ್ರಿಸುವುದಾಗಿದೆ.

೬೮. ಶಿವನ ವಾಹನವನ್ನು ಕಟ್ಟಿ ಹಾಕಿರುವುದರಿಂದ ಅದು ಕೋಪಗೊಂಡು ಅಟ್ಟಿಸಿಕೊಂಡು ಬರುತ್ತದೆ ಎಂದು ಬಸರೂರಿನ ಜನ ಭಾವಿಸುತ್ತಾಗೆ.

೬೯. ಬಸರೂರಿನ ಓಕುಳಿ ಹಾರುವ ಬಂಟರನ್ನು ಹಲರು ಸೆಟ್ರು ಎಂದು ಹಿಂದೆ ಕರೆಯುತ್ತಾರೆ.

೭೦. ಕುಂದಾಪುರ ಕನ್ನಡದಲ್ಲಿ ಓಕ್ಲಿ ಹೊಂಡ ಎಂದು ಕರೆಯುತ್ತಾರೆ.

೭೧. ಧ್ವಜದ ಮರಕ್ಕೆ ಪಟವನ್ನು ಏರಿಸುವುದನ್ನು ಗರ್ನಕಟ್ಟುದೆನ್ನುತ್ತಾರೆ. ಇದು ಹಬ್ಬದ ಆರಂಭವನ್ನು ಸೂಚಿಸುತ್ತದೆ. ಗರುಡನ್ನು ಏರಿಸುವ ಕ್ರಿಯೆಯು(ಗರ್ನಕಟ್ಟುವಲ್ಲಿ) ಆತ್ಮಾಹುತಿಯ ಮೂಲಕ ದೇಹವನ್ನು ಮುಡುಪಿದ ವೀರ ಜನಾಂಗದ ಸ್ಮರಣೆಯ ಕುರುವಾಗಿದೆ (ಚಿನ್ನಪ್ಪಗೌಡ.ಕೆ;೧೯೮೮;ಪುಟ:೪೩).

೭೨. ಸಂಜೆಯ ಹೊತ್ತಿನಲ್ಲಿ ನಡೆಯುವ ಬಲಿ

★★★

## ಅಧ್ಯಾಯ ಎಂಟು

# ಜೀವನಾವರ್ತನದ ಆಚರಣೆಗಳು

೮.೧. ಚಪ್ಪೆಕಾರ್‌ಬಂಡಾರಿ ನಾಯ್ಕರ ಆಚರಣೆಗಳು

೮.೨. ಬಳೆಗಾರರ ಆಚರಣೆಗಳು

೮.೩. ಮೇರರ ಆಚರಣೆಗಳು

೮.೪. ಬಂಟರ ಆಚರಣೆಗಳು

# ಅಧ್ಯಾಯ ಎಂಟು

# ಜೀವನಾವರ್ತನದ ಆಚರಣೆಗಳು

ಮನುಷ್ಯ ಬದುಕುತ್ತಿರುವ ಈ ವ್ಯವಸ್ಥೆ ಮೇಲ್ನೋಟಕ್ಕೆ ಒಂದೇ ಬಗೆಯಾಗಿ ತೋರುತ್ತದೆ. ಆದರೆ ಬೇರೆ ಬೇರೆ ಸಮುದಾಯದ ಅಥವಾ ವ್ಯಕ್ತಿಯ ಬದುಕನ್ನು ಹತ್ತಿರದಿಂದ ಕಂಡು ಸೂಕ್ಷ್ಮವಾಗಿ ಗಮನಿಸಿದಾಗ ವ್ಯಕ್ತಿ, ಸಮುದಾಯಗಳ ನಡುವಿನ ಆಚಾರ-ವಿಚಾರಗಳಲ್ಲಿ ವ್ಯತ್ಯಾಸವಿರುವುದನ್ನು ಕಾಣಬಹುದು. ಸಮಾಜವೊಂದರ ಮೂಲಘಟಕ ವ್ಯಕ್ತಿ, ಅನಂತರದಲ್ಲಿ ಕುಟುಂಬ, ಸಮುದಾಯಗಳು ಬರುತ್ತದೆ. ಸಮುದಾಯಗಳು ಒಂದೇ ಬಗೆಯ ಆಚರಣೆಗಳನ್ನು ಹೊಂದಿರುವ ವ್ಯಕ್ತಿಗಳ ಸಮೂಹವಾಗಿದೆ. ಅವುಗಳನ್ನು ಸಮುದಾಯ, ಸಮಾಜ, ಜಾತಿ ಎಂದು ಬೇರೆ ಬೇರೆ ಹೆಸರುಗಳಿಂದ ಗುರುತಿಸುತ್ತಾರೆ.

ಒಂದು ಪ್ರದೇಶದಲ್ಲಿ ವಾಸಿಸುವ ವ್ಯಕ್ತಿಗಳ ಗುಂಪು ಅನೇಕ ಬಗೆಯ ನಂಬಿಕೆ ಆಚರಣೆ, ಕ್ರಿಯಾವಿಧಿಗಳನ್ನು ಆಚರಿಸುತ್ತಾರೆ. ಇವುಗಳು ನಿರ್ದಿಷ್ಟ ಕಾಲಘಟ್ಟದಲ್ಲಿ ಆವರ್ತನಗೊಳ್ಳುತ್ತಿರುತ್ತದೆ. ಇನ್ನು ಕೆಲವೊಮ್ಮೆ ಬಾಹ್ಯ ಪ್ರಭಾವ, ಒತ್ತಡಗಳಿಂದ ಬದಲಾವಣೆ ಹೊಂದುತ್ತಿರುತ್ತದೆ. ಜೀವನದ ವಿವಿಧ ಹಂತಗಳಲ್ಲಿ ನಡೆಯುವ ಆಚರಣೆಗಳನ್ನು ಜೀವನಾವರ್ತನದ ಆಚರಣೆಗಳೆಂದು ಕರೆಯಲಾಗುತ್ತದೆ.

ಆಧುನಿಕತೆ, ಜಾಗತೀಕರಣದ ಪ್ರಭಾವ ಸಮುದಾಯದ ಮೇಲೆ ಆಗಿದ್ದರು ಕೆಲವು ಸಮುದಾಯದ ವಿಶಿಷ್ಟ ಆಚರಣೆಗಳು ಇಂದಿಗೂ ಉಳಿದುಕೊಂಡು ಬಂದಿದೆ. ಇದನ್ನೆ ಸಾಂಸ್ಕೃತಿಕ ಅನನ್ಯತೆಯೆಂದು ಕರೆಯಬಹುದಾಗಿದೆ. ಮೇಲ್ನೋಟಕ್ಕೆ ಇವುಗಳು ಇನ್ನೊಂದು ಸಮುದಾಯದ ಆಚರಣೆ, ನಂಬಿಕೆ , ನಡವಳಿಕೆಗಳಂತೆ ಇದ್ದರೂ ಆಂತರ್ಯದಲ್ಲಿ ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸಬಹುದು. ಒಂದು ಸಮುದಾಯದ

ಸಂಸ್ಕೃತಿಯೂ ಆ ಸಮುದಾಯದ ಜೈವಿಕ ಬೆಳವಣಿಗೆಯೊಂದಿಗೆ ಸಂಬಂಧವನ್ನು ಹೊಂದಿರುತ್ತದೆ. ಪ್ರತಿಯೊಂದು ಸಮುದಾಯದ ಸಾಂಸ್ಕೃತಿಕ ಶ್ರೀಮಂತಿಕೆ ಅವರ ಜೀವನಾವರ್ತನ ಆಚರಣೆಗಳಲ್ಲಿ ಅಭಿವ್ಯಕ್ತವಾಗುತ್ತದೆ.

ಜೀವನಾವರ್ತನವು ಒಂದು ಸಮುದಾಯವು ಜೀವಿಸುವ ಭೌಗೋಳಿಕ ಪರಿಸರ,ವೃತ್ತಿ,ಲಿಂಗ ಮೊದಲಾದ ವಿಚಾರಗಳ ಪ್ರಭಾವಕ್ಕೆ ಒಳಗಾಗಿರುತ್ತದೆ. ಪ್ರತಿಸಮುದಾಯದ ಸದಸ್ಯನು ತನ್ನ ಜೀವಿತಾವಧಿಯಲ್ಲಿ ಎದುರಿಸುವ ಸಂಸ್ಕಾರ ವಿಧಿಗಳೇ ಜೀವನಾವರ್ತನಗಳು. ಅದು ಸಮುದಾಯದಿಂದ ಸಮುದಾಯಕ್ಕೆ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿದೆ. ಸಮುದಾಯವೊಂದರಲ್ಲಿ ವ್ಯಕ್ತಿಯೂ ಮೂಲಘಟಕವಾಗಿರುವುದರಿಂದ ವ್ಯಕ್ತಿಯ ಆಚರಣೆಗಳೆಲ್ಲವು ಜೀವನಾವರ್ತನ ಆಚರಣೆಗಳಾಗಿವೆ. ಈ ಆಚರಣೆಗಳು ವೈಯಕ್ತಿಕ, ಸಾಮಾಜಿಕ, ಸಾಂಸ್ಕೃತಿಕ ಮಹತ್ವವನ್ನು ಪಡೆದಿರುತ್ತದೆ.

ಈ ಅಧ್ಯಾಯದಲ್ಲಿ ಚಪ್ಪೆಕಾರ ಬಂಡಾರಿ ನಾಯ್ಕರು, ಬಳೆಗಾರರು, ಮೇರರು, ಬಂಟರು ಎಂಬ ಜನಸಮುದಾಯದವರ ಜೀವನಾವರ್ತನ ಆಚರಣೆಗಳ ಅನನ್ಯತೆಯನ್ನು ದೃಷ್ಟಿಯಲ್ಲಿರಿಸಿಕೊಂಡು ವಿವೇಚಿಸಲಾಗಿದೆ. ಈ ಜನಸಮುದಾಯದಲ್ಲಿ ಕೆಲವರು ಮಾತೃಮೂಲೀಯ ಮತ್ತು ಕೆಲವರು ಪಿತೃಪ್ರಧಾನ ಕುಟುಂಬ ಪದ್ಧತಿಯನ್ನು ಅನುಸರಿಸಿಕೊಂಡು ಬರುತ್ತಿದ್ದಾರೆ.

### ೮.೧. ಚಪ್ಪೆಕಾರ್ ಬಂಡಾರಿ ನಾಯ್ಕರ್ ಆಚರಣೆಗಳು

ಬಸರೂರಿಗೆ ವಲಸೆ ಬಂದಿರುವ ಈ ಜನಸಮುದಾಯವನ್ನು ಚಪ್ಪೆಕಾರ ನಾಯಕರೆಂದು ಸ್ಥಳಿಯವಾಗಿ ಕರೆಯುತ್ತಾರೆ. ಅವರು ತಮ್ಮನ್ನು ಬಂಡಾರಿ ನಾಯಕರೆಂದು, ಕಂಚುಗಾರರೆಂದು, ಅವಲಕ್ಕಿ ಬಂಡಾರರೆಂದು ಕರೆಯಿಸಿಕೊಳ್ಳುತ್ತಾರೆ. ಬಸರೂರಿನ ನಾವುಡರ ವೊಳಲು, ಖಾರಿಕುದ್ರುಗಳಲ್ಲಿ ಬೇಸಾಯವನ್ನು ವೃತ್ತಿಯಾಗಿಸಿಕೊಂಡಿದ್ದಾರೆ. ಇವರು ಬಸರೂರಿನ ಕೃಷಿ ಕೂಲಿಕಾರ್ಮಿಕರಾಗಿದ್ದು ಅನಂತರದಲ್ಲಿ ಭೂಮಸೂದೆ ಕಾನೂನಿನ ಅನ್ವಯ ಭೂ ಒಡೆತನ ಲಭ್ಯವಾಯಿತು. ಈ ಜನಸಮುದಾಯ ಪಿತೃಪ್ರಧಾನ ಕುಟುಂಬ ವ್ಯವಸ್ಥೆಗೆ ಸೇರಿದವರಾಗಿದ್ದಾರೆ.

ಬಸರೂರಿಗೆ ಹೊರಗಿನಿಂದ ವಲಸೆ ಬಂದ ಜನಸಮುದಾಯವೇ ಚಪ್ಪೆಕಾರ್‌ಬಂಡಾರಿ ನಾಯಕರು. ಕ್ರಿಶ. ೧೭ ನೇ ಶತಮಾನದ ಆರಂಭದಲ್ಲಿ ನಡೆದ ಸೈನಿಕ ಕಾರ್ಯಾಚರಣೆಯ ನಂತರ ಇವರು ಕರಾವಳಿ ಕರ್ನಾಟಕ್ಕೆ ವಲಸೆ ಬಂದರು. ಶಿವಾಜಿಯು ಮರಾಠ ಪ್ರಾಂತ್ಯವನ್ನು ಆಡಳಿತ ನಡೆಸುತ್ತಿದ್ದ ಕಾಲದಲ್ಲಿ ಔರಂಗಜೇಬನು ಶಿವಾಜಿಯ ಮೇಲೆ ದಂಡೆತ್ತಿ ಬಂದನು. ಶಿವಾಜಿಯ ಸೈನ್ಯದಲ್ಲಿದ್ದ ಸೈನಿಕರು ಜೀವರಕ್ಷಣೆಗಾಗಿ ರತ್ನಗಿರಿಯ ಮೂಲಕ ಕಾರವಾರ

ಗೋವಾ ಪ್ರದೇಶಗಳಲ್ಲಿ ವಾಸ್ತವ್ಯ ಹೂಡಿ ಬದುಕು ನಡೆಸುತ್ತಿದ್ದರು. ಅನಂತರದಲ್ಲಿ ಗೋವಾದಲ್ಲಿ ಪೋರ್ಚುಗೀಸರ ಮತ್ತು ಡಚ್ಚರ ದಬ್ಬಾಳಿಕೆಗೆ, ಮತಾಂತರಕ್ಕೆ ಹೆದರಿ ಕುಣಬಿ, ಲೋಹಾರ, ಸುತ್ತಾರ, ಬಂಡಾರಿ, ತಕಾರ್, ದಗಾರ್ ಮುಂತಾದ ಜನಸಮುದಾಯ ಕರಾವಳಿ ಕರ್ನಾಟಕವನ್ನು ಪ್ರವೇಶಿಸಿದರು. ಈ ಮರಾಠಿ ಜನಸಮುದಾಯದೊಡನೆ ಕರಾಡ, ಚಿತ್ತಾಪನ್ನ ಬ್ರಾಹ್ಮಣರು ತುಳುನಾಡನ್ನು ಪ್ರವೇಶಿಸಿದರು.

ಬಸರೂರಿನಲ್ಲಿ ವಾಸವಾಗಿರುವ ಬಂಡಾರಿ ನಾಯಕರು ಮರಾಠಿ ಮಿಶ್ರಿತ ಕೊಂಕಣಿ ಭಾಷೆಯನ್ನು ಮಾತನಾಡುತ್ತಾರೆ. ಇವರು ತಮ್ಮನ್ನು ಕ್ಷತ್ರೀಯರೆಂದು ಗುರುತಿಸಿಕೊಳ್ಳುತ್ತಾರೆ. ಇವರಲ್ಲಿ ಬ್ರಾಹ್ಮಣರು ಬ್ರಾಹ್ಮಣೇತರರು ಎಂಬ ಎರಡು ಪಂಗಡಗಳಿವೆ. ಥರ್ಸ್ಟನರ ಹೇಳಿಕೆ ಪ್ರಕಾರ ಮರಾಟಿಗರು ಬ್ರಾಹ್ಮಣೇತರರು ಇವರು ದಕ್ಷಿಣಕ್ಕೆ ಸೈನಿಕರಾಗಿ, ಸೇವಕರಾಗಿ ಬಂದವರು.

### (ಅ) ಹುಟ್ಟಿನ ಆಚರಣೆ

ಜೀವನಾವರ್ತನದ ಆರಂಭಿಕ ಹಂತವೇ ಹುಟ್ಟು. ಹುಟ್ಟೆಂಬುದು ಮನುಷ್ಯನಿಗೆ ಅಸ್ತಿತ್ವವನ್ನು ತಂದುಕೊಡುವ ಬಹುಮುಖ್ಯ ಘಟಕವಾಗಿದೆ.ಈ ಮೂಲಕ ಕುಟುಂಬ ಬೆಳೆಯುತ್ತದೆ.ಹುಟ್ಟಿದ ಮಗುವಿಗೆ ಲೋಕವನ್ನು ಪರಿಚಯಿಸುವ ಕೆಲಸವನ್ನು ಹಿರಿಯರು ನಡೆಸುತ್ತಾರೆ.ಹುಟ್ಟಿನ ಆಚರಣೆಗಳಲ್ಲಿ ಸಂತಾನ ಮತ್ತು ಸಮೃದ್ಧಿಯ ಆಶಯವಿದೆ.

ಬಸರೂರಿನ ಬಂಡಾರಿ ನಾಯಕರಲ್ಲಿ ಬಸುರಿ ಹೆಂಗಸಿಗೆ ಹೆರಿಗೆ ನೋವು ಕಾಣಿಸಿಕೊಂಡ ಕೂಡಲೇ ತಮ್ಮ ಜನಸಮುದಾಯದ ಅಥವಾ ಬೇರೆ ಜನಸಮುದಾಯದ ಅನುಭವಿ ಹೆಂಗಸರಿಂದ ಹೆರಿಗೆ ಮಾಡಿಸುತ್ತಾರೆ. ಇವಳಿಗೆ ಬಿಜ್ಲತ್ತಿ ಎಂದು ಕರೆಯುವುದು ವಾಡಿಕೆ. ಬಸರಿಯನ್ನು ಹೆರಿಗೆ ಸಂದರ್ಭದಲ್ಲಿ ಮನೆಯ ನಡುಕೋಣೆಯಿಂದ ದೂರವಿರಿಸುತ್ತಾರೆ.ಮಗು ಭೂಮಿಗೆ ಬಿದ್ದ ಕೂಡಲೆ ಹೊಕ್ಕಳಬಳ್ಳಿಗೆ ಹಿಂದೆ ಮುಂದೆ ಗಂಟು ಹಾಕಿ ಗಿಜ್‌ಕತ್ತಿಯಿಂದ ಕತ್ತರಿಸುತ್ತಾರೆ. ಕತ್ತರಿಸಿದ ಭಾಗಕ್ಕೆ ಮುಂಡಕನ ಓಲೆ ಸುಟ್ಟು ಕರಿಯನ್ನು ಸವರುತ್ತಾರೆ. ಮಗುವಿನ ಮಾಸುತೆಗೆದು ಸ್ವಚ್ಚವಾದ ಬಟ್ಟೆಯಲ್ಲಿ ಮೈಶುದ್ಧಗೊಳಿಸಿ ಗೆರೆಸಿಯಲ್ಲಿ ಅಕ್ಕಿ ಹಾಕಿ ಅದರ ಮೇಲೆ ಬಟ್ಟೆಯನ್ನು ಹಾಸಿ ಮಲಗಿಸುತ್ತಾರೆ. ಹೆರಿಗೆಯಾಗಿ ಆರನೇ ದಿನಕ್ಕೆ ಸಟ್ಟಿದೇವರು[೧] ಅಥವಾ ಚಟ್ಟಿದೇವರು ಮಾಡುವ ಕ್ರಮವಿದೆ. ಇದನ್ನು ದುರ್ತ ಕಳೆಯುವುದು ಎನ್ನುತ್ತಾರೆ. ಮಗುವಿಗೆ ಭವಿಷ್ಯದಲ್ಲಿ ಎದುರಾಗುವ ತೊಂದರೆಗಳನ್ನು ಕಳೆಯುವುದು ಎಂಬ ಉದ್ದೇಶದಿಂದ ಈ ಕ್ರಮವನ್ನು ಮಾಡುತ್ತಾರೆ. ಹೆರಿಗೆಯಾದ ಕೂಡಲೆ ಬಾಣಂತಿಯ ಮಾಸು, ಕತ್ತರಿಸಿದ ಕರುಳ ಬಳ್ಳಿಯನ್ನು ಮೊಗೆಯಲ್ಲಿ ಹಾಕಿ ಬಾಣಂತಿ ಸ್ನಾನ ಮಾಡಿದ ನೀರು ಹೋಗುವ ಜಾಗದಲ್ಲಿ ಹೂಳುತ್ತಾರೆ. ಹನ್ನೊಂದನೆಯ ದಿನ ಮಣ್ಣಿನ ಮೊಗೆಗೆ ಬಾಣಂತಿ ಉಪಯೋಗಿಸಿದ ವಸ್ತ್ರದತುಂಡು,

ಅರಸಿನ, ಸೀಗೆಕಾಯಿ, ತೆಂಗಿನೆಣ್ಣೆ, ಹಣ ಹಾಕಿ ಮೊಗೆಯನ್ನು ನೆಲದಲ್ಲಿ ಹೂತು ಮಣ್ಣು ಮುಚ್ಚಿ ಅದರ ಮೇಲೆ ಬಸಳೆ ಕುಡಿಯನ್ನು ನೆಡುತ್ತಾರೆ. ಆ ದಿನ ಮಾಸು ಹೂಳಿದ ಜಾಗಕ್ಕೆ ಧೂಪ ಹಾಕಿ ಪಾಯಸ ಬಡಿಸುತ್ತಾರೆ. ಇದನ್ನು ಆಮೆಹೊಂಡ ಮುಚ್ಚುವ ಶಾಸ್ತ್ರ ಎನ್ನುತ್ತಾರೆ. ಈ ಕಾರ್ಯವನ್ನು ಮಗುವಿನ ತಂದೆ ಮಾಡುತ್ತಾನೆ. ಹನ್ನೊಂದನೆಯ ದಿನ ಬಾಣಂತಿ ಸ್ನಾನ ಮಾಡುವ ನೀರು ಹಂಡೆಯ ಸುತ್ತ ತೆಂಗಿನೆಣ್ಣೆ ಹಾಕಿದ ಏಳು ಅನ್ನದ ಉಂಡೆಯನ್ನು ಇಟ್ಟು ಸ್ನಾನದ ನಂತರ ಬಾಣಂತಿಗೆ ತಿನ್ನಲು ನೀಡುತ್ತಾರೆ. ಹನ್ನೊಂದನೆಯ ದಿನಕ್ಕೆ ತೊಟ್ಟಿಲ ಶಾಸ್ತ್ರ ನಡೆಯುತ್ತದೆ. ಬೇರೆ ದಿನಗಳಾದರೆ ಘಳಿಗೆ ನೋಡಬೇಕು.

ಹೆರಿಗೆಯಾಗಿ ಹನ್ನೊಂದನೆಯ ದಿನಕ್ಕೆ ಬಾವಿ ಮುಟ್ಟುವ ಶಾಸ್ತ್ರವಿದೆ. ಹನ್ನೊಂದು ದಿನದವರೆಗೆ ಬಾಣಂತಿ ಆಶೌಚದಲ್ಲಿರುವುದರಿಂದ ಈ ಕ್ರಮವನ್ನು ಮಾಡುತ್ತಾರೆ. ಆ ದಿನ ಉದ್ದು, ಹುರುಳಿ, ಹೆಸರು, ಎಳ್ಳು, ರಾಗಿಗೆ ಅರಸಿನ ತೆಂಗಿನೆಣ್ಣೆ ಹಾಕಿ ಕಲಸಿ ಬಾವಿಯ ಹತ್ತಿರ ಹೊಂಡ ಮಾಡಿ ಅದರೊಳಗೆ ಈ ದಾನ್ಯಗಳನ್ನು ಹಾಕಿ ಮೇಲೊಂದು ಅಡಿಕೆ ಇಟ್ಟು ಮಣ್ಣು ಮುಚ್ಚುತ್ತಾರೆ. ಆನಂತರದಲ್ಲಿ ಬಾಣಂತಿ ನೀರು ಸೇದುತ್ತಾಳೆ. ಆ ದಿನ ಅನ್ನ ಮೀನು ಸಾರು ಮಾಡಿ ಬಾಣಂತಿಗೆ ಬಡಿಸುತ್ತಾರೆ. ಹನ್ನೊಂದನೆಯ ದಿನ ಬಾಣಂತಿ ಸೂತಕ ಕಳೆಯುತ್ತದೆ.

ಹೆರಿಗೆಯಾಗಿ ಹನ್ನೊಂದನೆಯ ದಿನಕ್ಕೆ ಮಗುವನ್ನು ತೊಟ್ಟಿಲಲ್ಲಿ ಮಲಗಿಸುವ ಶಾಸ್ತ್ರವನ್ನು ತೊಟ್ಟಿಲು ಶಾಸ್ತ್ರವೆಂದು ಕರೆಯುತ್ತಾರೆ. ಹನ್ನೊಂದನೆಯ ದಿನ ತೊಟ್ಟಿಲು ಕಟ್ಟುವ ಕೋಣೆಯಲ್ಲಿ ಬೆತ್ತದ ಅಥವಾ ಹಿತ್ತಾಳೆಯ ತೊಟ್ಟಿಲನ್ನು ಕಟ್ಟಿ ತೊಟ್ಟಿಲಿನ ಅಡಿಯಲ್ಲಿ ನಾಲ್ಕು ಮೂಲೆ ಮತ್ತು ಮಧ್ಯದಲ್ಲಿ ಅಕ್ಕಿಯನ್ನು ಹಾಕುತ್ತಾರೆ. ಅಕ್ಕಿಯ ಮೇಲೆ ಹಣತೆ ದೀಪವನ್ನು ಹಚ್ಚಿಡುತ್ತಾರೆ. ಸಾಮಾನ್ಯವಾಗಿ ಬಂಡಾರಿ ನಾಯಕರು ಮರದ ತೊಟ್ಟಿಲನ್ನು ಉಪಯೋಗಿಸುವುದಿಲ್ಲ. ಮಗುವನ್ನು ತೊಟ್ಟಿಲಿಗೆ ಹಾಕುವ ಮುನ್ನ ಗುಂಡಪ್ಪನಿಗೆ ಶಾಲುಸುತ್ತಿ, ಆಭರಣ ಹಾಕಿ ಅಲಂಕರಿಸುತ್ತಾರೆ. ಗುಂಡಪ್ಪ ಮತ್ತು ಮಗುವನ್ನು ತೊಟ್ಟಿಲಿಗೆ ಒಂದಾವರ್ತಿ ಹಾಕುತ್ತ ಐದು ಸಲ ಹಾಕುತ್ತಾರೆ. ಆರನೇಯ ಸಲ ಮಗುವನ್ನು ಮಾತ್ರ ತೊಟ್ಟಿಲಿಗೆ ಹಾಕಿ ಮಗುವಿನ ತಾಯಿ ಮುಂಗಾಲಿನಿಂದ ತೊಟ್ಟಿಲನ್ನು ಐದು ಬಾರಿ ಜೀಕುತ್ತಾಳೆ. ಮಗುವಿನ ಹೆಸರನ್ನು ತೊಟ್ಟಿಲಡಿಯಲ್ಲಿ ಹಾಕಿದ ಅಕ್ಕಿಯಲ್ಲಿ ಬರೆಯುತ್ತಾರೆ. ತಾಯಿ ಮಗುವಿಗೆ ಹೆಸರಿಡುತ್ತಾಳೆ. ಬಂಧು ಬಾಂಧವರ ಬಾಯಿಗೆ ಸಕ್ಕರೆ ಹಾಕಿ ಸಂತೋಷವನ್ನು ಹಂಚಿಕೊಳ್ಳುತ್ತಾರೆ.

(ಆ) ತಲೆನೀರ್ ಮದಿ

ಚಪ್ಪೆಕಾರ ಬಂಡಾರಿ ನಾಯ್ಕರು ಹೆಣ್ಣು ಮೊದಲ ಬಾರಿ ಮೈನೆರೆದ ಸಂದರ್ಭದಲ್ಲಿ ಮಾಡುವ ಆಚರಣೆಯನ್ನು ತಲೆನೀರ್‌ಮದಿ ಎನ್ನುತ್ತಾರೆ. "ಈ ಆಚರಣೆಯಲ್ಲಿ ಮೈಲಿಗೆ

ಕಳೆದುಕೊಳ್ಳಲು ತಲೆನೀರ್ ಸ್ನಾನಮುಖ್ಯವಾಗಿರುತ್ತದೆ "(ಪಾ.ನಮಯ್ಯ:೧೯೮೫,ಪುಟ:೮೯). ಆದುದರಿಂದ ಇದನ್ನು ತಲೆನೀರ್ ಮದಿ ಎಂದು ಕರೆಯುವುದಾಗಿದೆ. ಹೆಣ್ಣು ಮದುವೆ ಆಗಿ ಮೈನೆರೆದರು ಈ ಶಾಸ್ತ್ರವನ್ನು ಮಾಡುತ್ತಾರೆ. ಹೆಣ್ಣು ಮುಟ್ಟಾಗಿ ಐದನೇಯ ದಿನಕ್ಕೆ ಈ ಆಚರಣೆ ಮಾಡುವ ರೂಢಿ ಇದೆ.

ಬಂಡಾರಿ ನಾಯ್ಕರಲ್ಲಿ ಹೆಣ್ಣು ಮೈನೆರೆದಾಗ ಆ ಹೆಣ್ಣನ್ನು ತೆಂಗಿನ ಮರದಡಿ ನಿಲ್ಲಿಸುತ್ತಾರೆ. ಗರಿಕೆ ಹುಲ್ಲನ್ನು ಹೆಣ್ಣಿನ ಕೈಯಿಂದ ಮುರಿಸುತ್ತಾರೆ. "ಈ ಆಚರಣೆ ಗರ್ಭದಾನ ಕ್ರಿಯೆಯ ಭಾಗವಾಗಿರುವುದರಿಂದ, ಹಾಲ್ ಮತ್ತು ಫಲ ಬಪ್ಪ ಮರ್ದ ಅಡಿ ಮೈ ನೆರೆದ್ರೆ ಬಂಜೆ ಆತ್ತಿಲ್ಲ ಎಂಬ ನಂಬಿಕೆ ಜನಪದರಲ್ಲಿ ಇರುವುದರಿಂದ ಫಲಬಿಡುವ ಮತ್ತು ಹಾಲು ಒಸರುವ ಗಿಡವನ್ನು ಹೆಣ್ಣಿನೊಂದಿಗೆ ಸಂಬಂಧ ಕಲ್ಪಿಸುತ್ತಾರೆ" (ಪಾ.ನ.ಮಯ್ಯ,೧೯೮೫;ಪುಟ:೮೯)

ಬಂಡಾರಿ ನಾಯಕರಲ್ಲಿ ನಡೆಯುವ ಈ ಆಚರಣೆಯಲ್ಲಿ ಗುರಿಕಾರರು ಮಡಿವಾಳ್ತಿ ಮತ್ತು ಸಂಬಂಧಿಕರು ಪ್ರಧಾನ ಪಾತ್ರವಹಿಸುತ್ತಾರೆ. ಮದುವೆಯ ನಂತರ ಹೆಣ್ಣು ಮೈನೆರೆದರೆ ಒಸಗೆ ಕಳುಹಿಸುವ ಕ್ರಮವಿದೆ. ಹೆಣ್ಣು ಮೈನೆರೆದ ದಿನ ತೆಂಗಿನಕಾಯಿ ಸಿಪ್ಪೆ ತೆಗೆದು ಅದರ ಕಣ್ಣಿಗೆ ಅರಸಿನ, ಕಾಡಿಗೆ, ಕುಂಕುಮ ಲೇಪಿಸಿ ತಾಯಿ ಮನೆಯಲ್ಲಾದರೆ ಗಂಡನ ಮನೆಗೆ, ಗಂಡನ ಮನೆಯಲ್ಲಾದರೆ ತಾಯಿಯ ಮನೆಯ ಬಾಗಿಲಿನ ಒಳಗೆ ಕಾಯಿ ಉರುಳಿಸಿ ಹೆಣ್ಣು ಮೈನೆರೆದ ಶುಭ ಸಮಾಚಾರವನ್ನು ತಿಳಿಸುತ್ತಾರೆ. ಒಸಗೆ ತಂದವರಿಗೆ ಉಡುಗೊರೆ ನೀಡುತ್ತಾರೆ. ಹೆಣ್ಣು ಮೈನೆರೆದ ದಿನ ಆಕೆಯನ್ನು ತೆಂಗಿನ ಕಟ್ಟೆಯಲ್ಲಿ ಕೂರಿಸಿ ಐದು ಜನ ಮುತ್ತೈದೆಯರು ಸ್ನಾನ ಮಾಡಿಸುತ್ತಾರೆ. ಆ ದಿನ ಬಂಧುಗಳು ಮಾತ್ರ ಬರುತ್ತಾರೆ. ತೆಂಗಿನ ಹೂವನ್ನು ತೆಗೆದು ಮೈನೆರೆದ ಹೆಣ್ಣಿಗೆ ಮುಡಿಸುತ್ತಾರೆ.

ಐದನೆಯ ದಿನ ತಲೆನೀರ್‌ಮದಿ ಐದು ಅಥವಾ ಒಂಬತ್ತು ಮಣ್ಣಿನ ಮೊಗೆಗಳಲ್ಲಿ ಬಾವಿಯ ನೀರನ್ನು ತುಂಬಿ ಅದಕ್ಕೆ ಮಾವಿನ ಎಲೆ,ಹಲಸಿನ ಎಲೆ ಹಾಕಿ ಐದು ಜನ ಮುತ್ತೈದೆಯರು ಮೈನೆರೆದ ಹೆಣ್ಣಿನ ತಲೆ, ಭುಜ, ತೊಡೆಯ ಮೇಲೆ ನೀರನ್ನು ಸುರಿಯುತ್ತಾರೆ. ಇದೊಂದು ನೀರಾಟವಾಗಿ ಮಾರ್ಪಡುತ್ತದೆ. ಆನಂತರದಲ್ಲಿ ಮಡಿವಾಳ್ತಿ ಹೆಣ್ಣನ್ನು ಸ್ನಾನ ಮಾಡಿಸಿ ಬೇರೆ ಬಟ್ಟೆ ತೊಡಿಸುತ್ತಾಳೆ. ಮೈಲಿಗೆ ಕಳೆದುದಕ್ಕೆ ಅಕ್ಕಿ ಮತ್ತು ಕಾಯಿಯನ್ನು ಗೌರವ ಪೂರ್ವಕವಾಗಿ ನೀಡುತ್ತಾರೆ. ಸ್ನಾನ ಮುಗಿಸಿದ ಹೆಣ್ಣಿಗೆ ಸಿಂಗಾರ ಮಾಡಿ ಹಸೆಮಣೆ ಮೇಲೆ ಕುಳ್ಳಿರಿಸಿ ಎದುರುಗಡೆ ಕಳಸ ಇಟ್ಟು ಕಳಸದಲ್ಲಿ ತೆಂಗಿನ ಹೂ ಮತ್ತು ಕಾಯಿಯನ್ನು ಇಡುತ್ತಾರೆ. ತಲೆಗೆ ತೆಂಗಿನ ಹೂವನ್ನು ಮುಡಿಸುತ್ತಾರೆ. ಐದನೆ ದಿನ ಬಂಧುಗಳು ಬಗೆಬಗೆಯ ಪಂಚಕಜ್ಜಾಯವನ್ನು ತಂದು ಹುಡುಗಿಯ ಮುಂದೆ ಬಡಿಸುತ್ತಾರೆ. ಹೆಣ್ಣು ಮದುವೆಯ ನಂತರ ತಾಯಿಯ ಅಥವಾ ಗಂಡನ ಮನೆಯಲ್ಲಿ ಮೈನೆರೆದರೆ

ದಿಬ್ಬಣ ಸಮೇತ ಬಂದು ಹೆಣ್ಣನ್ನು ಕರೆದುಕೊಂಡು ಹೋಗಬೇಕು. ಶೋಭಾನ ಪ್ರಸ್ತವು ಆ ದಿನವೇ ನಡೆಯುತ್ತದೆ. ಬಂಧು ಬಾಂಧವರಲ್ಲದವರು ತುಪ್ಪ ಬಾಳೆಹಣ್ಣನ್ನು ತಂದು ಬಡಿಸಿ ಹೋಗುತ್ತಾರೆ. ಸಿಂಗಾರಗೊಂಡ ಹೆಣ್ಣಿಗೆ ಆರತಿ ಎತ್ತುವುದರ ಮೂಲಕ ತಲೆನೀರ್‌ಮದಿ ಕೊನೆಗೊಳ್ಳುತ್ತದೆ.

ಮೈನೆರೆದ ಹೆಣ್ಣು ಮೊದಲ ದಿನದಿಂದ ಐದನೆ ದಿನದವರೆಗೆ ಚಟ್ಟುಹೊಯ್ಯುತ್ತಾಳೆ.[೨] ಅರಸಿನ ಪುಡಿ ಮತ್ತು ಎಣ್ಣೆ ಬೆರೆಸಿದ ನೀರಿನಲ್ಲಿ ಅಂಗೈ ಅದ್ದಿ ಗೋಡೆಗೆ ಹಸ್ತದ ಗುರುತು ಮೂಡಿಸುವ ವಿಶಿಷ್ಟ ಸಂಪ್ರದಾಯ ಇವರಿಗಿದೆ. "ಚಟ್ಟು ಹೊಯ್ಯುವುದು ಲೈಂಗಿಕ ಸಂಕೇತವಾಗಿದ್ದು ಸಂತಾನ ಕ್ರೀಯೆಗೆ ತಾನು ಸಿದ್ಧಳಾಗಿದ್ದೇನೆ ಎಂಬ ಭಾವ ಸೂಚ್ಯ ಈ ಚಟ್ಟು ಹೊಯ್ಯುವ ಶಾಸ್ತ್ರದಲ್ಲಿದೆ"(ಪಾ.ನ ಮಯ್ಯ;೧೯೯೫;ಪುಟ:೮೭).

**೮.೨. ಬಳೆಗಾರರ ಆಚರಣೆಗಳು**

ಬಸರೂರಿನಲ್ಲಿರುವ ಬಳೆಗಾರರು ಪಾರಂಪರಿಕವಾಗಿ ಬಳೆ ವ್ಯಾಪಾರ ಮಾಡುವವರು.ಇವರು ಊರೂರು ಸುತ್ತಿ ಬಳೆ ಮಾರುವವರು ಮತ್ತು ಮದುವೆ ಮುಂತಾದ ಶುಭ ಕಾರ್ಯಗಳಿಗೆ ವೀಳ್ಯ ಪಡೆದು ಬಳೆ ಇಡುವವರು. ಈ ಜನಸಮುದಾಯದ ಜೀವನಾವರ್ತನ ಆಚರಣೆಗಳನ್ನು ಈ ಅಧ್ಯಾಯದಲ್ಲಿ ಸ್ಥೂಲವಾಗಿ ಪರಿಚಯಿಸಲಾಗಿದೆ.

(ಅ) ಹುಟ್ಟಿನ ಆಚರಣೆ

ಬಳೆಗಾರರಲ್ಲಿ ತುಂಬು ಗರ್ಭಿಣಿ ಮಲಗುವ ಕೋಣೆ ಪ್ರತ್ಯೇಕವಾಗಿರುದಿಲ್ಲ. ಮನೆಯ ಜಗಲಿ ಅಥವಾ ಕೋಣೆಯೇ ಹೆರಿಗೆಕೋಣೆ. ಹೆರಿಗೆಯಾದ ಕೂಡಲೆ ಬಿಜ್ಜಲ್ತಿ[೩] ಮಗುವಿನ ಹೊಕ್ಕಳು ಚೊಟ್ಟನ್ನು ಗಿಜ್ಜಕತ್ತಿಯಿಂದ[೪] ಕೊಯ್ಯುತ್ತಾಳೆ. ಮಡಿವಾಳ್ತಿ ಮಗುವನ್ನು ಸ್ನಾನ ಮಾಡಿಸಿ ಗೆರಸಿಯಲ್ಲಿ ಮಲಗಿಸುತ್ತಾಳೆ. ನಂತರ ಮತ್ತಿಮಗೆಯನ್ನು[೫] ಮೀವರಿ[೬] ಹತ್ತಿರ ಹೊಂಡ ಮಾಡಿ ಹುಗಿದಿಡುತ್ತಾರೆ. ಮೊದಲದಿನ ಮಡಿವಾಳ್ತಿ ಮತ್ತು ಬಿಜ್ಜಲ್ತಿ ಇಬ್ಬರು ಬರುತ್ತಾರೆ. ಹನ್ನೊಂದನೆ ದಿನಕ್ಕೆ ಮಡಿವಾಳ್ತಿ ಮನೆಯನ್ನು ಪಂಚಗವ್ಯದಿಂದ ಶುದ್ಧ ಮಾಡುತ್ತಾಳೆ ಮತ್ತು ಮತ್ತಿಮಗೆಗೂ ಪಂಚಗವ್ಯ ಹಾಕುತ್ತಾಳೆ. ಹನ್ನೊಂದನೆ ದಿನ ಮಧ್ಯಾಹ್ನ ಮತ್ತಿಮಗೆಯನ್ನು ಮಣ್ಣು ಹಾಕಿ ಬಾಣಂತಿ ಮುಚ್ಚುತ್ತಾಳೆ. ಹೆಣ್ಣಾದರೆ ಬಸಲೆ ನೆಡುತ್ತಾರೆ, ಗಂಡಾದರೆ ಬಾಳೆ ನೆಡುತ್ತಾರೆ. ಹನ್ನೊಂದನೆ ದಿನ ರಾತ್ರಿ ಮತ್ತಿಮಗೆ ಹುಗಿದ ಜಾಗದಲ್ಲಿ ಮಳಿಚಿಪ್ಪಿಯಲ್ಲಿ[೭] ಹಣತಿಗೆ ಮಾಡಿ ದೀಪ ಹಚ್ಚಿ ಕೊಡಿಬಾಳೆ ಇಟ್ಟು ಮೂರು ಮುದ್ದಿ ಅನ್ನ ಹಾಕುತ್ತಾರೆ. ಗೆರಟಿಯಲ್ಲಿ ಗಂಜಿತೆಳಿ[೮] ಮೀನಮಂಡಿ ಸುಟ್ಟು ಇಡುತ್ತಾರೆ. ಅನಂತರ ದೂಪ ಹಾಕುತ್ತಾರೆ. ಬಾಣಂತಿ ಅಲ್ಲಿಂದ ಬಚ್ಚಲು ಮನೆಗೆ ಬಂದು ಸ್ನಾನದ ಹಂಡೆಗೆ ಎಣ್ಣೆ ಎರೆದು ಕಾಡಿಗೆ ಹಚ್ಚಿ ಶಾಶಿ ಹಾಕುತ್ತಾಳೆ. ಅನಂತರದಲ್ಲಿ ಹರಿ ಇಳಿಸುವ ಶಾಸ್ತ್ರ ಮಾಡುತ್ತಾರೆ. ಬಚ್ಚಲಿನಿಂದ ಬಾಣಂತಿ ಮನೆಯೊಳಗೆ ಬರುವಾಗ ಮೆಂತೆ ದೋಸೆಯನ್ನು

ಬೆನ್ನಿಗೆ ಬಡಿಯುತ್ತಾರೆ. ಹತ್ತು ದಿನಗಳ ತನಕ ಹೆತ್ತ ಸೂತಕವನ್ನು ಆಚರಿಸುತ್ತಾರೆ. ಹನ್ನೊಂದನೆಯ ದಿನ ರಾತ್ರಿ ತೊಟ್ಟಿಲಿಗೆ ಹಾಕುವ ಶಾಸ್ತ್ರ ನಡೆಯುತ್ತದೆ. ಮಗುವಿಗೆ ಎಣ್ಣೆಸ್ನಾನ ಮಾಡಿಸಿ ಕಾಡಿಗೆ ಹಚ್ಚಿ, ಸೊಂಟ ಮತ್ತು ಕುತ್ತಿಗೆಗೆ ಕಪ್ಪುನೂಲು ಕಟ್ಟುತ್ತಾರೆ. ಮಗುವಿನ ಬಾಯಿಗೆ ಬಜೆ ಹಾಕಿ, ಮರಚಟಿಕೆ ಮೇಲೆ ಅನ್ನ ನುರಿದು ತಿನಿಸುತ್ತಾರೆ. ತಾಯಿ ಮಗುವನ್ನು ಎತ್ತಿಕೊಂಡು ಕುಳಿತುಕೊಳ್ಳುತ್ತಾಳೆ. ಮನೆಯವರು ಹೊರಗಿನವರು ಮಗುವಿಗೆ ಮತ್ತು ತಾಯಿಗೆ ಎಣ್ಣೆ ಎರೆದು ಶಾಶಿ ಹಾಕುತ್ತಾರೆ. ಅನಂತರದಲ್ಲಿ ತೊಟ್ಟಿಲಿಗೆ ಹಾಕುವ ಶಾಸ್ತ್ರ ನಡೆಯುತ್ತದೆ. ಹನ್ನೊಂದನೆಯ ದಿನ ತೊಟ್ಟಿಲು ಕಟ್ಟುವ ಕೋಣೆಯಲ್ಲಿ ಬೆತ್ತದ ತೊಟ್ಟಿಲನ್ನು ಮನೆಯ ಜಂತಿಗೆ ಕಟ್ಟುತ್ತಾರೆ. ಮಗುವನ್ನು ತೊಟ್ಟಿಲಿಗೆ ಹಾಕುವ ಮುನ್ನ ಗುಂಡಪ್ಪನಿಗೆ ಶಾಲು ಸುತ್ತುತ್ತಾರೆ. ಗುಂಡಪ್ಪ ಮತ್ತು ಮಗುವನ್ನು ತೊಟ್ಟಿಲಿಗೆ ಒಂದಾವರ್ತಿ ಹಾಕುತ್ತ ಐದು ಸಲ ಹಾಕುತ್ತಾರೆ. ಆರನೇಯ ಸಲ ಮಗುವನ್ನು ಮಾತ್ರ ತೊಟ್ಟಿಲಿಗೆ ಹಾಕಿ ಮಗುವಿನ ತಾಯಿ ತೊಟ್ಟಿಲನ್ನು ಐದು ಬಾರಿ ಜೀಕುತ್ತಾಳೆ.

(ಆ) ಸಾವಿನ ಆಚರಣೆ

ಬಳೆಗಾರರಲ್ಲಿ ವ್ಯಕ್ತಿ ಸತ್ತ ಕೂಡಲೆ ನೆಲವನ್ನು ಹಣದಲ್ಲಿ ಬರೆಯುತ್ತಾರೆ. ನೆಲಕ್ಕೆ ಎಣ್ಣೆ ಉಜ್ಜಿ ಹೆಣವನ್ನು ಚಕ್ಕರಮಟ್ಟೆ ಹಾಕಿ ಮಲಗಿಸುತ್ತಾರೆ. ಕಾಲಡಿಯಲ್ಲಿ ಬತ್ತ ಹಾಕಿ ತಲೆಯ ಹತ್ತಿರ ಅಕ್ಕಿ ಹಾಕಿ ಹೆಣಕ್ಕೆ ಕಾಯಿ ಒಡೆದು ಕಾಯಿಕಡಿಯಲ್ಲಿ ದೀಪ ಹಚ್ಚಿ ಇಡುತ್ತಾರೆ. ಅನಂತರದಲ್ಲಿ ಹೆಣಕ್ಕೆ ಅರಸಿನ ಸೀಗೆಕಾಯಿ ಹಾಕಿ ಸ್ನಾನ ಮಾಡಿಸುತ್ತಾರೆ. ಬಂಧು ಬಾಂಧವರು ಸ್ನಾನ ಮಾಡಿಸಿದ ನಂತರ ಹೆಣವನ್ನು ಸಿಂಗಾರ ಮಾಡುತ್ತಾರೆ. ಹೊಸ ಪಂಚೆಯನ್ನು ಹೆಣಕ್ಕೆ ಉಡಿಸಿ ಜೋಳಿಗೆ ಹಾಕುತ್ತಾರೆ. ಜೋಳಿಗೆಯಲ್ಲಿ ಎರಡು ಸಿದ್ದಿ ಅಕ್ಕಿ, ಭತ್ತ ಕಾಯಿ ಮತ್ತು ವಿಭೂತಿ ಹಾಕಿ ಸಿಂಗಾರ ಮಾಡುತ್ತಾರೆ. ಹೆಣವನ್ನು ಹುಗಿಯುವ ಜಾಗವನ್ನು ಆಯ್ಕೆಮಾಡಿಕೊಂಡು ಹಣದಲ್ಲಿ ನೆಲವನ್ನು ಬರೆದು ಹೊಂಡ ತೋಡಿ ಮಟ್ಟು ಮಾಡುತ್ತಾರೆ. ಸಿಂಗಾರಗೊಂಡ ಹೆಣವನ್ನು ಚಟ್ಟದಲ್ಲಿ ಇಟ್ಟು ಹುಗಿಯಲು ತೆಗೆದುಕೊಂಡು ಹೋಗುತ್ತಾರೆ. ಸತ್ತವರು ಗಂಡಸಾಗಿದ್ದರೆ ಅತನ ಹೆಂಡತಿಯನ್ನು ಹೆಣದ ಜೊತೆಗೆ ಕರೆದುಕೊಂಡು ಹೋಗಿ ಅವಳ ಕೈ ಬಳೆಯನ್ನು ಒಡೆದು ಹೊಂಡಕ್ಕೆ ಹಾಕುತ್ತಾರೆ ಮತ್ತು ಆಕೆಯನ್ನು ಕೆರೆಸ್ನಾನ ಮಾಡಿಸಿ ಮರಳಿ ಮನೆಗೆ ಕರೆದುಕೊಂಡು ಬರುತ್ತಾರೆ. ಹೊಂಡಕ್ಕೆ ಮೂರು ಸುತ್ತು ಬಂದು ಹೆಣವನ್ನು ಹೊಂಡದ ಒಳಗೆ ಇಟ್ಟು ಮಣ್ಣು ಮುಚ್ಚುತ್ತಾರೆ. ಹೆಣವನ್ನು ತೆಗೆದ ಮೇಲೆ ಮನೆಯನ್ನು ಶುದ್ಧಮಾಡಿ ಗಂಜಿ ಊಟ ಮಾಡುತ್ತಾರೆ. ಸತ್ತ ಮರು ದಿನದಿಂದ ಕಾಗೆಗೆ ಅನ್ನ ಹಾಕುವ ವಿಧಿ ಇರುತ್ತದೆ. ಈ ಕಾರ್ಯವನ್ನು ನೋನುಕೆ[೧೦] ಕುಳಿತುಕೊಂಡವರು ಮಾಡುತ್ತಾರೆ. ಸಾಮಾನ್ಯವಾಗಿ ಹಿರಿಯ ಮಗ ಅಥವಾ ಕಿರಿಯ ಮಗ ನೋನಲು ಕುಳಿತುಕೊಳ್ಳುತ್ತಾರೆ. ನೋನಲು ಕೂತವರು ಪ್ರತಿದಿನ ಮಧ್ಯಾಹ್ನ ಎಲೆಯಲ್ಲಿ ಅನ್ನ ಪದಾರ್ಥ ಹಾಕಿ ಗೆರೆಸಿಯಲ್ಲಿ ಕಾಗೆಗೆ ಇಡುತ್ತಾರೆ.

ಕಾಗೆ ಅನ್ನವನ್ನು ಮುಟ್ಟಿದ ಕೂಡಲೆ ಮನೆಗೆ ಬಂದು ಉಳಿದವರು ಊಟ ಮಾಡುತ್ತಾರೆ. ಹನ್ನೊಂದನೆಯ ದಿನ ಬೊಜ್ಜ. ಮನೆಯ ಹೊರಗಡೆ ಬೊಜ್ಜದ ಅಡುಗೆ ಮಾಡಿ ಊಟ ಮಾಡುತ್ತಾರೆ. ಆ ದಿನ ಬ್ರಾಹ್ಮಣರಿಗೆ ದಾನ ನೀಡುವ ಕ್ರಮ ಇದೆ. ಬ್ರಾಹ್ಮಣರು ನೀಡಿದ ಜಕಣಿಕಾಯಿಯನ್ನು ದೈವದ ಮನೆಗೆ ಹಾಕಿ ಜಕಣಿಯನ್ನು ದೈವದ ಮನೆಗೆ ಸೇರಿಸುತ್ತಾರೆ. ಬಳೆಗಾರರಲ್ಲಿ ವೈಕುಂಠ ಸಮಾರಾಧನೆ ಇರುವುದಿಲ್ಲ.

**೮.೩. ಮೇರರ ಆಚರಣೆಗಳು**

ಬಸರೂರಿನ ಮಾಗಣೆಯಲ್ಲಿ ಕಂಡು ಬರುವ ಕನ್ನಡ ಮಾತನಾಡುವ ಜನಸಮುದಾಯವೇ ಮೇರರು. ಇವರು ಪರಿಶಿಷ್ಟ ಜಾತಿಗೆ ಸೇರಿದವರು. ಸಾಮಾಜಿಕವಾಗಿ ಹಿಂದುಳಿದ ಈ ಜನಸಮುದಾಯ ಬಸರೂರು ಮಾಗಣೆಯ ಜಪ್ತಿಯಲ್ಲಿ ನೆಲೆಯನ್ನು ಹೊಂದಿದವರು. ಮೇರರು ಮಾತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಅನುಸರಿಸುತ್ತಾರೆ. ಬಸರೂರಿನ ಶ್ರೇಣಿಕರಣ ವ್ಯವಸ್ಥೆಯಲ್ಲಿ ಮೇರರು ಕೆಳಹಂತದಲ್ಲಿದ್ದಾರೆ. ಹೆಚ್ಚಾಗಿ ಇವರು ಬಂಟರ ಒಕ್ಕಲುಗಳಾಗಿ ಅವರ ಗದ್ದೆಗಳಲ್ಲಿ ಕೃಷಿ ಕೂಲಿ ಕಾರ್ಮಿಕರಾಗಿ ಹಾಡಿಗಳಲ್ಲಿ ವಾಸವಾಗಿದ್ದಾರೆ. ಬಸರೂರಿನ ಸುತ್ತಮುತ್ತಲ ಹಾಡಿಗಳಲ್ಲಿ ವಾಸಿಸುವ ಇವರು ಕನ್ನಡದ ಉಪಭಾಷೆಯಾದ ಕುಂದಾಪುರ ಕನ್ನಡವನ್ನು ಮಾತನಾಡುತ್ತಾರೆ.

(ಅ) ಮೇರರ ತಲೆನೀರ್ ಮದಿ

ಬಸರೂರಿನ ಮೇರರ ಜೀವನಾವರ್ತನಗಳಲ್ಲಿ ತಲೆನೀರ್‌ಮದಿ ಅತ್ಯಂತ ಮುಖ್ಯವಾದ ಘಟ್ಟವಾಗಿದೆ. ಮೇರರಲ್ಲಿ ಹೆಣ್ಣು ಮೈನೆರೆದಾಗ ಮಳ್ಳು ತುಳಿದಳು ಎನ್ನುತ್ತಾರೆ. ಹೆಣ್ಣು ಮುಟ್ಟಾದ ಕೂಡಲೆ ತೆಂಗಿನಮರದಡಿ ನಿಲ್ಲಿಸುತ್ತಾರೆ. ಅನಂತರದಲ್ಲಿ ಸಂಬಂಧಿಕರು ಐದು ಚೆಂಬು ನೀರು ಅವಳ ತಲೆಯ ಮೇಲೆ ಸುರಿದು ಶುದ್ಧ ಮಾಡುತ್ತಾರೆ. ಬೇರೆ ಬಟ್ಟೆ ತೊಡಿಸಿ ತೆಂಗಿನಮರದ ಹೂ ಮುಡಿಸಿ ಅರಶಿನ, ಕುಂಕುಮ ಹಚ್ಚಿ ಸಿಂಗರಿಸುತ್ತಾರೆ. ಆ ದಿನ ಆಕೆಗೆ ಹುಗ್ಗಿ ಮಾಡಿ ಹಾಕುತ್ತಾರೆ. ತೆಂಗಿನಹೂ ಮುಡಿಸುವ ಮುಂಚೆ ಕೊಡಿ ಬಾಳೆಎಲೆ ಮೇಲೆ ಹುಗ್ಗಿ ಬಡಿಸಿ ಉಣಿಸುತ್ತಾರೆ.

ಐದು ದಿನಗಳವರೆಗೆ ಆಕೆ ಒಳಗೆ ಬರುವಂತಿಲ್ಲ.ಐದನೆಯ ದಿನಕ್ಕೆ ಋತುಮತಿ ಮದುವೆ ಮಾಡಿಸುತ್ತಾರೆ. ಫಲವಂತಿಕೆಯ ಸಂಕೇತವಾಗಿ ಹಲಸು ಬಾಳೆ, ತೆಂಗು, ಅಡಿಕೆ, ಮುಂತಾದ ಮರಗಳನ್ನು ಮುಟ್ಟಿ ನಮಸ್ಕರಿಸುವ ಕ್ರಮವಿದೆ. ಮೈ ನೆರೆದ ಹೆಣ್ಣು ಮದುವೆಯಾಗದಿದ್ದರೆ ಮಾವನ ಮನೆಗೆ ಅಥವಾ ಅಜ್ಜಿಯ ಮನೆಗೆ ಹೋಗಿ ಒಂದು ರಾತ್ರಿ ಉಳಿಯುವ ಕ್ರಮವಿದೆ. ಮದುವೆ ಆದ ಹೆಣ್ಣಾದರೆ ಗಂಡನ ಮನೆಗೆ ಕಳುಹಿಸಿಕೊಡುತ್ತಾರೆ.ಹೆಣ್ಣು ಮೈನೆರೆದಾಗ ಒಂದು ದಿನವಾದರು ತಾನು ಹುಟ್ಟಿ ಬೆಳೆದ

ಮನೆಯಿಂದ ಹೊರಗಿರಬೇಕು ಎಂದು ಮೇರರು ಭಾವಿಸುತ್ತಾರೆ ಇಲ್ಲಿ ಗುರಿಕಾರ ಮುಂದೆ ನಿಂತು ಈ ಕಾರ್ಯವನ್ನು ಮಾಡಿಸುತ್ತಾನೆ.

ಮದುವೆ ಆದ ನಂತರ ಹೆಣ್ಣು ಮೈನೆರೆದರೆ ನಿಷೇಕ ಶಾಸ್ತ್ರವನ್ನು ಮೇರರು ಮಾಡುತ್ತಾರೆ. ಮೈನೆರೆದು ಸೂತಕ ಕಳೆಯುವ ದಿವಸ. ಅಂದರೆ ಐದನೆ ದಿನಕ್ಕೆ ಈ ಶಾಸ್ತ್ರ ಮಾಡುತ್ತಾರೆ. ಹೆಣ್ಣು ತವರಿನಲ್ಲಿ ಮೈನೆರೆದ ವರ್ತಮಾನ ತಿಳಿದ ಗಂಡಿನ ಮನೆಯವರು ಎಲೆ ಅಡಿಕೆ ತಂಬಾಕು ತೆಗೆದುಕೊಂಡು ಹೋಗುತ್ತಾರೆ. ಕೆಲವರು ತಲನೀರ ಶಾಸ್ತ್ರ ಮುಗಿಸಿ ಅಲ್ಲಿ ಉಳಿದುಕೊಳ್ಳುತ್ತಾರೆ. ಆ ದಿನ ರಾತ್ರಿ ಮಾಂಸದೂಟವಿರುತ್ತದೆ.

(ಆ) ಮೇರರ ವಿವಾಹ

ಮೇರರು ಮುಖ್ಯವಾಗಿ ಮಾತೃವಂಶೀಯ ಕುಟುಂಬ ವ್ಯವಸ್ಥೆಯನ್ನು ಪಾಲಿಸುವವರು. ಇತರ ಜಾತಿಯವರಂತೆ ಮೇರರು ಮದುವೆ ನಿಶ್ಚಯದಲ್ಲಿ ಬಳಿಯನ್ನು ನೋಡುತ್ತಾರೆ. ಸಮಬಳಿಯವರಲ್ಲಿ ವಿವಾಹ ನಿಷಿದ್ಧ. ಅಜ್ಜ, ಅಕ್ಕ, ಭಾವ ಒಪ್ಪಿದವರನ್ನು ಮದುವೆಯಾಗುತ್ತಾರೆ. ಹೆಣ್ಣನ್ನು ನೋಡಲು ಹುಡುಗನ ಅಜ್ಜ, ಭಾವ ಹೋಗುವುದು ವಾಡಿಕೆ. ಹೆಂಗಸರು ಹೆಣ್ಣನ್ನು ನೋಡಲು ಹೋಗುವ ಕ್ರಮವಿಲ್ಲ. ಹೆಣ್ಣನ್ನು ನೋಡಲು ಹೋದಾಗ ಸಂಬಂಧ ಒಪ್ಪಿಗೆಯಾದರೆ ಊಟ ಮಾಡುತ್ತಾರೆ. ಒಪ್ಪಿಗೆಯಾಗದಿದ್ದರೆ ಹಾಗೆಯೆ ಹಿಂದಿರುಗುತ್ತಾರೆ.

ಮೇರರಲ್ಲಿ ಮದುವೆ ನಿಶ್ಚಯವಾದ ಮೇಲೆ ದಿಬ್ಬಣ ತೆಗೆದುಕೊಂಡು ಗಂಡಿನ ಮನೆಯವರು ಹೆಣ್ಣಿನ ಮನೆಗೆ ಹೋಗುತ್ತಾರೆ. ಗಂಡಿನ ಮನೆಯವರು ಮದುಮಗಳಿಗೆ ಸೀರೆ, ರವಕೆ, ಲಂಗ, ಕರಿಮಣಿಸರ, ಕಳಸ ಕನ್ನಡಿ, ತೆಂಗಿನಕಾಯಿ, ಐದುಪಾವು ಅಕ್ಕಿ ತೆಗೆದುಕೊಂಡು ಹೋಗುತ್ತಾರೆ. ಐದು ಪಾವು ಅಕ್ಕಿಯನ್ನು ಗುರಿಕಾರ ತಲೆಯ ಮೇಲೆ ಹೊತ್ತು ಹೆಣ್ಣಿನ ಮನೆಗೆ ಹೋಗಬೇಕು.ಅದನ್ನು ಮೂಹೂರ್ತದ ಅಕ್ಕಿ ಎನ್ನುವುದು. ಮೂಹೂರ್ತದ ಅಕ್ಕಿ ಹೆಣ್ಣಿನ ಮನೆಗೆ ತಲುಪಿದ ಮೇಲೆಯೇ ದಿಬ್ಬಣ ಬರಬೇಕು. ಮದುವೆಯ ದಿನ ಬಳಮೀಸುವ ಶಾಸ್ತ್ರವಿದೆ. ಹುಡುಗನ ದಿಬ್ಬಣ ಹುಡುಗಿಯ ಮನೆಗೆ ಬಂದ ಮೇಲೆ ಬಳುಮೀಸುವ ಶಾಸ್ತ್ರ ನಡೆಯತ್ತದೆ. ಬಳು ಮೀಸುವ ಮೊದಲು ಗುರಿಕಾರ ಕೊಡನೀರು ಪೂಜೆಮಾಡುತ್ತಾನೆ. ಅನಂತರ ಹುಡುಗಿಯ ಅಜ್ಜ ಅಥವಾ ಸೋದರ ಮಾವ ಮೊದಲು ನೀರು ಹಾಕಬೇಕು. ಗುರಿಕಾರ ಎಲೆ ಅಡಿಕೆ ಶಾಸ್ತ್ರ, ಮಣ್ಣುಮುದ್ದೆ ಶಾಸ್ತ್ರ ಮಾಡುತ್ತಾನೆ. ಹುಡುಗನ ಕಡೆಯ ನೆಂಟರು ಹುಡುಗಿಯ ತಲೆಯ ಮೇಲೆ ಒಂದು ಚೆಂಬು ನೀರು ಹಾಕಿ ಹುಡುಗಿಯ ತಂದೆಗೆ ಕಾಣಿಕೆ ನೀಡುತ್ತಾರೆ. ಬಳು ಮೀಸುವಾಗ ಭತ್ತದ ಮುಡಿ, ಒನಕೆ, ತೆಂಗಿನಕಾಯಿಯ ಮೇಲೆ ಕೂರಿಸಿ ನೀರು ಹಾಕುತ್ತಾರೆ. ಬಳುಮೀಸಿದ ನಂತರ ತಾಯಿ ಮನೆಯವರ ನಂಬಿಗೆ ಸೀರೆಯನ್ನು ಉಡಿಸುತ್ತಾರೆ.

ಮೂರು ಮಣ್ಣಿನ ಮುದ್ದೆಗಳನ್ನು ಮಾಡಿ ಒಂದು ಹಲಗೆಯ ಮೇಲೆ ಮುಂಡ್ಕನನ್ನು ಹುಗಿಯುತ್ತಾರೆ. ಅದರೊಂದಿಗೆ ಹಲಸಿನ ಮತ್ತು ಮಾವಿನ ಕುಡಿಗಳನ್ನು ತಂದು ಹುಗಿಯುತ್ತಾರೆ. ಅದನ್ನು ಮಹೂರ್ತದಕಂಬ ಎನ್ನುತ್ತಾರೆ ಈ ಕಾರ್ಯವನ್ನು ಗುರಿಕಾರ ನೆರವೇರಿಸಿ ಕೊಡುತ್ತಾನೆ.

ಸಿಂಗಾರಗೊಂಡ ಹೆಣ್ಣನ್ನು ಧಾರೆ ಎರೆದು ಕೊಡುತ್ತಾರೆ. ಐದು ಜನ ಮುತ್ತೈದೆಯರು ತಗಣಿಬಟ್ಲು[೧೧] ಮಾಡುತ್ತಾರೆ. ಮದುವೆ ಕಾರ್ಯಗಳೆಲ್ಲ ಮುಗಿದ ಮೇಲೆ ದಿಬ್ಬಣ ಕಳುಹಿಸುವಾಗ ಮಹೂರ್ತದ ಅಕ್ಕಿಯನ್ನು ಹುಡುಗಿಯ ಮಡಿಲಿಗೆ ಹಾಕುವ ಶಾಸ್ತ್ರವಿದೆ. ಇದನ್ನು ಮಡಿಲು ತುಂಬಿಸುವುದು ಎನ್ನುತ್ತಾರೆ. ಅನಂತರದಲ್ಲಿ ಹೆಣ್ಣನ್ನು ಗಂಡಿನ ಕಡೆಯವರಿಗೆ ಒಪ್ಪಿಸಿ ಕೊಡುತ್ತಾರೆ. ಅನಂತರದಲ್ಲಿ ಒಂದೆರಡು ದಿನ ಬಿಟ್ಟು ಸಮ್ಮಾನದ ಊಟಕ್ಕೆ ಗಂಡಿನ ಕಡೆಯವರು ಹೆಣ್ಣಿನ ಕಡೆಯವರಿಗೆ ವೀಳ್ಯ ನೀಡುತ್ತಾರೆ. ಗಂಡಿನ ಮನೆಯಲ್ಲಿ ಸಮ್ಮಾನದ ಊಟಕ್ಕೆ ಎರಡು ಕಡೆಯವರು ತಮ್ಮ ಅಂತಸ್ತು, ಬಳಗ ತೋರಿಸಲು ಜನಸೇರಿಸುತ್ತಾರೆ.

ಸಮ್ಮಾನದೂಟ ಮುಗಿದ ಮೇಲೆ ಮರುತೊಡಮನಿ ಶಾಸ್ತ್ರ ನಡೆಯುತ್ತದೆ. ಇದನ್ನು ನೀರ್‌ಗಂಜಿಶಾಸ್ತ್ರ ಎಂದು ಕರೆಯುತ್ತಾರೆ. ಹೆಣ್ಣಿನ ಮನೆಗೆ ಬಂದ ಗಂಡಿನ ಕಡೆಯವರಿಗೆ ಕುಚ್ಚಿಗೆಅಕ್ಕಿ ಗಂಜಿ ಮಾಡಿ ಬಡಿಸುವಂತದ್ದು ಆ ದಿನದ ವಿಶೇಷವಾಗಿದೆ. ಪರಸ್ಪರರು ಹೊಂದಾಣಿಕೆ ಮಾಡಿಕೊಂಡು ಹೋಗುವ ಒಂದು ಆಚರಣೆ ಇದಾಗಿದೆ.

### ೮.೪.ಬಂಟರ ಆಚರಣೆಗಳು

ಬಸರೂರಿನ ಬಂಟರು ಭೂ ಮಾಲಿಕರು ಇವರು ಶ್ರೇಣಿಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಬ್ರಾಹ್ಮಣರ ನಂತರದ ಸ್ಥಾನವನ್ನು ಪಡೆದುಕೊಳ್ಳುತ್ತಾರೆ. ದೇವಸ್ಥಾನ ಮತ್ತು ದೈವಸ್ಥಾನಗಳ ಮುಕ್ತೇಶ್ವರರು, ಗರಡಿಗಳ ಬಲ್ಲಾಳರು ಇವರಾಗಿದ್ದು ಬಸರೂರಿನ ಧಾರ್ಮಿಕ ವ್ಯವಸ್ಥೆಯಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದ್ದಾರೆ. ಬಸರೂರಿನಲ್ಲಿ ಬಂಟರು ಸಾಮಾಜಿಕವಾಗಿ, ರಾಜಕೀಯವಾಗಿ, ಮೇಲ್‌ಶ್ರೇಣಿಯಲ್ಲಿದ್ದಾರೆ. ಇಂದಿಗೂ ಭೂಮಾಲಿಕರಾಗಿದ್ದು ಅನೇಕ ಒಕ್ಕಲು ಕುಟುಂಬವನ್ನು ಹೊಂದಿದವರಾಗಿದ್ದಾರೆ. ಇವರ ಧಾರ್ಮಿಕ, ಸಾಮಾಜಿಕ ಕಾರ್ಯಕ್ರಮಗಳು ಅಳಿಯಸಂತಾನದ ನೆಲೆಯಲ್ಲಿಯೇ ನಡೆಯುತ್ತದೆ.

ಬಸರೂರಿನ ಬಂಟರ ಅಚರಣೆಗಳು ಇತರ ಪ್ರದೇಶದಲ್ಲಿ ವಾಸಿಸುವ ಬಂಟರ ಜೀವನಾವರ್ತನ ಆಚರಣೆಯಂತೆ ಇದೆ. ಸಾಮಾಜಿಕವಾಗಿ ಬಸರೂರಿನ ಬಂಟರು ಎಂಬುದು ಹೆಗ್ಗಳಿಕೆಯಾಗಿದೆ. ಬಸರೂರಿನ ಶಾಸನದಲ್ಲಿ ಹಲರು ಎಂಬ ಜನಸಮುದಾಯದ ಉಲ್ಲೇಖವಿದೆ.ಈ ಜನಸಮುದಾಯವೇ ಬಂಟರು ಎಂಬ ತೀರ್ಮಾನಕ್ಕೆ ಬರಲಾಗಿದೆ.

(ಅ) ಬಂಟರ ಹುಟ್ಟಿನ ಆಚರಣೆಗಳು

ಬಂಟರ ಮನೆಯಲ್ಲಿ ತುಂಬು ಗರ್ಭಿಣಿ ಮಲಗುವ ಕೋಣೆ ಪ್ರತ್ಯೇಕವಾಗಿರುತ್ತದೆ. ಆ ಕೋಣೆ ಅಡುಗೆ ಮನೆಗೆ ಹೊಂದಿಕೊಂಡಿರುತ್ತದೆ. ಹೆರಿಗೆಯಾದ ಕೂಡಲೆ ಬಾಣಂತಿಯ ಹೊಟ್ಟೆಯನ್ನು ಬಟ್ಟೆಯಿಂದ ಸುತ್ತಿ ಅಲ್ಲಿ ಮಲಗಿಸುತ್ತಾರೆ. ಮಗುವನ್ನು ಶುಚಿಗೊಳಿಸಿ ಗೆರಸಿಯಲ್ಲಿ ಬಟ್ಟೆಹಾಕಿ ಹನ್ನೊಂದು ದಿನಗಳವರೆಗೆ ಮಲಗಿಸುತ್ತಾರೆ. ಮೊದಲ ದಿನ ಬಾಣಂತಿಯ ಮತ್ತಿಯನ್ನು ಒಂದು ಮಣ್ಣಿನ ಮಡಕೆಯಲ್ಲಿ ಹಾಕಿ ಬಚ್ಚಲು ನೀರು ಹೋಗುವಲ್ಲಿ ಹೊಂಡ ತೋಡಿ ಇಡುತ್ತಾರೆ. ಆ ಹೊಂಡಕ್ಕೆ ಕಾರ್ಸಕನ ಎಲೆಯನ್ನು ಹಾಕಿಟ್ಟು ಮುಚ್ಚಿಡುತ್ತಾರೆ ಅದನ್ನು ಅಮೆಹೊಂಡ ಎಂದು ಕರೆಯುತ್ತಾರೆ. ಮೂರನೆ ದಿನ ಮಡಿವಾಳ್ತಿ ಮೂರರ ಸೂತಕ ತೆಗೆದು ಕಾರಬೂದಿ ಹಾಕಿ ಶುದ್ಧಮಾಡಿ ಹೋಗುತ್ತಾಳೆ. ಹತ್ತನೆಯ ದಿನಗಳ ತನಕ ಅಶೌಚವನ್ನು ಆಚರಿಸುತ್ತಾರೆ ಈ ಹತ್ತು ದಿನಗಳು ಬಾಣಂತಿ ಹೆರಿಗೆ ಕೋಣೆಯನ್ನು ಬಿಟ್ಟು ಹೊರಬರುವುದಿಲ್ಲ. ಹೆತ್ತ ಮೂರನೆ ದಿನಕ್ಕೆ ಮೂರರ ಅಮೆ ಮತ್ತು ಹನ್ನೊಂದನೆ ದಿನಕ್ಕೆ ಅಮೆ ಮುಚ್ಚಿ ಸೂತಕ ಕಳೆದುಕೊಳ್ಳುತ್ತಾರೆ. ಹನ್ನೊಂದನೆಯ ದಿನ ತೊಟ್ಟಿಲಿಗೆ ಹಾಕುವ ಶಾಸ್ತ್ರ ನಡೆಯುತ್ತದೆ. ಮಗುವನ್ನು ತೊಟ್ಟಿಲಿಗೆ ಹಾಕುವ ಪೂರ್ವದಲ್ಲಿ ಅಮೆ ಮುಚ್ಚುವ ಶಾಸ್ತ್ರ ಮಾಡುತ್ತಾರೆ. ಮನೆಯ ಹೆಂಗಸರು ಮತ್ತು ಮಡಿವಾಳ್ತಿ ಬಾಣಂತಿಯನ್ನು ಅಮೆ ಹೊಂಡದ ಬಳಿ ಕರೆದುಕೊಂಡು ಹೋಗುತ್ತಾರೆ. ಬಾಣಂತಿ ಬಸಳೆಯನ್ನು ನೆಟ್ಟು ಅದಕ್ಕೆ ಮಣ್ಣು ಹಾಕುತ್ತಾಳೆ. ಆಮೇಲೆ ಅದರ ಬುಡಕ್ಕೆ ನೀರೆರೆದು ದೀಪ ಹಚ್ಚುತಾಳೆ.ಅನಂತರ ವೀಳ್ಯದೆಲೆ ಇಟ್ಟು ತೆಂಗಿನಕಾಯಿ ಒಡೆದು ಪ್ರಾರ್ಥನೆ ಮಾಡುತ್ತಾಳೆ.ಬಸಳೆ ಬುಡದಲ್ಲಿ ಇಟ್ಟ ವೀಳ್ಯದೆಲೆ ಮತ್ತು ತೆಂಗಿನ ಕಾಯಿಗಳು ಮಡಿವಾಳ್ತಿಗೆ ಸಲ್ಲುತ್ತದೆ. ಅನಂತರ ಬಾಣಂತಿಯನ್ನು ಬಚ್ಚಲು ಮನೆಗೆ ಕರೆದುಕೊಂಡು ಹೋಗಿ ಹರಿ(ಹಂಡೆ) ಇಳಿಸುವ ಶಾಸ್ತ್ರ ಮಾಡುತ್ತಾರೆ. ಹನ್ನೊಂದನೆಯ ಬೆಳಿಗ್ಗೆ ಮಗು ಮತ್ತು ಬಾಣಂತಿಯ ಸ್ನಾನವಾದ ಮೇಲೆ ಮಡಿವಾಳ್ತಿ ತುಳಸಿಕಟ್ಟೆಯ ಹತ್ತಿರ ನಿಂತು ಪೂರ್ವಕ್ಕೆ ಮುಖಮಾಡಿ ಮಗುವನ್ನು ಸೂರ್ಯನಿಗೆ ತೋರಿಸುತ್ತಾಳೆ.

ಹನ್ನೊಂದನೆಯ ದಿನ ರಾತ್ರಿ ತೊಟ್ಟಿಲಿಗೆ ಹಾಕುವ ಶಾಸ್ತ್ರ ನಡೆಯುತ್ತದೆ. ಮಗುವಿಗೆ ಎಣ್ಣೆ ಸ್ನಾನ ಮಾಡಿಸಿ ಕಾಡಿಗೆ ಹಚ್ಚಿ, ಸೊಂಟ ಮತ್ತು ಕುತ್ತಿಗೆಗೆ ಕಪ್ಪು ನೂಲು ಕಟ್ಟುತ್ತಾರೆ.ತಂದೆ ಮನೆಯವರು ಹರಿವಾಣದಲ್ಲಿ ಸಕ್ಕರೆ, ಬಾಳೆಹಣ್ಣು, ಎಲೆ ಅಡಿಕೆ, ಹೊಸಬಟ್ಟೆ ಮತ್ತು ಆಭರಣವನ್ನು ಇಟ್ಟು ಮಗುವಿನ ತಾಯಿಗೆ ನೀಡುತ್ತಾರೆ. ಮಗುವಿನ ಬಾಯಿಗೆ ಬಜೆ ಹಾಕಿ, ಮರಚಟಿಕೆ ಮೇಲೆ ಅನ್ನ ನುರಿದು ತಿನಿಸುತ್ತಾರೆ. ತಾಯಿ ಮಗುವನ್ನು ಎತ್ತಿಕೊಂಡು ಕುಳಿತುಕೊಳ್ಳುತ್ತಾಳೆ. ಮನೆಯವರು ಹೊರಗಿನವರು ಮಗುವಿಗೆ ಮತ್ತು ತಾಯಿಗೆ ಎಣ್ಣೆ ಎರೆಯುತ್ತಾರೆ ಶಾಶಿ ಹಾಕುತ್ತಾರೆ ಅನಂತರದಲ್ಲಿ ತೊಟ್ಟಿಲಿಗೆ ಹಾಕುವ ಶಾಸ್ತ್ರ ನಡೆಯುತ್ತದೆ.

ಮರದ ಅಥವಾ ಹಿತ್ತಾಳೆಯ ತೊಟ್ಟಿಲನ್ನು ಮೂಡು, ಪಡು ಇಲ್ಲವೇ ತೆಂಕು, ಬಡಗಾಗಿ ಕಟ್ಟುತ್ತಾರೆ. ತೊಟ್ಟಿಲಿನ ಹೊರಭಾಗಕ್ಕೆ ಸೆಗಣಿ ಮತ್ತು ಕರಕಿ ಹುಲ್ಲು ಮೆತ್ತಿರುತ್ತಾರೆ. ಭೂತ ಪ್ರೇತಗಳು ಬಾಧಿಸ ಬಾರದೆಂದು ಕಾರ್ಸಕನ ಎಲೆ ಕಟ್ಟಿರುತ್ತಾರೆ. ಜೊತೆಗೆ ಮಗುವಿಗೆ ಬೇಕಾದ ಶುಂಠಿ, ಬಜೆ ಮುಂತಾದ ವಸ್ತುಗಳನ್ನು ತೊಟ್ಟಿಲಸೆಳ್ಳಿ ಮಾಡಿ ಕಟ್ಟಿರುತ್ತಾರೆ. ಐದು ಕಾಯಿ ಗಂಟುಹಾಕಿ ಐದು ಸಲ ತೊಟ್ಟಿಲಿಗೆ ಹಾಕಿ ತೆಗೆದ ನಂತರ ಮಗುವನ್ನು ತೊಟ್ಟಿಲಲ್ಲಿ ಮಲಗಿಸುತ್ತಾರೆ. ಆ ದಿನ ರಾತ್ರಿ ಕಳ್ಳು, ಮೆಂತೆ ದೋಸೆ ಮಾಡಿ ಬಂದವರಿಗೆ ನೀಡುತ್ತಾರೆ. ಗಂಡು ಮಗುವಾದರೆ ಐದು ಸೇರು ಅಕ್ಕಿ ಮತ್ತು ಐದುಕಾಯಿ, ಹೆಣ್ಣು ಮಗುವಾದರೆ ನಾಲ್ಕು ಸೇರು ಅಕ್ಕಿ ಮತ್ತು ನಾಲ್ಕುಕಾಯಿ ಮಡಿವಾಳ್ತಿಗೆ ನೀಡುತ್ತಾರೆ.

### (ಆ) ಬಂಟರಲ್ಲಿ ತಲನೀರ್ ಮದಿ

ಬಂಟರಲ್ಲಿ ಹೆಣ್ಣು ಮೈನೆರದ ವರ್ತಮಾನವನ್ನು ಮೊಗವೀರರ ಮೂಲಕ ಕಳುಹಿಸಿಕೊಡುತ್ತಾರೆ. ಹೆಣ್ಣು ಮೈನೆರೆದ ವಿಷಯ ಮನೆಯ ಹೆಂಗಸರಿಗೆ ಗೊತ್ತಾದ ಕೂಡಲೆ ಆಕೆಯನ್ನು ತೆಂಗಿನ ಮರದ ಬುಡದಲ್ಲಿ ಕೂರಿಸಿ ಊರಿನ ಮೊದಲ ಮನೆಯ ಹೆಂಗಸು[೨] ಬಾವಿಯಿಂದ ನೀರು ಸೇದಿ ಆಕೆಗೆ ತಲೆಯ ಮೇಲೆ ನೀರೆರೆಯುತ್ತಾಳೆ. ಅನಂತರದಲ್ಲಿ ಆಕೆಯನ್ನು ಅಕ್ಕಿ ಮುಡಿಯ ಮೇಲೆ ಕೂರಿಸಿ ಆರತಿ ಬೆಳಗಿ ಶಾಸಿ ಹಾಕಲಾಗುತ್ತದೆ. ಮುಂದಿನ ಐದು ದಿನಗಳವರೆಗೆ ಮನೆಯವರಿಗೆ ಸೂತಕ. ಮೈನೆರೆದ ಹೆಣ್ಣು ಮನೆಯ ಹೊರಗೆ ಉಳಿಯುತ್ತಾಳೆ. ನಾಲ್ಕನೆಯ ದಿನ ಮಡಿವಾಳ್ತಿ ಮೈನೆರೆದ ಹೆಣ್ಣನ್ನು ಕೆರೆ ಸ್ನಾನ ಮಾಡಿಸಿ ಆಕೆಯನ್ನು ಶುದ್ಧಗೊಳಿಸುತ್ತಾಳೆ.

ಐದನೆಯ ದಿನ ತಲೆನೀರ್‌ಮದಿ. ಆ ದಿನ ಮಡಿವಾಳ್ತಿ ಬಂದು ಶುದ್ಧ ಮಾಡುವ ಕೆಲಸವನ್ನು ಮಾಡುತ್ತಾಳೆ. ತುಳಸಿಕಟ್ಟೆಯ ಎದುರಗಡೆ ಸೇಡಿಯಲ್ಲಿ ರಂಗೋಲಿ ಬರೆದು ಹೆಣ್ಣನ್ನು ಮಣೆಯ ಮೇಲೆ ಕೂರಿಸುತ್ತಾರೆ. ಮಡಿವಾಳ್ತಿ ಐದು ತಂಬಿಗೆಯಲ್ಲಿ ಮಾವಿನ ಎಲೆ,ಹಲಸಿನ ಎಲೆ,ಅಡಿಕೆ ಹಾಕಿ ನೀರು ತುಂಬಿಸಿ ಇಡುತ್ತಾಳೆ. ತಲನೀರ್ ಮದಿಗೆ ಬಂದವರು ಒಬ್ಬೊಬ್ಬರು ಒಂದೊಂದು ತಂಬಿಗೆ ನೀರನ್ನು ಹುಡುಗಿಯ ತಲೆ, ಭುಜ, ತೊಡೆಯ ಮೇಲೆ ಹೊಯ್ಯುತ್ತಾರೆ. ಅನಂತರ ಚೌರದವಳು ಹುಡುಗಿಯ ಕೈಯುಗರು, ಕಾಲುಗುರನ್ನು ಕತ್ತರಿಸುತ್ತಾಳೆ. ಆಕೆಗೆ ಮರ್ಯಾದೆಯಾಗಿ ಹುಡುಗಿಯ ಕೈಯಲ್ಲಿದ್ದ ಒಂದು ಪಟ್ಟಿ ಎಲೆ ಮತ್ತು ಅಡಿಕೆ ನೀಡುತ್ತಾರೆ. ಅನಂತರ ಮಡಿವಾಳ್ತಿ ಅರಸಿನ, ಸೀಗೆಕಾಯಿ ಪುಡಿಯನ್ನು ಕಲಸಿ ಹುಡುಗಿಯ ಮೈಗೆ ಹಚ್ಚುತ್ತಾಳೆ. ಅನಂತರದಲ್ಲಿ ಪುನಃ ಐದು ತಂಬಿಗೆ ನೀರನ್ನು ಮೊದಲಿನಂತೆ ಸಿದ್ಧಪಡಿಸಿ ಇಡುತ್ತಾಳೆ. ಈಗ ಸ್ನಾನ ಮಾಡಿಸುವ ಸರದಿ ಮನೆಯವರದ್ದು. ಮನೆಯವರು ನೀರು ಹೊಯ್ಯುವಾಗ ಹೆಣ್ಣಿನ ಮಾವನ ಹೆಂಡತಿ ಆಕೆಯ ಹಿಂದುಗಡೆ ಹರಿವಾಣ ಹಿಡಿದು ಆಕೆಯ ಮೇಲೆ ನೀರನ್ನು ಎರೆಯುವಾಗ

ನೀರನ್ನು ಹರಿವಾಣದಲ್ಲಿ ಹಿಡಿದಿಟ್ಟು ಆಕೆಗೆ ಸುಳಿದು ಹೆಣ್ಣನ್ನು ಮೀಸಲು ಬಂದ ಸಂಬಂಧಿಕರ ಮೇಲೆ ಚೆಲ್ಲುತ್ತಾರೆ. ಕೊನೆಯಲ್ಲಿ ಮಡಿವಾಳ್ತಿ ಕಾರಬೂದಿ ಹಾಕಿದ ಒಂದು ಕೊಡ ನೀರು ಹೊಯ್ಯುತ್ತಾಳೆ. ಹೀಗೆ ಶುದ್ಧಗೊಂಡ ಹೆಣ್ಣನ್ನು ಸಿಂಗರಿಸಿ ಅಕ್ಕಿಯ ಮುಡಿಯ ಮೇಲೆ ಕೂರಿಸುತ್ತಾರೆ. ಆಕೆಗೆ ತೆಂಗಿನ ಹೂವನ್ನು ಮುಡಿಸಿ ಸೇಸೆ[೧] ಹಾಕಿ ಆರತಿ ಮಾಡುತ್ತಾರೆ. ಐದನೇಯ ದಿನ ಸಂಬಂಧಿಕರು ಪಂಚಕಜ್ಜಾಯ ಮಾಡಿಕೊಂಡು ಬಂದು ಬಳಸುವ ಕ್ರಮ ಬಂಟರಲ್ಲಿಯೂ ಇದ್ದಿತ್ತು. ಬಂದವರಿಗೆ ಮಧ್ಯಾಹ್ನದ ಊಟಕ್ಕೆ ಬಸಲೆ ಪಲ್ಯ,ಕೋಳಿಮೊಟ್ಟೆ, ಮೀನುಸಾರು ಮಾಡುತ್ತಾರೆ. ಆದಿನ ಹುಡುಗಿಗೆ ಹುಗ್ಗಿ ಮಾಡಿ ಬಡಿಸುತ್ತಾರೆ. ತಲೆನೀರ್‌ಮದಿ ಬಂದವರಿಗೆ ಬೇಯಿಸಿದ ಕಡಲೆ, ಶುಂಠಿ ಪಾನಕ ನೀಡುತ್ತಾರೆ. ಹಿಂದೆಲ್ಲಾ ಮದುವೆಯಾದ ಮೇಲೆ ಮೈನೆರೆದರೆ ಮಂಚಲ ಮೇಲೆ ದಿಬ್ಬಣ ಕರೆದುಕೊಂಡು ಹೋಗುತ್ತಿದ್ದರು. ಸೂತಕ ಕಳೆದ ಮಡಿವಾಳ್ತಿಗೆ ಹೆಣ್ಣು ಮೈನೆರೆದಾಗ ಹಾಕಿದ ಬಟ್ಟೆ, ಒಂದು ಸೇರು ಅಕ್ಕಿ, ಒಂದುಕಾಯಿ ಮತ್ತು ಹಣ ನೀಡುತ್ತಾರೆ. ಚೌರದವಳಿಗೆ ಇದೆ ಬಗೆಯ ಮರ್ಯಾದೆ ಸಲ್ಲುತ್ತದೆ. ಈ ಎಲ್ಲಾ ಕಾರ್ಯಕ್ರಮ ಹೊತ್ತು ಮುಳುಗಿದ ಮೇಲೆ ನಡೆಯುತ್ತದೆ. ಮೈನೆರೆದ ಹೆಣ್ಣನ್ನು ಅಪ್ಪನ ಮನೆಯವರು ಕರೆದುಕೊಂಡು ಹೋಗುತ್ತಾರೆ. ಆಕೆ ಒಂದು ದಿನದ ಮಟ್ಟಿಗಾದರೂ ಮನೆಬಿಟ್ಟು ಹೊರಗಿರಬೇಕು.

### (ಇ) ಬಂಟರಲ್ಲಿ ಮದುವೆ

ಮದುವೆ ಜಾತಿ ವ್ಯವಸ್ಥೆಯನ್ನು ನಿರ್ಧರಿಸುವ ಪ್ರಮುಖವಾದ ಅಂಶವಾಗಿದೆ.ಇದು ಲೈಂಗಿಕ ಸಂಬಂಧವನ್ನು ಕಾನೂನು ಬದ್ಧಗೊಳಿಸುತ್ತದೆ. ಗಂಡು ಮತ್ತು ಹೆಣ್ಣಿನ ಫಲವಂತಿಕೆಯ ಆಶಯವನ್ನು ಈಡೇರಿಸುವ ಮಾಧ್ಯಮವಾಗುತ್ತದೆ. ಇದು ಮನುಷ್ಯನ, ದೈಹಿಕ ಮಾನಸಿಕ, ಸಾಮಾಜಿ, ಸಾಂಸ್ಕೃತಿಕ ಅಗತ್ಯಗಳನ್ನು ಪೂರೈಸುತ್ತದೆ. ಕುಟುಂಬ ನಂಬಿದ ಸಾಂಸ್ಕೃತಿಕ ಮೌಲ್ಯಗಳು, ಧಾರ್ಮಿಕ ಆಚರಣೆಗಳು ಇನ್ನೊಂದು ಪೀಳಿಗೆಗೆ ವರ್ಗಾಯಿಸಲು ಮದುವೆ ಮಾಧ್ಯಮವಾಗುತ್ತದೆ. ಈ ನಿಟ್ಟಿನಲ್ಲಿ ಬಂಟರ ಮದುವೆ ಕ್ರಮವನ್ನು ಈ ಅಧ್ಯಾಯದಲ್ಲಿ ಸ್ಥೂಲವಾಗಿ ವಿವೇಚಿಸಿದೆ.

ಬಂಟರ ಮದುವೆಗಳು ಬಳಿಯಿಂದ ಆರಂಭವಾಗುತ್ತದೆ. ಭಿನ್ನಭಿನ್ನ ಬಳಿಯ ನಡುವೆ ಸಂಬಂಧ ನಡೆಯುತ್ತದೆ. ಕುಟುಂಬದ ಹಿರಿಯರಿಗೆ ಹೆಣ್ಣು ಗಂಡು ಒಪ್ಪಿಗೆಯಾದರೆ ನಿಶ್ಚಯ ತಾಂಬೂಲವು ಹೆಣ್ಣಿನ ಮನೆಯಲ್ಲಿ ನಡೆಯುತ್ತದೆ. ನಿಶ್ಚಯ ತಾಂಬೂಲದ ದಿನ ಮದುವೆಯ ದಿನವನ್ನು ನಿಶ್ಚಯಿಸುತ್ತಿದ್ದರು. ಎರಡು ಕುಟುಂಬದವರು ತಾಂಬೂಲ ಬದಲಾಯಿಸಿಕೊಂಡು ಮದುವೆಯ ಕಾರ್ಯಕ್ಕೆ ಒಪ್ಪಿಗೆಯನ್ನು ಸೂಚಿಸುತ್ತಾರೆ. ಈ ಸಂದರ್ಭದಲ್ಲಿ ಮಾವನ ಪಾತ್ರ ಪ್ರಮುಖವಾಗಿರುತ್ತದೆ. ಮದುವೆ ವರನ ಅಥವಾ ವಧುವಿನ ಮನೆಯಲ್ಲಿ ನಡೆಯುತ್ತಿದ್ದಿತ್ತು.

ಮದುವೆ ಅಂಗವಾಗಿ ಎರಡು ಕಡೆಯವರು ದಿಬ್ಬಣ ಹೊರಡಿಸುತ್ತಾರೆ. ಹೆಣ್ಣಿನ ಮನೆಯಲ್ಲಿ ಮದುವೆಯಾದರೆ ಗಂಡಿನ ಕಡೆಯವರು ದಿಬ್ಬಣ ಹೊರಡುತ್ತಾರೆ. ದಿಬ್ಬಣದಲ್ಲಿ ಮದುಮಕ್ಕಳನ್ನು ದಂಡಿಗೆಯಲ್ಲಿ ಮೊಗವೀರರು ಹೊತ್ತುಕೊಂಡು ಹೋಗುತ್ತಾರೆ.ಇದು ಗಂಡಿನ/ಹೆಣ್ಣಿನ ಕಡೆಯವರ ಅಂತಸ್ತಿಗೆ ಅನುಗುಣವಾಗಿರುತ್ತದೆ.ಮದುವೆಮನೆಗೆ ತಲುಪಿದ ದಿಬ್ಬಣವನ್ನು ಎದುರುಗೊಂಡು ತೆಳಬಳಿ[೧೫] ತೆಗೆದು ಒಳ ಕರೆದುಕೊಳ್ಳುತ್ತಾರೆ.

ಧಾರೆಗೆ ಮೊದಲು ಬಳ್ಮೀಸುವ ಕ್ರಮ ಬಂಟರಲ್ಲಿದೆ. ಬ್ರಾಹ್ಮಣರ ಮನೆಯಿಂದ ತೆತ್ತಿಗಾರ್ತಿ[೧೬] ಕಳಸಕನ್ನಡಿ ಹಿಡಿದು ಮುತ್ತೈದೆಯರೊಂದಿಗೆ ಮೆರವಣಿಗೆಯಲ್ಲಿ ಹೋಗಿ ಊರಿನ ಬ್ರಾಹ್ಮಣರ ಮನೆಯಿಂದ ಕೊಡನೀರ್ ತರುತ್ತಾಳೆ. ಅದಕ್ಕೆ ಹಲಸು,ಮಾವಿನ ಎಲೆ,ಅಡಿಕೆ ಮುಂತಾದವುಗಳನ್ನು ಹಾಕಿ ಮದುಮಕ್ಕಳ ಸ್ನಾನಕ್ಕೆ  ಮಡಿವಾಳ್ತಿ ನೀರು ಕಾಯಿಸುತ್ತಾಳೆ. ಹುಡಗನಿಗೆ ಕ್ಷೌರಿಕ ಕೂಪು ಮುಟ್ಟಿಸುತ್ತಾನೆ ಅನಂತರದಲ್ಲಿ ಬಳಮೀಸುವ ಶಾಸ್ತ್ರ ನಡೆಯುತ್ತದೆ.ಮಾವ ಹೆಣ್ಣಿನ ಕಾಲಿಗೆ ಕಾಲುಂಗುರ ತೊಡಿಸುತ್ತಾನೆ.ನೆಸಲಗಂಧ ಹಾಕಿ ಅಕ್ಷತೆ ಹಾಕುತ್ತಾರೆ. ಅನಂತರದಲ್ಲಿ ಬಳಮೀಸುವ ಶಾಸ್ತ್ರ ನಡೆಯುತ್ತದೆ.ಈ ಕಾರಣದಿಂದ ಮದುವೆಯಾಗಿ ಗಂಡನ ಮನೆಗೆ ಬಂದ ವಧುವನ್ನು ಬೊಳಿಮೇಸ್ತಿ[೧೭] ಎಂದು ಕರೆಯುವುದು ವಾಡಿಕೆ. ಬಳ್ಮಿಂದ ಸಿಂಗಾರಗೊಂಡ ವಧು ವರರನ್ನು ಮಂಟಪಕ್ಕೆ ಕರೆತರುತ್ತಾರೆ. ವರನನ್ನು ಆತನ ಭಾವನು ವಧುವನ್ನು ಆಕೆಯ ಅತ್ತಿಗೆ ಕೈಹಿಡಿದು ಮಂಟಪಕ್ಕೆ ಕರೆತರುತ್ತಾರೆ.ಹುಡುಗಿಯ ತಂದೆ ತಾಯಿ ಧಾರೆಗಿಂಡಿಯಿಂದ ಕೈಧಾರೆ ಎರೆಯುತ್ತಾರೆ. ಇಲ್ಲಿ ಕೈಧಾರೆ ಮತ್ತು ಬುಡುಧಾರೆ ಎನ್ನುವ ಎರಡು ವಿಧಿಗಳಿವೆ. ನವದಂಪತಿಗಳ ಮದುವೆಯ ಕ್ರಮದಲ್ಲಿ ಕೈಧಾರೆ, ವಿಧವಾ ವಿವಾಹ ಪದ್ಧತಿಯಾದರೆ ಬುಡುಧಾರೆ ಎರೆಯುತ್ತಾರೆ. ವರನು ವಧುವಿನ ಕೊರಳಿಗೆ ಮಂಗಳ ಸೂತ್ರವನ್ನು ಕಟ್ಟುತ್ತಾನೆ. ಐದು ಜನ ಮುತ್ತೈದೆಯರು ವಧೂವರರಿಗೆ ಆರತಿ ಬೆಳಗುತ್ತಾರೆ. ಮದುವೆಯ ಕೊನೆಗೆ ಕೈ ಒಪ್ಪಿಸಿ ಕೊಡುವ ಶಾಸ್ತ್ರ ನಡೆಯುತ್ತದೆ. ಹಿಂದೆ ಮದುವೆಯ ದಿನ ವರನು ವಧುವಿಗೆ ಸೀರದಟ್ಟಿ[೧೮] ಎನ್ನುವ ಕಾಣಿಕೆಯನ್ನು ಕೊಡುತ್ತಿದ್ದನು. ಈ ಕಾಣಿಕೆ ಪತ್ನಿಯೂ ಪತಿಯಿಂದ ವಿವಾಹ ವಿಚ್ಛೇದನ ಪಡೆಯುದಿದ್ದರೆ ಅದನ್ನು ಮರಳಿ ಕೊಡಬೇಕು ಎನ್ನುವ ನಿಯಮ ಜಾರಿಯಲ್ಲಿದ್ದಿತ್ತು. ಕೈಒಪ್ಪಿಸಿಕೊಟ್ಟ ಹೆಣ್ಣು ಗಂಡನ ಮನೆಗೆ ಪ್ರವೇಶ ಮಾಡುವ ಮೊದಲು ತೆಳಬಳಿ ಶಾಸ್ತ್ರ ಮಾಡುತ್ತಾರೆ. ತುಳಸಿಕಟ್ಟೆಗೆ ಅಡ್ಡ ಬೀಳಿಸಿ ಮನೆತುಂಬಿಸಿಕೊಂಡು ಪುನಃ ಆರತಿ ಮಾಡಿ ಹಾಲುತುಪ್ಪವನ್ನು ಕುಡಿಯಲು ಕೊಡುತ್ತಾರೆ. ಗಂಡು ಕುಡಿದ ನಂತರ ಹೆಣ್ಣು ಸ್ವೀಕರಿಸುತ್ತಾಳೆ. ಆ ದಿನ ದಾರಿ ಎರೆದ ಕಾಯಿಯನ್ನು ಪಾಯಸ ಮಾಡಿ ವಧುವಿನ ಕೈಯಿಂದ ವರನಿಗೆ ಬಡಿಸುತ್ತಾರೆ. ಇದನ್ನು ಸೆಟ್ಟಹಿಡಿಸುವುದು ಎನ್ನುತ್ತಾರೆ. ಸೆಟ್ಟ ಹಿಡಿದು ಬಡಿಸಿದ ವಧುವಿಗೆ ವರ ಉಡುಗೊರೆ ಕೊಡುತ್ತಾನೆ.

ಮದುವೆ ನಂತರ ಗಂಡಿನ ಮನೆಯಲ್ಲಿ ಮಾಡುವ ಮಾಂಸದ ಊಟ ಸಮ್ಮಾನ ಅಥವಾ ತೊಡಮನಿಶಾಸ್ತ್ರ ಎಂದು ಕರೆಯುತ್ತಾರೆ. ಆ ದಿನ ಎರಡು ಕಡೆಯವರು ತಮ್ಮ ಅಂತಸ್ತನ್ನು ತೋರಿಸಲು ಜನಸೇರಿಸುತ್ತಾರೆ. ಈ ರೀತಿ ಹೆಣ್ಣಿನ ಮನೆಯಲ್ಲಿಯು ಸಮ್ಮಾನ ನಡೆಯುತ್ತದೆ. ಸಮ್ಮಾನ ಮುಗಿದ ಮೇಲೆ ಗಂಡು, ಹೆಣ್ಣಿನ ಮನೆಯ ಮನುಷ್ಯನಾಗುವ ಹಂತವಾಗಿ ಬಟ್ಟಲಲ್ಲಿ ಉಣ್ಣುವ ಕ್ರಮ ಇದೆ. ಇದನ್ನು ನೀರ್‌ಗಂಜಿ ಶಾಸ್ತ್ರ ಅಥವಾ ಬಟ್ಲಉಂಬುದು ಎನ್ನುತ್ತಾರೆ. ಈ ಬಗೆಯಲ್ಲಿ ಮದುವೆ ಆಚರಣೆಯ ಕೊನೆಗೊಳ್ಳುತ್ತದೆ.

ಈ ಅಧ್ಯಾಯದಲ್ಲಿ ಬಸರೂರಿನ ನಾಲ್ಕು ಜನಸಮುದಾಯಗಳ ಸಾಂಸ್ಕೃತಿಕ ಹೊಕ್ಕು ಬಳಕೆಯನ್ನು, ಜೀವನಾವರ್ತನ ಆಚರಣೆಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ. ಈ ಪ್ರದೇಶದ ಬಂಟರ, ಬಳೆಗಾರರ, ಮೇರರ, ಚಪ್ಪೆಕಾರ ಬಂಡಾರಿ ನಾಯ್ಕರ ಆಚರಣೆಗಳಲ್ಲಿ ಹುಟ್ಟು, ತಲೆನೀರಮದಿ, ಮದುವೆ ಮತ್ತು ಸಾವಿನ ಆಚರಣೆಗಳನ್ನು ಚರ್ಚಿಸಲಾಗಿದೆ, ಇವುಗಳು ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿದೆ ಮತ್ತು ಸಮಾನ ಅಂಶಗಳು ಇಲ್ಲಿವೆ. ಇಲ್ಲಿ ಆಯ್ಕೆ ಮಾಡಿಕೊಂಡ ಜನಸಮುದಾಯದ ಜೀವನಾವರ್ತನಗಳಲ್ಲಿ ಅನನ್ಯತೆಯ ಅಂಶವನ್ನು ಮಾತ್ರ ಗುರುತಿಸಿದೆ. ಭೂಮಾಲಕರಾದ ಬಂಟರು ಹುಟ್ಟಿನ ಆಚರಣೆಯ ಸಂದರ್ಭದಲ್ಲಿ ಮಗುವನ್ನು ಸೂರ್ಯನಿಗೆ ತೋರಿಸುತ್ತಾರೆ.ತೊಟ್ಟಿಲಿಗೆ ಹಾಕುವಾಗ ಐದುತೆಂಗಿನ ಕಾಯಿಯನ್ನು ಹಾಕುತ್ತಾರೆ. ಈ ಬಗೆಯ ಕ್ರಮಗಳು ಬಂಟರು ಕೃಷಿ ಸಂಸ್ಕೃತಿಯನ್ನು ಅನುಸರಿಸುವವರು ಎಂದು ತಿಳಿಯುತ್ತದೆ. ಹೆಣ್ಣು ಹುಟ್ಟಿದರೆ ಮಡಿವಾಳ್ತಿಗೆ ಕಡಿಮೆ ಸಂಭಾವನೆ ಬಂಟರಲ್ಲಿರುವ ವರದಕ್ಷಿಣೆಯ ಪ್ರಭಾವ ಹೆಣ್ಣಿನ ಜನನದ ಮೇಲೆ ಬೀಳುವ ಪರಿಣಾಮವನ್ನು ತಿಳಿಸಿಕೊಡುತ್ತದೆ. ಸಾಮಾನ್ಯವಾಗಿ ಕೃಷಿಕೂಲಿಕಾರ್ಮಿಕರಾಗಿರುವ ಚಪ್ಪೆಕಾರರ ಹುಟ್ಟಿನ ಆಚರಣೆಗಳಲ್ಲಿ ಗುಂಡುಕಲ್ಲು ಬಳಸುವುದು ಶ್ರಮಸಂಸ್ಕೃತಿಯನ್ನು ತಿಳಿಸಿಕೊಡುತ್ತದೆ. ಮತ್ತು ಸಟ್ಟಿದೇವರು ಆದಿಮ ಸಂಸ್ಕೃತಿಯ ಕುರುಹು ಆಗಿದೆ. ಬಳೆಗಾರರ ಹುಟ್ಟಿನ ಆಚರಣೆಗಳು ಅತ್ಯಂತ ಸರಳ ಆಚರಣೆಯಾಗಿದ್ದು ಅಲ್ಲಿ ಬಳಸುವ ಮಳಿಚಿಪ್ಪೆ ದೀಪ ಅವರ ಆರ್ಥಿಕ ಬಡತನವನ್ನು ಸೂಚಿಸುತ್ತದೆ.

ಬಂಟರು, ಮೇರರ, ಬಳೆಗಾರರ, ಚಪ್ಪೆಕಾರಬಂಡಾರಿನಾಯ್ಕರ ತಲೆನೀರ ಮದುವೆ ಶಾಸ್ತ್ರದಲ್ಲಿ ಸಾಮ್ಯತೆ ಇದ್ದರು ಬಂಟರಲ್ಲಿ ವಿಜೃಂಭಣೆ ಇದೆ. ಇದು ಮಾತೃಮೂಲೀಯ ಕುಟುಂಬ ವ್ಯವಸ್ಥೆಯನ್ನು ಅನುಸರಿಸುವ ಬಂಟರಲ್ಲಿ ಹೆಣ್ಣಿಗೆ ದೊರಕಿರುವ ಮಹತ್ವವನ್ನು ತಿಳಿಸುತ್ತದೆ. ಆದರೆ ಹುಟ್ಟಿನ ಸಂದರ್ಭದಲ್ಲಿ ಇದು ಕಾಣುವುದಿಲ್ಲ. ಬಂಟರ ಮದುವೆಯಲ್ಲಿ ನಡೆಯುವ ಬಳಮೀಸುವ ಕ್ರಮ ಬಂಟರ ಮದುವೆಯು ಅನನ್ಯತೆಯಾಗಿದೆ. ಮಾತೃಮೂಲೀಯ ಸಂಸ್ಕೃತಿಯನ್ನು ಅನುಸರಿಸುವ ಮೇರರು ಇದೇ ಕ್ರಮವನ್ನು ಅನುಸರಿಸುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಬಂಟರ ಮದುವೆಯ ಸ್ವರೂಪ ಬದಲಾಗಿದೆ.

ಬಳಮೀಸುವ ಶಾಸ್ತ್ರ ಕಣ್ಮರೆಯಾಗಿದೆ. ವರ ವಧುವಿಗೆ ಕೊಡುತ್ತಿದ್ದ ಉಡುಗೊರೆಗೆ ಪಾವಿತ್ರ್ಯತೆಗಿಂತ ಶ್ರೀಮಂತಿಕೆ ಹೆಚ್ಚಾಗಿದೆ.ಆದರೆ ಬಳೆಗಾರರು, ಮದುವೆಗಳಲ್ಲಿ ಬ್ರಾಹ್ಮಣರ ಕ್ರಮವನ್ನು ಅನುಸರಿಸುತ್ತಿದ್ದಾರೆ. ಈ ರೀತಿ ಬಸರೂರಿನ ಜನಸಮುದಾಯದ ಜೀವನಾವರ್ತನ ಆಚರಣೆಗಳಲ್ಲಿ ಕೊಡುಕೊಳುಗೆ ನಡೆದಿದೆ.

## ಕೊನೆ ಟಿಪ್ಪಣಿ

೧. ಮಗು ಹುಟ್ಟಿ ಏಳನೇಯ ದಿನದಲ್ಲಿ ಮಾಡುವ ಕ್ರಮ. ಒಂದು ಗೆರಸಿಯಲ್ಲಿ ಏಳು ಉದ್ದಿನ ದೋಸೆಯನ್ನು ಸುತ್ತಲೂ ಇಟ್ಟು ಗೆರಸಿಯ ನಾಲ್ಕು ಮೂಲೆಯಲ್ಲಿ ಪಾಯಸ ಬಡಿಸುತ್ತಾರೆ. ಹುರುಳಿ ಬೇಯಿಸಿ ಉಪ್ಪು ಸೇರಿಸಿ ಗೂಗ್ರೆ ಮಾಡಿ ಗೆರಸಿಯಲ್ಲಿ ಇಡುತ್ತಾರೆ. ಅನ್ನ, ಮೀನುಸಾರು ಹಾಕಿ ಅಕ್ಕಿ, ಕಾಯಿ ಇಟ್ಟು ಮರಸಿನ ಎಲೆಯನ್ನು ಅದರ ಮೇಲೆ ಲಿಂಗಾಕಾರದಲ್ಲಿ ಮುಚ್ಚಿ ಇಡಲಾಗುತ್ತದೆ. ಬೆಳಿಗ್ಗಿನ ಜಾವಕ್ಕೆ ಚಪ್ಪೆಕಾರರಲ್ಲದವರು ಇದನ್ನು ತೆಗೆದುಕೊಂಡು ಹೋಗಿ ಬೆಳಗಾಗುದರ ಒಳಗೆ ಗೆರಸಿಯನ್ನು ತಂದು ಇಡಬೇಕು ಇದಕ್ಕೆ ಸಟ್ಟಿದೇವರು ಎಂದು ಕರೆಯುವುದು.

೨. ಋತುಮತಿಯಾದ ಹೆಣ್ಣು ತನ್ನ ಅಂಗೈಯನ್ನು ಅರಸಿನ ಪುಡಿ ಮತ್ತು ಸುಣ್ಣ ಬೆರಸಿದ ಕೆಂಪಾದ ನೀರಿನಲ್ಲಿ ಅದ್ದಿ ತವರು ಮನೆಯ ಚಾವಡಿ ಗೋಡೆಗೆ ತ್ರಿಕೋನಾಕಾರದ ಕೈಗುರುತು ಹಾಕುತ್ತಾಳೆ. ಇದನ್ನು ಚಟ್ಟುಹೊಯ್ಯವುದು ಎನ್ನುತ್ತಾರೆ. ತ್ರಿಕೊನಾಕಾರದಲ್ಲಿ ಕಾಣುವ ಚಟ್ಟು ಮೂಲತಃ ಲೈಂಗಿಕ ಸಂಕೇತವಾಗಿರಬೇಕು. ಸಂತಾನಪೇಕ್ಷೆ ಮತ್ತು ಸೃಷ್ಟಿಕ್ರಿಯೆಗೆ ತಾನು ಸಿದ್ಧಳಿದ್ದೇನೆ ಎಂಬ ಸೂಚ್ಯದ ನೆಲೆಯಲ್ಲಿ ಚಟ್ಟು ಹೊಯ್ಯುವ ಶಾಸ್ತ್ರದ ಆಚರಣೆ ಇದೆ. (ಪಾ.ನ ಮಯ್ಯ.;೧೯೯೫;ಪುಟ:೮೭).

೩. ಹೆರಿಗೆ ಮಾಡಿಸುವ ಅನುಭವಿ ಸ್ಥಳಿಯ ಮಹಿಳೆ.

೪. ಬಾಣಂತಿ ಸೊಂಟಕ್ಕೆ ಸಿಕ್ಕಿಸಿಕೊಳ್ಳುವ ಕಿರುಗತ್ತಿ. ಇದರ ಹಿಡಿಭಾಗದಲ್ಲಿ ಗೆಜ್ಜೆ ಇರುತ್ತದೆ.

೫. ಬಾಣಂತಿಯ ಮಾಸು ಮತ್ತು ಮಗುವಿನ ಕತ್ತರಿಸಿದ ಕರುಳ ಬಳ್ಳಿಯನ್ನು ಹಾಕಿ ಇಡುವ ಮಣ್ಣಿನ ಪಾತ್ರೆ

೬. ಸ್ನಾನದ ಕೋಣೆ.

೭ ಕರಾವಳಿಯಲ್ಲಿ ಸಿಗುವ ಕಪ್ಪೆಚಿಪ್ಪು.

೮. ಗಂಜಿನೀರು.

೯. ಪದ್ಮಾಸನ.

೧೦. ತಂದೆ ಅಥವಾ ತಾಯಿ ಸತ್ತಾಗ ಅವರ ಅಪರವಿಧಿಗಳನ್ನು ಮಾಡುವವರು.

೧೧. ಆರತಿ ಮಾಡುವುದು

೧೨. ದೈವದ ಮನೆಯ ಮುಕ್ತೇಶ್ವರರ ಮನೆಯವರು ಮೊದಲಿನ ಮನೆಯವರಾಗುವ ಕ್ರಮವಿದೆ. ಅವರನ್ನು ಮುಕ್ಕಾಲುಸೆಟ್ಟ್ರು ಎಂದು ಕರೆಯುತ್ತಾರೆ.

೧೩. ಅಕ್ಷತೆ.

೧೪. ಕ್ಷೌರಿಕಳು.

೧೫. ಅನ್ನದ ಬಟ್ಟಲಿಗೆ ತೆಳಿ, ಮಸಿ ಮತ್ತು ಒಣಮೆಣಸು ಹಾಕಿ ದೃಷ್ಟಿ ತೆಗೆಯುವುದು.

೧೬. ತೆತ್ತಿಗಾರ ಎಂದರೆ ಹೊಣೆಗಾರ ಎಂಬ ಅರ್ಥವುಂಟು. ಮದುವೆಯ ಹೊಣೆಯನ್ನು ಹೊತ್ತವರು. ಸಾಮಾನ್ಯವಾಗಿ ಬಂಟರ ವಿವಾಹಗಳಲ್ಲಿ ಪ್ರತಿಯೊಂದು ಸಂದರ್ಭದಲ್ಲಿ ತೆತ್ತಿಗಾರ ಅಕ್ಕ ಭಾವನಿಗೆ ಹೆಚ್ಚು ಪ್ರಾಶಸ್ತ್ಯ ಇರುತ್ತದೆ. ಮದುವೆ ವಿಷಯದಲ್ಲಿ ತಂದೆತಾಯಿಯಷ್ಟೆ ಜವಾಬ್ದಾರಿ ಅವರಿಗಿದೆ.

೧೭. ಬಳ್ ಮಿಂದು ಬಂದವಳು. ಬಳ್ಎಂಬ ಪದ ನದಿ, ಕೆರೆ ಎಂಬ ಅರ್ಥವನ್ನು ಸೂಚಿಸುತ್ತದೆ.

೧೮. ಇದನ್ನು ನಂಬಿಗೆ ಸೀರೆ ಎಂದೂ ಕರೆಯುತ್ತಾರೆ.

★★★

# ಅಧ್ಯಾಯ ಒಂಬತ್ತು

# ಸಮಾಪನ

## ೯.೧. ಬಸರೂರು ಅಂದು-ಇಂದು

ಬಸರೂರು ಎರಡು ಸಾವಿರ ವರ್ಷಗಳ ಇತಿಹಾಸವಿರುವ ಪಟ್ಟಣ. ಈ ಊರು ವಾರಾಹಿ ನದಿಯ ದಡದಲ್ಲಿದ್ದು, ಸಮುದ್ರದಿಂದ ಎರಡು ಕಿಲೋಮೀಟರ ದೂರದಲ್ಲಿದೆ. ಕ್ರಿಸ್ತಶಕದ ಆರಂಭದಿಂದಲೇ ಗ್ರೀಕರು, ರೋಮನ್ನರು ಬಸರೂರಿಗೆ ಬರುತ್ತಿದ್ದರೆಂಬುದು ಹಳೆಯ ದಾಖಲೆ. ಬಸರೂರು ೧೭ನೇ ಶತಮಾನದವರೆಗೆ ಭಾರತದ ಪಶ್ಚಿಮ ಕರಾವಳಿಯ ದೊಡ್ಡ ಪಟ್ಟಣವಾಗಿತ್ತು. ಅಳುಪರಿಂದ ಟಿಪ್ಪುವಿನವರೆಗೆ ಎಲ್ಲರೂ ಬಸರೂರಿನ ಮೇಲೆ ರಾಜಕೀಯವಾಗಿ ಹಿಡಿತ ಸಾಧಿಸಿದವರು. ಒಂದು ಕಾಲದ ಶ್ರೀಮಂತ ವ್ಯಾಪಾರಿ ಕೇಂದ್ರವಾದ ಬಸರೂರು ಶ್ರೀಮಂತ ವ್ಯಾಪಾರಿಗಳ ನಗರವೂ ಆಗಿದ್ದಿತ್ತು. ವ್ಯಾಪಾರಿಗಳಿಂದ ಬಸರೂರಿನ ಧಾರ್ಮಿಕ ವ್ಯವಸ್ಥೆ ಅನೂಚಾನವಾಗಿ ನಡೆದುಕೊಂಡು ಬರುತ್ತಿತ್ತು. ವಿಜಯನಗರದವರು ಧರ್ಮ ಮತ್ತು ಸಂಸ್ಕೃತಿಯ ರಕ್ಷಕರಾಗಿದುದ್ದರಿಂದ ಅವರ ಕಾಲದಲ್ಲಿ ಬಸರೂರಿನ ದೇವಾಲಯ, ದೈವಸ್ಥಾನಗಳಲ್ಲಿ ಎಲ್ಲಾ ಬಗೆಯ ಧಾರ್ಮಿಕ ಆಚರಣೆಗಳು ವ್ಯವಸ್ಥಿತವಾಗಿ ನಡೆಯುತ್ತಿದ್ದವು. ಬಸರೂರಿನ ಯಾವುದೇ ಧಾರ್ಮಿಕ ಕಾರ್ಯಕ್ಕೆ ಚ್ಯುತಿಯಾದರೇ 'ಹಲರು ಸೆಟ್ಟಿಕಾರರು ಪರಿಹರಿಸಿಕೊಡುವರು' ಎಂಬ ಶಾಸನ ಉಲ್ಲೇಖವಿದೆ. ನಖರೇಶ್ವರನ ದಿನ ನೈವೇದ್ಯ, ತೀರ್ಥ ಮಂಟಪದಲ್ಲಿರುವ ನಂದಿಯ ನೈವೇದ್ಯ, ಬಸರೂರು ಮಾಗಣೆಯ ಉಳ್ಳೂರು ದೇವರ ಪೂಜೆ, ನೂಲುಹಬ್ಬ, ಭೋಗ ಪಾತ್ರ, ತುಳುವೇಶ್ವರನ ಪ್ರತಿದಿನದ ನಂದಾದೀಪ, ತುಳುವೇಶ್ವರನ ಪೂಜೆ ಮಾಡುವ ಬ್ರಾಹ್ಮಣರ ಭೋಜನ, ಕೆಳಬಸರೂರಿನ ಕುಂದೇಶ್ವರನ ರುದ್ರಪೂಜೆ ಮತ್ತು ರಂಗಪೂಜೆ, ಮೂಡು ಮತ್ತು ತೆಂಕು ಕೇರಿಯ ಮಠದ ನಿರ್ವಹಣೆ, ದೇವರ ಮೊಸರೋಗರ, ಅಮೃತಪಡಿ, ದಿವಳಿಗೆ ಪೂಜೆ, ನವರಾತ್ರಿ ಪೂಜೆ, ಕಾರ್ತಿಕಪೂಜೆ, ನಖರೇಶ್ವರ ದೇವಾಲಯದ ಬ್ರಾಹ್ಮಣ ಸುವಾಸಿನಿಯರ ಭೋಜನ,

ತಿರುಮಲ ದೇವರ ಪೂಜೆ, ಶ್ರೀಲಕ್ಷ್ಮೀನಾರಾಯಣ ದೇವರ ರಂಗಪೂಜೆ ಮತ್ತು ನಿತ್ಯಪೂಜೆ, ರುದ್ರಾಭಿಷೇಕ, ಗೋಗಾಸ್ರ, ಮಾರಿಹಬ್ಬ ಈ ಎಲ್ಲಾ ಧಾರ್ಮಿಕ, ಸಾಮಾಜಿಕ ಕಾರ್ಯಗಳು ಚ್ಯುತಿ ಇಲ್ಲದೇ ನಡೆದುಕೊಂಡು ಹೋಗುತ್ತಿತ್ತು. ಬಸರೂರಿನ ಮಾಗಣೆಯ ದೇವರಾದ ಶ್ರೀ ಮಹಾಲಿಂಗೇಶ್ವರ ದೇವಾಲಯದ ಚಾಕರಿಗೆ ಹದಿನೆಂಟರಿಂದ ಇಪ್ಪತ್ತು ಮಂದಿ ಕಟ್ಟುಕಟ್ಟಲೆಯವರಿದ್ದಿದ್ದರು. ದಿನಕ್ಕೆ ಹನ್ನೆರಡು ಸೇರು ಅಕ್ಕಿ ನೈವೇದ್ಯವಾಗುತ್ತಿತ್ತು. ಐದು ಜನ ಪಂಚವಾದ್ಯಕ್ಕೆ ಐದು ಜನ, ವಾದ್ಯಕ್ಕೆ ಐದುಜನ ದೀವಟಿಗೆ ಎರಡು ಜನ, ಭೇರಿ ಬಾರಿಸುವವರು, ಕಸದವರು ದೇವಾಲಯದ ಚಾಕರಿಯವರು ನೈವೇದ್ಯವನ್ನೆ ದಿನಗೂಲಿಯಾಗಿ ಪಡೆಯುತ್ತಿದ್ದರು.ಅಷ್ಟವದಾನಸೇವೆ, ನರ್ತನ ಸೇವೆ ನಡೆಯುತ್ತಿದ್ದಿತ್ತು. ದೇವಾಲಯಗಳಿಗೆ ಮೂರು ನಾಲ್ಕು ಗ್ರಾಮಗಳು ಉಂಬಳಿಯಾಗಿದ್ದವು. ಬಸರೂರಿನ ವ್ಯಾಪಾರಿ ಸಂಘಗಳು ಇವನ್ನೆಲ್ಲಾ ನಿರ್ವಹಣೆ ಮಾಡುತ್ತಿದವು. ಈ ಬಗೆಯ ಗತವೈಭವ ಬಸರೂರಿಗೆ ಇದ್ದಿತ್ತು.

ಬಸರೂರು ಕರಕುಶಲಕರ್ಮಿಗಳ ತವರೂರರಾಗಿತ್ತು. ಗುಡಿಗಾರರಕೇರಿ, ಸಾಲಿಗರಕೇರಿ ಇಲ್ಲಿದ್ದಿತ್ತು. ಗುಡಿಕೈಗಾರಿಕೆಗಳಾದ ಕಬ್ಬಿಣ ಕರಗಿಸುವುದು, ಕಂಚು ಹಿತ್ತಾಳೆಯ ಸಾಧನ ಸಲಕರಣೆಗಳನ್ನು ತಯಾರಿಸುವುದು, ಚಿನ್ನ ಮತ್ತು ಬೆಳ್ಳಿಯ ವಿಗ್ರಹ ಮತ್ತು ಆಭರಣ ತಯಾರಿ, ಕೈಮಗ್ಗದ ಬಟ್ಟೆ ತಯಾರಿ, ಕಾಷ್ಠಶಿಲ್ಪ, ಯಕ್ಷಗಾನದ ಗೊಂಬೆಗಳು, ದೋಣಿಗಳು ಬಸರೂರಲ್ಲಿ ನಿರ್ಮಾಣಗೊಂಡು ಬೇರೆಬೇರೆ ಪ್ರದೇಶಗಳಿಗೆ ಮಾರಾಟವಾಗುತ್ತಿದ್ದವು. ಇಲ್ಲಿನ ಕುಶಲಕರ್ಮಿಗಳ ಕೌಶಲ್ಯ ಬೆರಗುಗೊಳಿಸುತ್ತಿತ್ತು. ಬಸರೂರಿನ ನಗರ ನಿರ್ಮಾಣದಲ್ಲಿ ಇವರು ವಹಿಸಿದ ಪಾತ್ರ ಆಧುನಿಕ ನಗರಗಳನ್ನು ಬೆರಗುಗೊಳಿಸುತ್ತದೆ. ಕೆರೆಗಳು, ನೀರು ಹರಿದುಹೋಗುವ ತೂಂಬುಗಳು, ಅಗಲವಾದ ರಸ್ತೆಗಳು ಅತ್ಯಂತ ವಿಶಿಷ್ಟವಾದವುಗಳಾಗಿವೆ. ಬಸರೂರಿನ ಒಂದು ಭಾಗದಲ್ಲಿ ವಿಪುಲವಾದ ಪಂಚಗಂಗಾವಳಿಯ ಹಿನ್ನೀರು ಮತ್ತೊಂದು ಕಡೆ ಬಸರೂರಿನ ಒಳಭಾಗದಲ್ಲಿ ಏಳು ಕೆರೆಗಳು, ಜಲಸಮೃದ್ಧಿಯ ಸಂಕೇತಗಳಾಗಿ ವರ್ಷವಿಡಿ ತುಂಬಿ ತುಳುಕುತ್ತಿತ್ತು.

ಬಸರೂರು ಕೃಷಿಸಂಸ್ಕೃತಿಯನ್ನು ಹೊಂದಿದ ಪ್ರದೇಶವಾಗಿತ್ತು. ಬಸರೂರಿನ ಸಮೃದ್ಧ ಕೃಷಿ ಗ್ರಾಮದಲ್ಲಿ ಅಕ್ಕಿ, ಕಬ್ಬು, ಬೆಲ್ಲ, ತೆಂಗಿನಕಾಯಿ, ಕರಿಮೆಣಸು ಮುಂತಾದ ಬೆಳೆಗಳು ಹೇರಳವಾಗಿ ಬೆಳೆಯುತ್ತಿದ್ದವು. ಇವುಗಳು ಬಸರೂರು ಬಂದರಿನ ಮೂಲಕ ಪರ್ಷಿಯ, ಅರೇಬಿಯಾ, ಓಮಜ್ ಮತ್ತು ನೋಲ್ಡಾಗಳಿಗೆ ರಫ್ತಾಗುತ್ತಿತ್ತು. ಹದಿನಾರನೆಯ ಶತಮಾನದ ಕೊನೆಯಭಾಗದವರೆಗೂ ಈ ಬಂದರಿನಿಂದ ವರ್ಷಕ್ಕೆ ಮೂರುವರೆ ಮಿಲಿಯ ಟನ್ ಅಕ್ಕಿ ಪೋರ್ಚುಗೀಸ ವಸಾಹತುಗಳಿಗೆ ರಫ್ತಾಗುತ್ತಿತ್ತು. ಪೋರ್ಚುಗೀಸರು ಮತ್ತು ಡಚ್ಚರು ಬಸರೂರಿನಲ್ಲಿ ಅಕ್ಕಿ ವ್ಯಾಪಾರದಲ್ಲಿ ತೊಡಗಿದ್ದರು. ಬಸರೂರಿನ ಅಕ್ಕಿಯನ್ನು ಪಡೆಯಲು ಅರಬ್ಬರು ಆಸಕ್ತರಾಗಿದ್ದರು. ಇಲ್ಲಿನ ಅಕ್ಕಿ ಮಸ್ಕತಿಗೆ ರಫ್ತಾಗುತ್ತಿದ್ದುದರಿಂದ, ಈ ಅಕ್ಕಿಯು

ಮಸ್ಕತ್‌ಅಕ್ಕಿ ಎಂದೇ ಪ್ರಸಿದ್ಧವಾಗಿತ್ತು.

ಬಸರೂರಿನ ಅಗ್ರಹಾರ ಕೇರಿಯೂ ಬ್ರಾಹ್ಮಣರ ಅಗ್ರಹಾರವಾಗಿದ್ದು, ಸಾಮೂಹಿಕ ಶಿಕ್ಷಣ ಸಂಸ್ಥೆಗಳಂತೆ ವಿದ್ಯಾದಾನ ಮಾಡುತ್ತಿದ್ದವು. ಗುಡಿಗಾರರ ಕೇರಿಗಳಲ್ಲಿ ಗುಡಿಗಾರರು, ಸೆಟ್ಟಿಗಾರರ ಕೇರಿಯಲ್ಲಿ ಸೆಟ್ಟಿಕಾರರು, ಪಳ್ಳಿಕೇರಿಯಲ್ಲಿ ಮುಸಲ್ಮಾನರು, ರಾಹುತ ಕೇರಿಯಲ್ಲಿ ದೇವದಾಸಿಯರು, ಬಸದಿಕೇರಿಯಲ್ಲಿ ಜೈನರು ವಾಸವಾಗಿದ್ದರು ಎಂಬುದು ತಿಳಿಯುತ್ತದೆ. ಈ ಎಲ್ಲಾ ಕೇರಿಗಳ ನಡುವೆ ಶ್ರೀಮಹಾಲಿಂಗೇಶ್ವರ ದೇವಾಲಯವು ಸಮನ್ವಯ ಸಾಧಿಸುತ್ತಿದ್ದಿತ್ತು. ಮುಖ್ಯದೇವಾಲಯದ ಎಲ್ಲಾ ಧಾರ್ಮಿಕ ಕಾರ್ಯಗಳಲ್ಲಿ ಈ ಎಲ್ಲಾ ಕೇರಿಯ ಜನವರ್ಗ ಭಾಗವಹಿಸುತ್ತಿದ್ದರು. ಗುಡಿಗಾರರು ಪಲ್ಲಕ್ಕಿ, ದೇವರವಾಹನ, ರಥ, ಮುಂತಾದವುಗಳನ್ನು ಮಾಡಿಕೊಡುತ್ತಿದ್ದರು. ಸೆಟ್ಟಿಗಾರರು ದೇವಾಲಯದ ಕಲಶಸೇವೆಗೆ, ರಂಗಪೂಜೆಗೆ, ಪತಾಕಿಗಳಿಗೆ ಮಡಿವಸ್ತ್ರವನ್ನು ತಯಾರಿಸಿಕೊಡುತ್ತಿದ್ದರು. ಕಂಬಾರರು ರಥೋತ್ಸವದ ದಿನ ರಥಕ್ಕೆ ಹೆಟಮಣಿ ಕೊಡುವ ಕೆಲಸ ಮಾಡುತ್ತಿದ್ದರು. ಈ ಬಗೆಯಲ್ಲಿ ಬಸರೂರಿನ ಜನವರ್ಗ ಬಸರೂರಿನ ಧಾರ್ಮಿಕ ಮತ್ತು ಸಾಂಸ್ಕೃತಿಕ ಆಚರಣೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು.

ಈ ಬಗೆಯ ಧಾರ್ಮಿಕ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹೊಂದಿದ ಬಸರೂರು. ಹದಿನೇಳನೆಯ ಶತಮಾನದಿಂದ ತನ್ನ ವೈಭವವನ್ನು ಕಳೆದುಕೊಂಡಿತು. ಬಸರೂರಿಗೆ ರಾಜಕೀಯ, ಧಾರ್ಮಿಕ, ಆರ್ಥಿಕ ಹಿನ್ನೆಡೆ ಉಂಟಾಯಿತು. ಬಸರೂರಿನ ಎಲ್ಲಾ ಚಟುವಟಿಕೆಗಳು ವಾರಾಹಿ ನದಿಯನ್ನು ಅವಲಂಬಿಸಿತ್ತು. ಕ್ರಿ.ಶ. ೧೭೪೦ರ ದಶಕಕ್ಕೆ ಸರಿಹೊಂದುವ ಹಲ್ಸನಾಡು ಕಡತ ಬಸರೂರು, ಆನಗಳ್ಳಿ, ಬರೆಗುಂಡಿಗಳಲ್ಲಿ ನದಿ ಉಕ್ಕಿ ಹರಿದು ಉಂಟಾದ ನಷ್ಟವನ್ನು ಉಲ್ಲೇಖಿಸಿದೆ. ಆ ಕಾಲಕ್ಕೆ ಬಸರೂರು ಬಂದರು ನಾಶಹೊಂದಿದೆ. ಇದಕ್ಕೂ ಹಿಂದೆ ಕ್ರಿ.ಶ. ೧೬೩೪ ರ ವೈಸರಾಯಿ ಸಮಿತಿಯ ವರದಿ ದೊಡ್ಡ ಹಡುಗುಗಳಿಗೆ ಇಳಿತದ ಸಮಯದಲ್ಲಿ ಬಸರೂರು ಬಂದರಿಗೆ ಹೋಗಲು ಆಗುತ್ತಿರಲ್ಲಿಲ್ಲ ಎಂದು ತಿಳಿಸಿದೆ. ಕ್ರಿ.ಶ. ೧೬೫೨ರ ಮೇ ತಿಂಗಳಿನಲ್ಲಿ ಗಂಗೊಳ್ಳಿ ಸಮೀಪ ಬಿರುಗಾಳಿ ಬೀಸಿ ಪೋರ್ಚುಗೀಸರ ನೌಕಾದಳ ನಾಶವಾಗಿರುದಲ್ಲದೇ, ಹದಿನಾಲ್ಕು ಯುದ್ಧ ಹಡಗು, ಸುಮಾರು ೧೪೦ ಜನರನ್ನು ಮತ್ತು ಸರಕು ತುಂಬಿದ ಹಡಗು ಮುಳುಗಿತು. ಈ ಘಟನೆಯಿಂದ ಬಸರೂರಿನ ಬಂದರಿಗೆ ಹಡುಗುಗಳು ಬರುವುದು ನಿಂತಿತು. ಇದರಿಂದಾಗಿ ಬಸರೂರಿಗೆ ಬರುತ್ತಿರುವ ಆದಾಯವೂ ಕಡಿಮೆಯಾಗಲಾರಂಭಿಸಿತು. ಅದೇ ಕಾಲಕ್ಕೆ ಕೆಳದಿ ನಾಯಕರ ಆಳ್ವಿಕೆ ಹೈದರನಿಂದ ಅಂತ್ಯವಾಯಿತು. ಬಸರೂರು ರಾಜಕೀಯವಾಗಿಯೂ ಅತಂತ್ರವಾಯಿತು.

ಭೌಗೋಳಿಕ ಅಸಮ್ಮತಿ, ಆರ್ಥಿಕ ಹಿನ್ನೆಡೆ, ರಾಜಕೀಯ ಸ್ಥಿತ್ಯಂತರ ಬಸರೂರಿನ

ಇತಿಹಾಸದ ದಿಕ್ಕನ್ನು ಬದಲಾಯಿಸಿತು. ವಾರಾಹಿ ನದಿಯನ್ನು ಅವಲಂಬಿಸಿ ನಿರ್ಮಾಣಗೊಂಡ ಬಸರೂರಿನ ಸಂಸ್ಕೃತಿ ನೆಲೆಯನ್ನು ಕಳೆದುಕೊಳ್ಳಲಾರಂಭಿಸಿತು. ಬಸರೂರಿನ ಸಂಸ್ಕೃತಿಯ ಪಲ್ಲಟಕ್ಕೆ ರಾಜಕೀಯ ಕಾರಣಕ್ಕಿಂತ ಹೆಚ್ಚಾಗಿ ಭೌಗೋಳಿಕ ಕಾರಣವೇ ಮುಖ್ಯವಾಗುತ್ತದೆ. ರೇವು ಪಟ್ಟಣ ನೆಲೆಯನ್ನು ಕಳೆದುಕೊಂಡ ಕೂಡಲೇ ಅದನ್ನು ನಂಬಿಕೊಂಡಿದ್ದ ಕುಶಲಕರ್ಮಿಗಳು ಉದ್ಯೋಗವನ್ನು ಕಳೆದುಕೊಡು ವಲಸೆ ಆರಂಭಿಸಿದರು. ಹದಿನಾರನೇಯ ಶತಮಾನದ ಉತ್ತರಾರ್ಧದಲ್ಲಿ ಬಸರೂರಿಗೆ ಬಂದ ಬಾರ್ಬೋಸ್ ಬಸರೂರಿನಲ್ಲಿದ್ದದ್ದು ಒಂದೇ ಗುಡಿಗಾರರ ಮನೆ ಎಂದಿದ್ದಾನೆ. ಗುಡಿಗಾರರ ಕೇರಿ ಇದ್ದ ನಗರದಲ್ಲಿ ಒಂದೇ ಗುಡಿಗಾರರ ಮನೆಯಿರುವುದು ಸಾಧ್ಯವಿಲ್ಲ. ಆ ಕಾಲಕ್ಕೆ ಬಸರೂರಿನ ಕುಶಲಕರ್ಮಿಗಳ ವಲಸೆ ಆರಂಭವಾಯಿತು. ಸೆಟ್ಟಿಕಾರರು ನೆಯ್ಗೆಬಿಟ್ಟು ಕೃಷಿಗೆ ಸಂಬಂಧಿಸಿದ ಉತ್ಪನ್ನ ತಯಾರಿಸಲಾರಂಭಿಸಿದರು.ಅವಲಕ್ಕಿ ಕುಟ್ಟುವ ಉದ್ಯಮ ಮಾಡಿದರು. ದೇವಾಲಯಗಳಿಗೆ, ದೇವಸ್ಥಾನಗಳಿಗೆ ರೇವಿನಿಂದ ಬರುವ ಆದಾಯ ಮತ್ತು ಅರಸರುಗಳಿಂದ ಬರುವ ದಾನದತ್ತಿಗಳು ನಿಂತುಹೋಯಿತು.ಬಸರೂರಿನ ದೇವಾಲಯಗಳು ಆ ಕಾಲಕ್ಕೆ ಕೊಳ್ಳೆಹೋದವು. ದೇವಾಲಯದ ಆಚರಣೆಗಳು ಸಾಂಕೇತಿಕವಾಗಲಾರಂಭಿಸಿತು ಮತ್ತು ದೇವಾಲಯವನ್ನು ನಂಬಿಕೊಂಡವರು ಬೇರೆ ಬೇರೆ ಉದ್ಯೋಗಗಳಿಗೆ ವಲಸೆ ಹೋಗುವಂತೆ ಮಾಡಿತು. ನರ್ತನ ಸೇವೆ ಮಾಡುತ್ತಿದ್ದವರು ವಸಾಹತುಶಾಹಿಯ ಸಂದರ್ಭದಲ್ಲಿ ವಲಸೆಯೊಂದಿಗೆ ಬೇರೆ ಬೇರೆ ಉದ್ಯೋಗ ಆರಂಭಿಸಿದರು.

ಬಸರೂರು ರಾಜಾಶ್ರಯವನ್ನು ಕಳಕೊಂಡ ತರುವಾಯ ದೇವಾಲಯದಲ್ಲಿ ತಟ್ಟೆಚಾಕರಿ ಮಾಡುತ್ತಿದ್ದವರು ಹೊಸ ಬದುಕನ್ನು ಆರಂಭಿಸಿದರು. ಹವ್ಯಾಸಿ ನಾಟಕ ಕಂಪನಿಗಳನ್ನು ಮಾಡಿಕೊಂಡು ಊರೂರು ಸುತ್ತಲಾರಂಭಿಸಿದರು. ಪೌರಾಣಿಕ ಪ್ರಸಂಗವನ್ನು ಮಾಗಣೆಗಳ ದೇವಸ್ಥಾನ ಮತ್ತಿತ್ತರ ಕಡೆಗಳಲ್ಲಿ ಪ್ರದರ್ಶನ ಮಾಡಿದರು. ಅನಂತರದ ಕಾಲಘಟ್ಟದಲ್ಲಿ ನೀಲಮಣಿ ನಾಟಕ ಕಂಪನಿ ಎಂಬ ನಾಟಕ ಮಂಡಳಿ ಆರಂಭವಾಯಿತು. ಬಸರೂರಿನ ರಾಹುತಕೇರಿಯ ಏಳು ಜನ ಮಹಿಳೆಯರ ತಂಡ ಈ ಕಂಪನಿಯ ವಾರೀಸುದಾರರು.

ಬಸರೂರು ರಾಜಾಶ್ರಯ ಕಳೆದುಕೊಂಡ ಮೇಲೆ ದೇವಾಲಯ ಮತ್ತು ದೇವಸ್ಥಾನದ ಧಾರ್ಮಿಕ ಆಚರಣೆಗಳು ನಿಧಾನವಾಗಿ ತಮ್ಮ ಮೊದಲಿನ ಗತವೈಭವವನ್ನು ಕಳೆದುಕೊಂಡು ಸಾಂಕೇತಿಕಗಳಾದವು ಆದರೆ ದೇವಾಲಯಕ್ಕೆ ಕೃಷಿ ಭೂಮಿಗಳು ಸಾಕಷ್ಟು ಇದ್ದುದ್ದರಿಂದ ಧಾರ್ಮಿಕ ಆಚರಣೆಗಳು ನಿಂತು ಹೋಗಿರಲ್ಲಿಲ್ಲ. ಆದರೆ ರಾಜಾಶ್ರಯ ಮತ್ತು ಸ್ಥಳೀಯ ಆಡಳಿತ ಎರಡು ಬಸರೂರಿಗೆ ಇಲ್ಲದಿದ್ದಾಗ ದೇವಾಲಯದ ಭೂಮಿಯನ್ನು ಕೃಷಿ

ಮಾಡುತ್ತಿದ್ದವರು ಅವುಗಳನ್ನು ಮೂಲಗೇಣಿ ಮಾಡಿಕೊಂಡರು.ಗೇಣಿಕೊಡುವುದನ್ನು ನಿಲ್ಲಿಸಿದರು. ಅನಂತರದಲ್ಲಿ ದೇವಾಲಯದ ಆಚರಣೆಗಳು ಮೂಲ ಸ್ವರೂಪವನ್ನು ಕಳೆದುಕೊಂಡವು. ಒಂದು ಕಾಲಕ್ಕೆ ವೈಭವಪೂರ್ಣವಾಗಿ ಮೆರೆದ ಶಾಸನ ಉಲ್ಲೇಖಿತ ದೇವಾಲಯಗಳ ಸೂರುಗಳು ಬಿದ್ದು ಹೋಗಲಾರಂಭಿಸಿತು. ವರಮಾನದ ಕೊರತೆಯಿಂದ ದೇವಾಲಯದ ನಿರ್ವಹಣೆಗೆ ತೊಂದರೆವುಂಟಾಯಿತು. ಕೆಲವು ದೇವಾಲಯಗಳು ಖಾಸಗಿ ದೇವಾಲಯಗಳಾದವು. ಬೆಲೆಬಾಳುವ ದೇವರ ಮೂರ್ತಿಗಳು ಮನೆಯನ್ನು ಸೇರಿದವು.

ಬಸರೂರಿನ ಏಳು ಕೆರೆಗಳಿಗೆ ಧಾರ್ಮಿಕ ಮತ್ತು ಸಾಂಸ್ಕೃತಿಕ ಮಹತ್ವವಿದ್ದಿತ್ತು. ದೇವರಕೆರೆ ದೇವರ ಆಯನಕ್ಕೆ,ಹಲರಕೆರೆ ಓಕುಳಿಆಟದ ನೀರಿಗೆ, ಮೂಡುಕೆರೆ ದೇವರ ಅವಭೃತಸ್ನಾನಕ್ಕೆ, ಮಾದನಕೆರೆ ಅಪರಕರ್ಮಗಳಿಗೆ ಬಳಕೆಯಾಗುತ್ತಿದ್ದವು. ರಾಜಕೀಯ ಮತ್ತು ಆರ್ಥಿಕ ಕುಸಿತ ಈ ಕೆರೆಗಳ ಭೌತಿಕ ವ್ಯವಸ್ಥೆಯ ಮೇಲು ಪರಿಣಾಮ ಬೀರಿತು. ಕೆರೆಯಲ್ಲಿದ್ದ ದೇವಾಲಯಗಳು ಕುಸಿದವು. ಕಟ್ಟೆಗಳು ಒಡೆದವು ಹೂಳು ತುಂಬಿಕೊಂಡುವು. ಪಾಚಿ ಬೆಳೆದು ದುಸ್ಥಿತಿಗೆ ತಲುಪಿದವು. ಕೆಲವು ಕೆರೆಗಳ ಹೆಸರು ಅಪಹಾಸ್ಯಕ್ಕೆ ಒಳಗಾಯಿತು. ಕೆರೆಯ ಅವನತಿಯೊಂದಿಗೆ ಅವುಗಳೊಂದಿಗೆ ನಿಕಟ ಸಂಬಂಧ ಹೊಂದಿರುವ ಧಾರ್ಮಿಕ ಆಚರಣೆಗಳು ಅಸ್ತಿತ್ವವನ್ನು ಕಳೆದುಕೊಂಡವು.

ಇಂದು ಧರ್ಮಪಟ್ಟಣ ಬಸರೂರು ಜಾಗತೀಕರಣ ಮತ್ತು ಆಧುನೀಕರಣಕ್ಕೆ ತೆರೆದುಕೊಂಡಿದೆ. ಅದರ ವೇಗ ಮಾತ್ರ ಬೇರೆ ಪ್ರದೇಶದಂತಲ್ಲ. ಏಕೆಂದರೆ ಬಸರೂರು ನಗರಮಾತ್ರವಾಗಿದ್ದಿದ್ದರೆ ಅದು ರೇವು ಪಟ್ಟಣಗಳ ನಾಶದೊಂದಿಗೆ ಜಾಗತೀಕರಣವನ್ನು ಅಪ್ಪಿಕೊಂಡು ಬಿಡುತ್ತಿತ್ತು. ಆದರೆ ಹಾಗೇ ಆಗಲಿಲ್ಲ. ಏಕೆಂದರೆ ಬಸರೂರು ನಗರ ಮತ್ತು ಹಳ್ಳಿಯನ್ನು ಒಳಗೊಂಡ ಪ್ರದೇಶವಾಗಿದೆ. ಇಲ್ಲಿನ ಕೃಷಿಯ ಮೇಲೆ ರೇವು ಪರಿಣಾಮ ಬೀರಲಿಲ್ಲ. ರೇವಿಗೆ ಪರ್ಯಾಯವಾಗಿ ರಸ್ತೆಗಳು ಹುಟ್ಟಿಕೊಂಡವು. ಭೂಹಿಡುವಳಿದಾರರಿಗಿಂತ ಭೂರಹಿತರ ಸಂಖ್ಯೆ ಜಾಸ್ತಿ ಇದ್ದುದ್ದರಿಂದ ಹೆಚ್ಚಿನವರು ಕೃಷಿಕೂಲಿಗಳಾದರು ಅವರ ಬದುಕಿಗೆ ಬಸರೂರು ಪರ್ಯಾಯ ಉದ್ಯೋಗವನ್ನು ನೀಡಿತು.

ಬಸರೂರು ಇಂದು ಬದಲಾಗಿದೆ. ಬಸರೂರಿನಲ್ಲಿ ಕಾಲೇಜು ಆರಂಭವಾಗಿದೆ. ಬ್ಯಾಂಕುಗಳು ವ್ಯವಹಾರವನ್ನು ನಡೆಸುತ್ತಿದೆ. ಬಸರೂರು ಮಾಗಣೆಯಲ್ಲಿ ಕೊಂಕಣ ರೈಲು ನಿಲ್ದಾಣ ಬಂದಿದೆ. ತಾಂತ್ರಿಕ ಕಾಲೇಜು ಆರಂಭವಾಗಿದೆ. ಜೊತೆಗೆ ಕೃಷಿ ಭೂಮಿಗಳು ವಸತಿ ನಿವೇಶನಗಳಾಗಿ ಬದಲಾಗಿದೆ. ವಾರಾಹಿ ನದಿಗೆ ಅಣೆಕಟ್ಟು ನಿರ್ಮಾಣವಾಗಿದೆ. ವಾರಾಹಿನದಿಯ ದಡಗಳಲ್ಲಿ ಮರಳುಗಣಿಗಾರಿಕೆ ಆರಂಭವಾಗಿದೆ. ಇವೆಲ್ಲದರ ನಡುವೆ ಬಸರೂರು ತನ್ನ, ಧಾರ್ಮಿಕ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಉಳಿಸಿಕೊಳ್ಳಲು ಹೆಣಗಾಡುತ್ತಿದೆ. ಆದರೆ ಈ ನಡುವೆ ಬಸರೂರಿನ ಮಹಾಲಿಂಗೇಶ್ವರನ ಜೀರ್ಣೋದ್ಧಾರ

ನಡೆದಿದೆ. ಒಂದು ಕೋಟಿ ರೂಪಾಯಿ ವೆಚ್ಚದಲ್ಲಿ ದೇವಾಲಯ ಭೌತಿಕವಾಗಿ ವೈಭವವನ್ನು ಪಡೆದುಕೊಂಡಿದೆ. ಉಳಿದ ದೇವಾಲಯುಗಳು ಗತಕಾಲದ ಸ್ಮರಣೆಯೊಂದಿಗೆ ಗತಿಸಿಹೋಗುತ್ತಿದೆ.

### ೯.೧.೨.ಅಧ್ಯಯನದ ಫಲಿತಗಳು

ಬಸರೂರಿನ ಸಾಂಸ್ಕೃತಿಕ ಅಧ್ಯಯನದ ಕುರಿತಾದ ಸಂಶೋಧನಾತ್ಮಕ ಅಧ್ಯಯನದ ಕೊನೆಗೆ ಹಂತಕ್ಕೆ ಬರಲಾಗಿದೆ. ಇದುವರೆಗಿನ ಅಧ್ಯಾಯಗಳಲ್ಲಿ ಬಸರೂರಿನ ಸಂಸ್ಕೃತಿಯ ವಿವಿಧ ಮುಖಗಳನ್ನು ವಿಶ್ಲೇಷಿಸಲಾಗಿದೆ. ಪ್ರತಿ ಅಧ್ಯಾಯದಲ್ಲಿ ಬಿಡಿಬಿಡಿಯಾಗಿ ಚರ್ಚಿಸಿದ ವಿಚಾರಗಳನ್ನು ಇಲ್ಲಿ ಇಡಿಯಾಗಿ ನೋಡಲಾಗಿದೆ. ಬಸರೂರನ್ನು ಸಮಗ್ರವಾಗಿ ಅಧ್ಯಯನಕ್ಕೆ ಒಳಪಡಿಸಿಕೊಂಡಿದೆ ಮತ್ತು ಅಧ್ಯಯನಕ್ಕೆ ಸಂಬಂಧಿಸಿದಂತೆ ಒಂದು ನಿರ್ಧಾರಕ್ಕೆ ಬಂದು ಬಸರೂರಿನ ಸಾಂಸ್ಕೃತಿಕ ಅಧ್ಯಯನದ ಫಲಿತಗಳನ್ನು ನೀಡಿದೆ.

ಬಸರೂರು, ವಸುಪುರದಿಂದ ಹುಟ್ಟಿದೆ ಎಂಬುದು ಇಂದಿನವರೆಗೂ ಬಸರೂರಿನವರ ಸಾಮಾನ್ಯ ಅಭಿಪ್ರಾಯವಾಗಿತ್ತು. ಇದು ಜನಪ್ರಿಯ ನಿಷ್ಪತ್ತಿಯೂ ಹೌದು. ಇದಕ್ಕೆ ಕಾರಣ ಬಸರೂರಿಗೆ ಸಂಬಂಧಿಸಿದ ವಸುಚಕ್ರವರ್ತಿ ಐತಿಹ್ಯ. ವಾಸ್ತವವಾಗಿ ಬಸರೂರು ಎಂಬುದು ಒಸರಿನಿಂದ ಹುಟ್ಟಿದ ಪದವಾಗಿದೆ. ಇದಕ್ಕೆ ಹಿನ್ನೆಲೆಯಾಗಿ ಬಸರೂರಿನ ವಾರಾಹಿ ನದಿ ಮತ್ತು ಕೆರೆಗಳು ಪುಷ್ಟಿಯನ್ನು ನೀಡುತ್ತದೆ. ವಸುಪುರದಿಂದ ಬಸರೂರು ಹುಟ್ಟಿತು ಎಂಬುದು ಸಂಪ್ರದಾಯವಾದಿಗಳ ಸೃಷ್ಟಿ ಅದು ಕಾಲ್ಪನಿಕವಾದುದು. ಬಸರೂರಿನ ಹೆಸರಿನಲ್ಲೂ ವೈದಿಕ ಸಂಸ್ಕೃತಿಯ ಪ್ರಭಾವ ಬೀರಿದ್ದು ಸ್ಪಷ್ಟವಾಗಿದೆ.

ಬಸರೂರಿನ ಭೌಗೋಳಿಕ ಸನ್ನಿವೇಶವು ಇಡೀ ಬಸರೂರಿನ ನಿಯಂತ್ರಕ ಶಕ್ತಿಯಾಗಿದೆ. ಮುಖ್ಯವಾಗಿ ಬಸರೂರಿನ ಮಂಡಿಬಾಗಿಲು ಅಥವಾ ಮಂಡಿಕೇರಿ ತನ್ನ ಅಸ್ತಿತ್ವವನ್ನು ಕಳೆದುಕೊಂಡ ತರುವಾಯ ಬಸರೂರಿನ ಇಡೀ ವ್ಯವಸ್ಥೆ ತಲೆಕೆಳಗಾಯಿತು. ಬಸರೂರಿನ ಧಾರ್ಮಿಕ ಮತ್ತು ಸಾಂಸ್ಕೃತಿಕ ಸ್ಥಿತಿಗತಿಯನ್ನು ನಿರ್ಧರಿಸುವಲ್ಲಿ ವ್ಯಾಪಾರ ನಿರ್ಣಾಯಕ ಶಕ್ತಿಯಾಯಿತು. ಬಸರೂರಿನ ರೇವು ತನ್ನ ಅಸ್ತಿತ್ವವನ್ನು ಕಳೆದುಕೊಂಡಿರುವುದರಿಂದ ಬಸರೂರಿಗೆ ಬರುತ್ತಿದ್ದ ವಿವಿಧ ಬಗೆಯ ತೆರಿಗೆಗಳು ನಿಂತುಹೋದವು. ಇದು ಬಸರೂರಿನ ಧಾರ್ಮಿಕ ವ್ಯವಸ್ಥೆಯನ್ನು ತಲೆಕೆಳಗೆ ಮಾಡಿತು. ಬಸರೂರು ರೇವಿನ ನಾಶವೇ ಬಸರೂರಿನ ಸಾಂಸ್ಕೃತಿಕ ಮತ್ತು ಧಾರ್ಮಿಕ ಹಿಂಜರಿಕೆಗೆ ಕಾರಣವಾಯಿತು.

ಬಸರೂರನ್ನು ಆಳ್ವಿಕೆ ನಡೆಸಿದ ಅರಸರುಗಳಿಂದ ಬಸರೂರು ಧಾರ್ಮಿಕವಾಗಿ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ವಿಜಯನಗರದವರ ಆಡಳಿತಕ್ಕೆ ಒಳಪಟ್ಟ ಸಂದರ್ಭದಲ್ಲಿ ಬಸರೂರು ಧಾರ್ಮಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಶ್ರೀಮಂತವಾಗಿತ್ತು. ಹದಿನೇಳನೇಯ

ಶತಮಾನದ ಕೊನೆಗೆ ಕೆಳದಿಯವರು ಬಸರೂರಿನ ಮೇಲೆ ಹಿಡಿತವನ್ನು ಕಳೆದುಕೊಂಡದ್ದರಿಂದ ಬಸರೂರು ಧಾರ್ಮಿಕವಾಗಿ ತನ್ನ ನೆಲೆಯನ್ನು ಕಳೆದುಕೊಂಡಿತು.

ಬಸರೂರಿನ ಶೈವತಾಂತ್ರಿಕ ಶಾಖೆಯಾದ ನಾಥರ ಮತ್ತು ಬ್ರಾಹ್ಮಣರ ನಡುವೆ ಸಂಘುರ್ಷ ನಡೆಯುತ್ತಿದ್ದಿತ್ತು. ಬಳೆಗಾರರನ್ನು ಅವಮಾನ ಮಾಡಿದ ಕಾರಣಕ್ಕೆ ದೇವಿ ಬಳೆಗಾರನ ಮೇಲೆ ಆವಾಹನೆಯಾಗಿ ಕರಣಿಕನ ಮನೆಯಲ್ಲಿ ಕುರಿಯ ಎಡೆಯನ್ನು ಇಡಲು ಸೂಚಿಸಿರುವುದು ಧಾರ್ಮಿಕ ಸಂಘರ್ಷವನ್ನು, ಧಾರ್ಮಿಕ ಪ್ರತಿಕಾರವನ್ನು ತಿಳಿಸುತ್ತದೆ.ಬಸರೂರಿನಲ್ಲಿ ಪ್ರತಿಯೊಂದು ಧರ್ಮದವರು ಹಕ್ಕು ಸ್ಥಾಪನೆಗೋಸ್ಕರ, ಅಸ್ತಿತ್ವಕ್ಕೋಸ್ಕರ ಸಂಘರ್ಷ ನಡೆಸುತ್ತಿರುವುದು ಅಧ್ಯಯನದಿಂದ ತಿಳಿದು ಬರುತ್ತದೆ.

ಬಸರೂರು ಸಂಕೀರ್ಣವಾದ ಸಮಾಜ ಸಂಸ್ಕೃತಿಯನ್ನು ಹೊಂದಿದ ಪ್ರದೇಶ. ಇಲ್ಲಿ ಬೇರೆ ಬೇರೆ ಜನಸಮುದಾಯದವರು ಬಾಳಿ ಬದುಕಿದ್ದಾರೆ. ವೈಷ್ಣವರು ಮತ್ತು ಶೈವರ ನಡುವೆಯೂ ಸಂಘುರ್ಷ ಇರುವುದು ತಿಳಿಯುತ್ತದೆ. ಇಂದಿಗೂ ತುಳುವೇಶ್ವರ ವೈಷ್ಣವರಿಗೆ ತುಳುಶೇಶ್ವರನಾಗಿದ್ದಾನೆ. ಬಸರೂರು ಪೇಟೆಯೊಳಗೆ ದಾಸಯ್ಯ ಬರಬಾರದು ಎಂಬ ಕಟ್ಟಾಜ್ಞೆಯಿದೆ.

ಬಸರೂರಿನಲ್ಲಿ ಜೈನರ ಇರುವಿಕೆಯ ಬಗ್ಗೆ ಒಂದೆರಡು ಭೌತಿಕ ಸಂಸ್ಕೃತಿಯ ರಚನೆಗಳನ್ನು ಕಾಣಬಹುದು ಆದರೆ ಬಸರೂರಿನ ಮೂಡುಕೇರಿ ಜೈನರ ಕೇರಿಯಾಗಿತ್ತು ಎಂಬುದನ್ನು ಬಸರೂರಿನ ಜೈನ ಚಿಕ್ಕು ಪಾಡ್ದನ ತಿಳಿಸುತ್ತದೆ. ಬಸರೂರಿನ ಮೌಖಿಕ ಸಾಹಿತ್ಯವು ಬಸರೂರಿನಲ್ಲಿ ಜೈನರ ಪ್ರಭಾವವಿರುವುದನ್ನು ತಿಳಿಸುತ್ತದೆ. ಈ ಪಾಡ್ದನವು ಮೂಡುಕೇರಿಯ ದೊಟ್ಟೆಕಾಲು ಚಿಕ್ಕುಗೆ ಸಂಬಂಧಿಸಿದದಾದರೂ ಸಿರಿ ಪಾಡ್ದನಕ್ಕೆ ಹೋಲಿಕೆಯಾಗುತ್ತದೆ. ಇಲ್ಲಿ ದೊಟ್ಟೆಕಾಲುಚಿಕ್ಕು ಮತ್ತು ಅಕ್ಕತಂಗಿಯರು ಚೆನ್ನೆಮಣೆಯಲ್ಲಿ ಹೊಡೆದಾಡಿಕೊಳ್ಳುವುದಿಲ್ಲ. ಜೈನಧರ್ಮದ ಪ್ರಭಾವ ಬಸರೂರಿನ ಜನಸಾಮಾನ್ಯರ ಮೇಲಾಗಿರುವುದು ಸ್ಪಷ್ಟವಾಗುತ್ತದೆ ಮತ್ತು ಈ ಪಾಡ್ದನ ಸಿರಿಯ ಬಸರೂರ ಸಂಬಂಧವನ್ನು ಅಧ್ಯಯನ ಮಾಡುವವರಿಗೆ ಸಹಾಯಕವಾಗುವುದು. ಸಿರಿಯ ಬಗ್ಗೆ ಬಸರೂರಿನ ಯಾವುದೇ ಭೌತಿಕ ಸಾಕ್ಷ್ಯಗಳು ದೊರಕದಿದ್ದರೂ ಗಿರಿಕೆರೆ ರಾಮಕ್ಕ ಮುಗೇರ್ತಿ ಪಾಡ್ದನವು ಉಲ್ಲೇಖಿಸಿರುವ ಕೆಲವು ಭೌಗೋಳಿಕ ಸನ್ನಿವೇಶ ಮತ್ತು ಗುತ್ತಿನ ಮನೆಯ ವರ್ಣನೆ ಸಿರಿಯ ಬಸರೂರಿನ ಸಂಬಂಧವನ್ನು ತಿಳಿಸಿಕೊಡುತ್ತದೆ. ಬಸರೂರಿನ ಸಿರಿನ ಬಳಿಯವರು ಹಗ್ಗಿನ ತಿಂಗಳಿನಲ್ಲಿ ಶುಭಕಾರ್ಯ ಮಾಡದಿರುವುದು, ಸೀಮಂತ ಮಾಡದಿರುವುದು ಸಿರಿಯ ಬಸರೂರಿನ ಸಂಬಂಧ ಅಧ್ಯಯನಕ್ಕೆ ಸಾಕ್ಷ್ಯಗಳಾಗಿ ನಿಲ್ಲುತ್ತದೆ.

ಬಸರೂರಿನಲ್ಲಿ ಹಿಂದೂ ಮುಸಲಾನ್ಮರಲ್ಲಿ ಮೊದಲಿನಿಂದಲೂ ಸೌಹಾರ್ದ ವಾತಾವರಣವಿತ್ತು. ಪಳ್ಳಿಯ ಆದಾಯವನ್ನು ಯಾವುದೇ ತಕರಾರು ಇಲ್ಲದೆ ದೇವಾಲಯದ

ಮಾಡಿನ ತಾಮ್ರದ ಹೊದಿಕೆ ನಿರ್ಮಾಣಕ್ಕೆ ನೀಡಿರುವುದನ್ನು ಮತ್ತು ಬಸರೂರಿನ ಅಲಾದಿ ಹಬ್ಬವನ್ನು ಹಿಂದೂ ಮುಸಲ್ಮಾನರು ಸೇರಿ ಆಚರಿಸುತ್ತಿದ್ದುದ್ದು ಉಬ್ಬಸರೋಗವಿರುವ ಹಿಂದೂಗಳು ಅಲಾದಿ ದೇವರಿಗೆ ಬೆಲ್ಲ ಅರ್ಪಿಸುತ್ತಿದ್ದುದ್ದು ಮತ್ತು ಹಿಂದೂ ಮುಸಲ್ಮಾನರು ಸೇರಿ ವೇಷ ಹಾಕಿ ಕುಣಿಯುತ್ತಿರುವುದು ಮತ್ತು ಶ್ರೀಮಹಾಲಿಂಗೇಶ್ವರನ ತೇರಿನ ಬಟ್ಟೆಯನ್ನು ಮುಸಲ್ಮಾನರು ಹಾಕುವಂತದ್ದು, ಬಸರೂರು ಹಿಂದೂ ಮತ್ತು ಮುಸಲ್ಮಾನರ ಸೌಹಾರ್ದ ಕರಾವಳಿಗೆಲ್ಲ ಮಾದರಿಯಾಗಿದೆ. ಗುಪ್ಪೆಹಾಡಿಯಲ್ಲಿ ವರ್ಷಕ್ಕೊಂದಾವರ್ತಿ ಮುಸಲ್ಮಾನ ಹೆಂಗಸರು ಅಲ್ಲಿರುವ ಬಾವಿಗೆ ಲಿಂಬೆಕಾಯಿ ಹಾಕಿ ಪ್ರಾರ್ಥಿಸುವುದು ಸೌಹಾರ್ದತೆಯನ್ನು ಸೂಚಿಸುತ್ತದೆ.

ಬಸರೂರು ಕಂದಾವರ, ಜಪ್ತಿ, ಆನಗಳ್ಳಿ, ಹಟ್ಟಿಕುದ್ರು, ಬಳ್ಕೂರನ್ನು ಮಾತ್ರ ಒಳಗೊಂಡ ಮಾಗಣೆಯಲ್ಲ ಹೇರಿಕುದ್ರು, ಗಂಗೊಳ್ಳಿ, ಬೇಲ್ತೂರನ್ನು ಒಳಗೊಂಡಿತ್ತು ಎಂಬುದು ತಿಳಿಯುತ್ತದೆ.

ಬಸರೂರು ಮತ್ತು ಅದರ ಸುತ್ತಮುತ್ತಲಿನ ಗ್ರಾಮಗಳು ಭೌಗೋಳಿಕವಾಗಿ ಮಂಡಲಾಕಾರದಲ್ಲಿ ಬಂಧಿಸಿದ್ದರು, ಸಾಂಸ್ಕೃತಿಕ,ಧಾರ್ಮಿಕ ಏಕರೂಪತೆ ಇಲ್ಲವಾಗಿದೆ. ಪ್ರತಿಕೇರಿಗಳು ಸ್ವತಂತ್ರವಾಗಿ ವರ್ತಿಸಲು ಪ್ರಯತ್ನಿಸುತ್ತವೆ. ಕದಿರು ಹಬ್ಬ ಇಡೀ ಬಸರೂರಿನ ಧಾರ್ಮಿಕ ಒಗ್ಗಟ್ಟಿಗೆ ಉದಾಹರಣೆಯಾಗಿತ್ತು. ಆದರೆ ಈಗ ಮೂಡುಕೇರಿಯವರು ಪ್ರತ್ಯೇಕ ಕದಿರುಹಬ್ಬದ ಆಚರಣೆ ಮಾಡುವುದು ಸಾಂಸ್ಕೃತಿಕ ಮತ್ತು ಧಾರ್ಮಿಕ ವಿಘಟನೆಯನ್ನು ಸೂಚಿಸುತ್ತದೆ.

ಬಸರೂರಿನ ದೇವದಾಸಿಯರ ಕುಣಿತ ಈಗ ನೆಲೆಯನ್ನು ಕಳೆದುಕೊಂಡಿದೆ. ಈ ಬಗೆಯ ಕುಣಿತ ಬಸರೂರಿನಲ್ಲಿ ಇತ್ತು ಎನ್ನುವುದು ಕೂಡಾ ಸಂಶಯಕ್ಕೆಡೆ ಮಾಡುತ್ತದೆ. ಅಲ್ಲಿರುವ ದೇವದಾಸಿ ಕುಟುಂಬದ ವಕ್ತೃಗಳು ತಾವು ದೇವದಾಸಿಯರೆಂದು ಒಪ್ಪಿಕೊಳ್ಳದೇ ತಮ್ಮ ಸಾಂಸ್ಕೃತಿಕ ಅನನ್ಯತೆಯನ್ನು ಮುಚ್ಚಿಟ್ಟುಕೊಂಡು, ತಮ್ಮನ್ನು ಮೇಲ್ವರ್ಗದವರೆಂದು ಗುರುತಿಸಿಕೊಳ್ಳುತ್ತಾರೆ.

ಬಸರೂರಿನ ಶ್ರೀದೇವಿದೈವಸ್ಥಾನವು ಮೇಲುವರ್ಗದ ದೇವಸ್ಥಾನಕ್ಕೆ ಪ್ರತಿಯಾಗಿ ಹುಟ್ಟಿಕೊಂಡ ದೈವಸ್ಥಾನವಾಗಿದೆ. ಇಲ್ಲಿ ನಡೆಯುವ ಆಚರಣೆಗಳು ಅವೈದಿಕವಾದುದು. ಕುರಿಪೂಜೆ, ಹಾರ್ಗೋಳಿ, ಮಾರಿಪೂಜೆ ಮುಂತಾದ ಆಚರಣೆಗಳಿಂದ ತಿಳಿಯುತ್ತದೆ. ಈ ದೇವಸ್ಥಾನವು ನಾಥರ ಧಾರ್ಮಿಕಾಚರಣೆಯ ಕೇಂದ್ರವಾಗಿದೆ. ಇಲ್ಲಿ ನಡೆಯುವ ಘಟಪೂಜೆ ಮಾರಿಆಚರಣೆಯಾಗಿದೆ.ಮತ್ತು ನಾಥದ ತೀವ್ರ ಪ್ರಭಾವವನ್ನು ಇಲ್ಲಿಯ ಆಚರಣೆಗಳಲ್ಲಿ ಕಾಣಬಹುದು. ಬಸರೂರಿನ ಮೂಡುಕೇರಿಯ ಭೈರವ ದೇವಸ್ಥಾನವು ಬೌದ್ಧ ಸೂಪ್ತ ಮಾದರಿಯಾಗಿದೆ. ಇದು ನಾಥ ಮತ್ತು ಬೌದ್ಧ ಸಂಬಂಧವನ್ನು ತಿಳಿಸುತ್ತದೆ.

ಬಸರೂರಿನ ಜನಪದವಾಸ್ತು ಬಸರೂರಿನ ಸಂಸ್ಕೃತಿಯ ದ್ಯೋತಕ ಎನ್ನುವ ಒಂದು ಅಂಶವನ್ನು ಒಪ್ಪಿಕೊಳ್ಳುದರೊಂದಿಗೆ, ಬಸರೂರಿನ ಸಾಮಾಜಿಕ ವ್ಯವಸ್ಥೆಯಲ್ಲಿ ಕೃಷಿಕರಾದ ಬಂಟರು ಉನ್ನತಶ್ರೇಣಿಯಲ್ಲಿದ್ದರು ಎಂಬುದು ತಿಳಿಯುತ್ತದೆ. ಬಸರೂರು ಗುಡಿಗಾರಿಕೆ ಮತ್ತು ಕರಕುಶಲಗೆ ಹೆಸರಾದ ಪ್ರದೇಶವಾಗಿದೆ. ಇಲ್ಲಿರುವ ಗುಡಿಗಾರರು ಯಾವುದೇ ಬಗೆಯ ವಾಸ್ತು ಶಿಲ್ಪ ಮತ್ತು ಪ್ರತಿಮಾ ಶಾಸ್ತ್ರದ ಜ್ಞಾನವಿಲ್ಲದೆ ಪಾರಂಪರಿಕವಾಗಿ ಉರುಗಳನ್ನು ನಿರ್ಮಿಸುತ್ತಿದ್ದರು. ಅವರು ನಿರ್ಮಿಸುವ ಮರದ ಉರುಗಳಿಗೆ ಜಾನಪದ ಕತೆಗಳು ಮತ್ತು ಐತಿಹ್ಯಗಳೆ ಆಧಾರವಾಗಿದೆ. ಜನಪದ ಕತೆಗಳಲ್ಲಿ ಬರುವ ಉಮ್ಮಾಲ್ತಿ, ಚಿಕ್ಕು, ಹೊಟ್ಟೆಕಾಲುಚಿಕ್ಕು ಕತೆಗಳಿಗೆ ಅನುಗುಣವಾಗಿ ಉರುಗಳು ನಿರ್ಮಾಣಗೊಳ್ಳುತ್ತಿದ್ದವು. ಇದು ಹೊಸ ಬಗೆಯ ಅಧ್ಯಯನದ ಸಾಧ್ಯತೆಗಳನ್ನು ಸೃಷ್ಟಿಸುತ್ತದೆ.

ಬಸರೂರಿನಲ್ಲಿ ಸಂವತ್ಸರ ಮತ್ತು ಕಾಲು ಸಂವತ್ಸರದಲ್ಲಿ ನಡೆಯುವ ಮಾರಿಹಬ್ಬದ ಆಚರಣೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಬಸರೂರಿನ ಸಾಮಾಜಿಕ ಶ್ರೇಣಿಕರಣ ಸ್ಪಷ್ಟವಾಗಿ ತಿಳಿಯುತ್ತದೆ. ಇಲ್ಲಿ ದೈವಗಳಲ್ಲಿಯೂ ಶ್ರೇಣಿಕರಣವನ್ನು ಕಾಣುತ್ತೇವೆ. ಬ್ರಾಹ್ಮಣರು, ಬಂಟರು ಮತ್ತು ಗಾಣಿಗರ ಮೇಲೆ ಬರುವ ದೈವಗಳು ಉಳಿದ ವರ್ಗದವರ ಮೇಲೆ ಬರುವ ದೈವಗಳಿಗಿಂತ ಉನ್ನತ ಶ್ರೇಣಿಯಲ್ಲಿರುವುದು ತಿಳಿಯುತ್ತದೆ. ಶ್ರೀ ಮಹಾಲಿಂಗೇಶ್ವರ ದೇವಾಲಯದೊಳಗೆ ಕೆಳವರ್ಗದ ಪ್ರವೇಶವಿಲ್ಲದಿರುವುದು ಮತ್ತು ಗಡಿಬಲಿಯಲ್ಲಿ ರಾಯರ ಪಾತ್ರಿ ಹಿಂದೆ ನಿಲ್ಲುವುದು ಸಾಮಾಜಿಕ ಶ್ರೇಣಿಕರಣವನ್ನು ತಿಳಿಸುತ್ತದೆ.

ಬಸರೂರಿನ ಶ್ರೀ ದೇವಿದೇವಸ್ಥಾನದ ಒಳಆಯದಲ್ಲಿ ಮೂಲ ವಿಗ್ರಹ ಮೂರು ಲಿಂಗಗಳು. ಲಿಂಗಗಳ ಮೇಲೆ ಹುತ್ತ ಇದೆ. ಈ ಮೂರು ಲಿಂಗಗಳನ್ನು ಮಹಾಂಕಾಳಿ, ಮಹಾಲಕ್ಷ್ಮೀ, ಮಹಾಸರಸ್ವತಿ ಎಂದು ಕರೆಯುತ್ತಾರೆ. ಇಲ್ಲಿ ಎರಡು ವಿಚಾರವನ್ನು ಗಮನಿಸಬೇಕು. ಇದು ಶಕ್ತಿಆರಾಧನೆಯ ಕೇಂದ್ರ ಎನ್ನುವುದು ಒಂದಂಶವಾದರೆ ಬಸರೂರಿನ ಗ್ರಾಮದೇವತೆ ಎನ್ನುವುದು ಎರಡನೆಯ ಅಂಶವಾಗಿದೆ. ದಕ್ಷಿಣ ಭಾರತದ ಗ್ರಾಮದೇವತೆಗಳ ಗುಡಿಗಳಲ್ಲಿ ರೌದ್ರ ಮುಖದ ಅಕ್ಕ ಮಾರಿ, ಸೌಮ್ಯ ಮುಖದ ತಂಗಿ ಅಮ್ಮ ಪೂಜೆಗೊಳ್ಳುವುದು ಸಾಮಾನ್ಯ. ಬಸರೂರು ಶ್ರೀದೇವಿದೇವಸ್ಥಾನವು ಇದೇ ಬಗೆಯದು. ಇಲ್ಲಿರುವ ಶಕ್ತಿದೇವತೆಗಳಾದ ಲಕ್ಷ್ಮೀ ಸರಸ್ವತಿ, ಪಾರ್ವತಿ(ಕಾಳಿ) ಅರ್ಚಕರು ಬ್ರಾಹ್ಮಣೇತರರು. ಆ ಕಾರಣದಿಂದ ಬಸರೂರಿನ ಶ್ರೀದೇವಿಅಮ್ಮನವರ ದೇವಸ್ಥಾನವು ಬ್ರಾಹ್ಮಣೇತರರಾದ ಬಳೆಗಾರಜೋಗಿಗಳದ್ದು ಮತ್ತು ಬಸರೂರಿನ ಮೇಲೆ ಶಾಕ್ತ ಪಂಥದವರ ಪ್ರಭಾವವನ್ನು ಇದು ತಿಳಿಸುತ್ತದೆ.

ಬಸರೂರಿನ ಮಾರಿಹಬ್ಬವು ವೈದಿಕೇತರ ಆಚರಣೆಯಾಗಿದ್ದರೂ, ವೈದಿಕರು ನಿರ್ದೇಶನವನ್ನು ಕಾಣುತ್ತೇವೆ. ಮಾರಿಜಾತ್ರೆಯ ಆರಂಭವಾಗುವುದು ಮಾರಿಜಾತ್ರೆ

ನಡೆಯುವುದು ಶ್ರೀದೇವಿಅಮ್ಮನವರ ದೈವಸ್ಥಾನದಲ್ಲಾದರೂ ಮಾರಿಹಬ್ಬವನ್ನು ಮಾಡುವ ನಿರ್ಧಾರ ತೆಗೆದುಕೊಳ್ಳುವುದು ಜಟ್ಟಿಗರಾಯನ ದೈವಸ್ಥಾನದಲ್ಲಿ. ಮಾರಿಹಬ್ಬದ ದಿನ ಬೆಳಿಗ್ಗೆ ಶ್ರೀಮಹಾಲಿಂಗೇಶ್ವರನ ಸನ್ನಿಧಿಗೆ ಹೋಗಿ ಮಂಗಳಾರತಿ ಮಾಡಿ ಪ್ರಸಾದ ಪಡೆದು ಶ್ರೀ ದೇವಿಅಮ್ಮನವರ ದೇವಸ್ಥಾನದ ಮೂರ್ತಿಗಳಿಗೆ ಸಿಂಪಡಿಸಿ ಶುದ್ಧ ಮಾಡುವುದು, ಅನಂತರ ಜಾತ್ರೆ ಆರಂಭವಾಗುವುದು ಆರ್ಯ ದೇವತೆಗಳ ಪ್ರಾಬಲ್ಯ ಮತ್ತು ದ್ರಾವಿಡ ದೈವಗಳ ಶರಣಾಗತಿ ಇಲ್ಲಿ ಎದ್ದು ಕಾಣುವ ಅಂಶವಾಗಿದೆ.

ಬಸರೂರಿನ ಪ್ರದರ್ಶನ ಕಲೆಗಳನ್ನು ಗಮನಿಸಿದಾಗ ಅದು ಕೃಷಿ ಸಮೃದ್ಧಿಯನ್ನು ಬಯಸುವ ಆಚರಣೆಯಾಗಿದೆ. ಹೌಂದ್ರಾಯನ ವಾಲಗ, ಮೊಗವೀರರು, ಸೆಟ್ಟಿಕಾರರು ಮತ್ತು ಇತರ ವರ್ಗದವರು ಆಚರಿಸುತ್ತಾರೆ. ಇದು ಕೃಷಿ ಸಮೃದ್ಧಿಯ ಆಶಯವನ್ನು ಹೊತ್ತ ಆಚರಣೆಗಳೆ ವಿನಹಃ ಗೋವಿಂದ ರಾಯನ ಹೊಗಳುವುದಲ್ಲ. ಎನ್ನುವುದು ಅಧ್ಯಯನದಿಂದ ತಿಳಿದು ಬರುತ್ತದೆ.

ದೇವದಾಸಿಯರ ಕುಣಿತದಲ್ಲಿ ದೌಲತ್‌ಜಾದ ಅಥವಾ ಸೂಳೆಯರ ಮೇಳ ಹುಟ್ಟಿಕೊಂಡಿರುವುದು ಬಸರೂರು ಆರ್ಥಿಕವಾಗಿ ಮತ್ತು ರಾಜಕೀಯವಾಗಿ ನೆಲೆಯನ್ನು ಕಳೆದುಕೊಂಡ ಮೇಲೆ ಎನ್ನುವುದು ಸ್ಪಷ್ಟವಾಗುತ್ತದೆ. ಬಸರೂರು ಧಾರ್ಮಿಕ ಹಿನ್ನಡೆ ಸಾಧಿಸಿದ್ದು ಆರ್ಥಿಕ ವೈಫಲ್ಯದಿಂದ ಎಂದು ಅಧ್ಯಯನದಿಂದ ತಿಳಿದು ಬರುತ್ತದೆ.

ಬಸರೂರಿನ ಜನಸಮುದಾಯದವರ ಜೀವನಾವರ್ತನಗಳಲ್ಲಿ ಸಂಸ್ಕೃತಿಕರಣ ಎದ್ದು ತೋರುತ್ತದೆ. ಜೀವನಾವರ್ತನ ಆಚರಣೆಗಳಲ್ಲಿ ಸಾಮ್ಯವಿದೆ. ಮಾತೃಮೂಲೀಯ ಕುಟುಂಬ ವ್ಯವಸ್ಥೆಯನ್ನು ಅನುಸರಿಸುವವರಲ್ಲಿ ಒಂದೇ ಬಗೆಯ ಜೀವನಾವರ್ತನ ಆಚರಣೆಗಳಿವೆ. ಬೇರೆ ಪ್ರದೇಶದಿಂದ ವಲಸೆ ಬಂದ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಹೊಂದಿಕೊಂಡವರ ಕೆಲವು ಆಚರಣೆಗಳು ಬ್ರಾಹ್ಮಣರ ಆಚರಣೆಗಳ ಕಡೆಗೆ ಸಂಸ್ಕೃತಿಕರಣ ಹೊಂದಿದೆ. ಬಳೆಗಾರರ ಜೀವನಾವರ್ತನಗಳಲ್ಲಿ ಕೆಲವು ಬಂಟರ ಜೀವನಾವರ್ತನಗಳನ್ನು ಹೋಲುತ್ತದೆ. ಮೇರರು ಕೆಲವು ವಿಚಾರಗಳಲ್ಲಿ ಅನನ್ಯತೆಯನ್ನು ಹೊಂದಿದ್ದಾರೆ. ಬಸರೂರಿನ ಜನಸಮುದಾಯಕ್ಕೆ ಜೀವನಾವರ್ತನ ಆಚರಣೆಗಳ ಅನನ್ಯತೆಯನ್ನು ಉಳಿಸಿಕೊಳ್ಳುವ ಅಗತ್ಯ ಇದ್ದಂತೆ ಕಾಣುವುದಿಲ್ಲ. ಬಂಟರ ಜೀವನಾವರ್ತನಗಳಲ್ಲಿ ಬ್ರಾಹ್ಮಣರ ಆಚರಣೆಯ ಪ್ರಭಾವ ಇಲ್ಲದಿದ್ದರು, ಮದುವೆಯ ಸಂದರ್ಭದಲ್ಲಿ ಬ್ರಾಹ್ಮಣರ ಮದುವೆ ಕ್ರಮಗಳನ್ನು ಅನುಸರಿಸುತ್ತಿರುವುದು ಕಂಡು ಬಂದಿದೆ.

ಬಸರೂರಿನ ದೈವಸ್ಥಾನದೊಳಗೆ, ದೈವಗಳಲ್ಲಿ ಇತ್ತೀಚಿನ ದಿನಗಳಲ್ಲಿ ಒಳಶ್ರೇಣೀಕರಣವಾಗಿದೆ. ಮಾಂಸಹಾರಿ ದೇವರುಗಳಿಗೆ ಹೊರ ಆಲಯುಗಳು ನಿರ್ಮಾಣವಾಗಿದೆ. ಇನ್ನು ಕೆಲವು ದೈವಸ್ಥಾನಗಲ್ಲಿ ಮಾಂಸಾಹಾರಿ ದೇವರು ಗುಡಿಯ

ಒಳಗಿದ್ದರೂ ಆಹಾರ ನೀಡುವಾಗ ಮಾಂಸಾಹಾರವನ್ನು ನೀಡಿ ಮುಚ್ಚಿಡುವುದನ್ನು ಕಾಣುತ್ತೇವೆ. ಕುರಿ ಮಾಂಸಕ್ಕೆ ಬದಲಾಗಿ ಕಡುಬು ನೈವೇದ್ಯ ಮಾಡುತ್ತಾರೆ. ಈ ಬಗೆಯ ಸಂಸ್ಕೃತೀಕರಣ ಉಂಟಾಗಿದೆ.

ಈ ಅಧ್ಯಯನದ ಮೂಲಕ ಬಸರೂರಿನ ಪೂರ್ಣ ಅಧ್ಯಯನ ನಡೆದಿದೆ ಎನ್ನುವಂತಿಲ್ಲ. ಇಲ್ಲಿ ಅಧ್ಯಯನ ಮಾಡಲು ಬಹುಮುಖಿ ಅವಕಾಶಗಳಿವೆ. ಸಿರಿಯ ಬಸರೂರಿನ ಸಂಬಂಧ ಕುರಿತಾದ ಅಧ್ಯಯನಕ್ಕೆ ಪಾಡ್ದನಗಳು, ಜನಪದ ಗೀತೆಗಳು, ಬಳಿಗಳು ಹೊಸ ಬಗೆಯ ವಿಚಾರವನ್ನು ಅನಾವರಣ ಮಾಡುವ ಸಾಧ್ಯತೆಗಳಿವೆ. ಬಸರೂರಿನ ಭೌತಿಕ ಸಂಸ್ಕೃತಿಯಾದ ಕೋಟೆಗಳ ಅವಶೇಷ, ಕೆರೆಗಳು, ವಿಜಯಸ್ಥಂಭಗಳು ಬಸರೂರಿನ ಐತಿಹಾಸಿಕ ಅಧ್ಯಯನಕ್ಕೆ ಪ್ರಾಥಮಿಕ ಆಕರಗಳಾಗುತ್ತದೆ. ಬಸರೂರಿನ ದೈವಸ್ಥಾನಗಳಲ್ಲಿರುವ ವೈವಿಧ್ಯಮಯ ಉರುಗಳ ಈ ಪ್ರದೇಶದ ಉರುಗಳ ಸಾಂಸ್ಕೃತಿಕ ಅಧ್ಯಯನಕ್ಕೆ ಸಹಾಯಕವಾಗುತ್ತದೆ. ಬಸರೂರು ಮತ್ತು ಬಾರ್ಕೂರು ಅವಳಿ ನಗರಗಳಂತೆ ಕಾಣುತ್ತಿದ್ದು ನಗರಗಳ ತೌಲನಿಕ ಅಧ್ಯಯನಕ್ಕೆ ಬೇಕಾದ ಪೂರಕ ಮಾಹಿತಿಯನ್ನು ಬಸರೂರು ಒದಗಿಸಿಕೊಡುತ್ತದೆ.ಬಸರೂರಿನ ಏಳು ಕೆರೆ ಮತ್ತು ಏಳು ಕೇರಿಗಳು, ಜನಪದರಲ್ಲಿ ಏಳು ಎಂಬ ಸಂಖ್ಯೆಗೆ ನೀಡಿದ ಅಧ್ಯಯನ ಯೋಗ್ಯವಾಗಿದೆ. ಬಸರೂರಿನಲ್ಲಿ ದೊರಕುವ ಶಾಸನ ಮತ್ತು ವಿದೇಶಿ ಬರೆಹಗಳು ಈ ಭಾಗದ ಆರ್ಥಿಕ ಅಧ್ಯಯನಕ್ಕೆ ಸಹಕಾರಿಯಾಗುತ್ತದೆ. ಈ ಮೇಲೆ ಸೂಚಿಸಿದಂತಹ ಫಲಿತಗಳು ಮತ್ತು ಅಧ್ಯಯನದ ಸಾಧ್ಯತೆಗಳು ಪ್ರಸ್ತುತ ಅಧ್ಯಯನದಿಂದ ವ್ಯಕ್ತವಾದಂತಹ ಅಂಶಗಳಾಗಿವೆ. ಇವುಗಳಲ್ಲದೆ ಇನ್ನು ಹೆಚ್ಚಿನ ಫಲಿತಗಳು ಮತ್ತು ಅಧ್ಯಯನದ ಸಾಧ್ಯತೆಗಳನ್ನು ಬಸರೂರಿನ ಅಧ್ಯಯನದಿಂದ ಕಂಡುಕೊಳ್ಳಲು ಸಾಧ್ಯವಿದೆ.

***

# ಅನುಬಂಧ

೧. ವಕ್ತೃ ಮಾಹಿತಿ

೨. ಪ್ರಶ್ನಾವಳಿ

೩. ಪರಾಮರ್ಶನ ಸಾಹಿತ್ಯ

೪. ಮೌಖಿಕ ಸಾಹಿತ್ಯ – ಆಯ್ದ ಪಠ್ಯಗಳು

೫. ಛಾಯಾಚಿತ್ರಗಳು

# ೧. ವಕ್ತೃ ಮಾಹಿತಿ

೧. ಅಪ್ಪಣ್ಣ ಹೆಗ್ಡೆ ಬಿ;ವಯಸ್ಸು ೭೫;ಧರ್ಮದರ್ಶಿಗಳು; ಬಸ್ರೂರು.

೨. ಆನಂದ ಶೆಟ್ಟಿ;ವಯಸ್ಸು ೫೫;ಶಿಕ್ಷಕರು;ಹೆಬ್ಬಾಗಿಲು ಮನೆ,ನೂಜಾಡಿ.

೩. ಎಸ್.ಎಂ.ಹಾಜಿ ಸಾಹೇಬ;ವಯಸ್ಸು೬೧;ಪಳ್ಳಿಕೇರಿ,ಬಸರೂರು.

೪. ಕಂದಾವರ ರಘುರಾಮ ಶೆಟ್ಟಿ;ವಯಸ್ಸು೭೦;ಕುಜ್ಞಾಡಿಮನೆ,ಕಂದಾವರ.

೫. ಕಮಲಾಕ್ಷಿಯಮ್ಮ;ವಯಸ್ಸು೭೦;ಗೃಹಿಣಿ;ಉಡಾಡಿಮನೆ,ಬಸರೂರು.

೬. ಕಿರಣಕುಮಾರ;ವಯಸ್ಸು ೩೫;ಟೈಲರ್;ರಾಹುತಕೇರಿ, ಬಸರೂರು

೭. ಕಿಶನ್ ಹೆಗ್ಡೆ;ವಯಸ್ಸು೪೦;ಉದ್ಯಮಿ;ಹೆಗ್ಡೆಯರ ಮನೆ,ಬಸರೂರು.

೮. ಗುಲಾಬಿ ಶೆಟ್ಟಿ;ವಯಸ್ಸು೬೫;ಗೃಹಿಣಿ;ಕಲ್ಗುಡಿ ಮನೆ,ಹೊಸಾಡು.

೮. ಗುಲಾಬಿ ಸೇರಿಗಾರ;ವಯಸ್ಸು ೬೦;ಗೃಹಿಣಿ;ಹಾಡಿಮನೆ,ಬಸರೂರು.

೯. ಗಿರಿಜಾ;ವಯಸ್ಸು೫೫;ಗೃಹಿಣಿ;ಗರಡಿಮನೆ,ಬಸರೂರು.

೧೦. ಗಿರಿಜಾ ಬಂಡಾರಿ;ವಯಸ್ಸು ೬೦;ಗೃಹಿಣಿ;ನಾವೂಡರ ವೊಳಲು, ಬಸರೂರು.

೧೧. ಗಿರಿಜಾ;ವಯಸ್ಸು೬೫;ಗೃಹಿಣಿ;ಪಾನಕದಕಟ್ಟೆ, ಬಸರೂರು.

೧೨. ಗುಪ್ಪೆ ಗೋಪಾಲ ಆಚಾರಿ;ವಯಸ್ಸು೮೫;ಗುಪ್ಪೆಹಾಡಿ ರಸ್ತೆ,ಬಸರೂರು.

೧೩. ಗೋಪಾಲ ಪೂಜಾರಿ ;ವಯಸ್ಸು೫೦; ದೈವದ ಪಾತ್ರಿ;ಗರಡಿ ಮನೆ,ಬಸರೂರು.

೧೪. ಚಂದ್ರ ಜಪ್ತಿ;ವಯಸ್ಸು೩೫;ಉಪನ್ಯಾಸಕರು;ರಂಗನಜೆಡ್ಡು ಜಪ್ತಿ,ಬಸರೂರು.

೧೫. ಚಂದ್ರಕಾಂತ;ವಯಸ್ಸು೩೧;ಕೃಷಿಕ;ಕಲ್ಲುಂಜೆ,ಕುಳ್ಳಂಬಳ್ಳಿ.

೧೬. ಚಂದ್ರಪ್ರಭಾಹೆಗ್ಡೆ;ವಯಸ್ಸು೫೦;ಪ್ರಾಂಶುಪಾಲರು; ಶ್ರೀಶಾರದಾಕಾಲೇಜು,ಬಸರೂರು.

೧೭. ಚಂದ್ರಶೇಖರ ಸೋಮಯಾಜಿ;ವಯಸ್ಸು ೪೫;ತಂತ್ರಿಗಳು,ಬಸರೂರು.

೧೮. ಜಯಲಕ್ಷ್ಮೀ ಶೆಟ್ಟಿ;ವಯಸ್ಸು೫೦;ಗೃಹಿಣಿ;ಹೆಬ್ಬಾಗಿಲುಮನೆ,ನೂಜಾಡಿ.

೧೯. ದಯಾನಂದ ಬಳೆಗಾರ;ವಯಸ್ಸು೪೫;ಮಠದಮನೆ,ಬಸರೂರು.

೨೦. ದೇವಿ ಭಕ್ತ ಬಾಲಕೃಷ್ಣ;ವಯಸ್ಸು೭೫;ನಿವೃತ್ತ ಅಬಕಾರಿಅಧಿಕಾರಿ;ಕೋಟೇಶ್ವರ.

೨೧. ನರಸಿಂಹ ಚಪ್ಪೆಕಾರ್;ವಯಸ್ಸು೬೫;ಕೃಷಿಕ;ಕಾರಿಕುದ್ರು, ಬಸರೂರು.

೨೨. ನಾರಾಯಣ ಬಂಡಾರಿ;ವಯಸ್ಸು೬೫;ಕೃಷಿಕ,ನಾವೂಡರ ವೊಳಲು,ಬಸರೂರು.

೨೩. ನಾರಾಯಣ ಬಳೆಗಾರ;ವಯಸ್ಸು೭೫;ದೈವದಪಾತ್ರಿ;ಅಮ್ಮನವರದೇವಸ್ಥಾನ,ಬಸರೂರು.

೨೪. ನಾರಾಯಣ ಆಚಾರಿ;ವಯಸ್ಸು ೭೦;ಆಚಾರಿ ಮನೆ,ನೂಜಾಡಿ.

೨೫. ಪದ್ದು ಪೂಜಾರಿ;ವಯಸ್ಸು೬೫;ಕೃಷಿಕ;ಗುಜ್ಜಾಡಿಮನೆ,ಬಸರೂರು.

೨೬. ಬಸವರಾಜ ಸೆಟ್ಟಿಗಾರ;ವಯಸ್ಸು೪೫;ವಾಸ್ತುತಜ್ಞ;ಕೋಟೇಶ್ವರ.

೨೭. ಬಿ.ಕೆ ಬಳೆಗಾರ;ವಯಸ್ಸು೭೦;ನಿವೃತ್ತಶಿಕ್ಷಕರು;ಬಸರೂರು

೨೮. ಬೇಬಿ ಸೆಟ್ಟಿಕಾರ್;ವಯಸ್ಸು೬೦;ಗೃಹಿಣಿ;ಕಂದಾವರ.

೨೯. ಭಾರತಿ ಶೆಟ್ಟಿ;ವಯಸ್ಸು೩೦;ಗೃಹಿಣಿ;ಹೆಬ್ಬಾಗಿಲು ಮನೆ,ನೂಜಾಡಿ.

೩೦. ಭಾಸ್ಕರ ಶೆಟ್ಟಿ ದಿಂಡಕಲ್;ವಯಸ್ಸು೬೦;ಬಲ್ಲಾಳರು ಪಂಜುರ್ಲಿಗರಡಿ,ಬಸರೂರು.

೩೧. ಮಂಜು ಸೆಟ್ಟಿಗಾರ;ವಯಸ್ಸು೭೦;ಕೃಷಿಕ;ಕಂದಾವರ.

೩೨. ಮಂಜು ಸೆಟ್ಟಿಗಾರ;ವಯಸ್ಸು೬೬;ಪುರಾಣಿಕರ ಮನೆಹತ್ತಿರ,ಉಳ್ಳೂರು.

೩೩. ಮಂಜುನಾಥ ನಾಯ್ಕ್;ವಯಸ್ಸು೭೫;ಗುರಿಕಾರ;ಮಟಪಾಡಿ.

೩೪. ಮಹಾಬಲೇಶ್ವರ ಹರಿಕಾರ;ವಯಸ್ಸು;೬೦;ಹರಿಕಾರರಮನೆ,ಬಸರೂರು.

೩೫. ರಘುರಾಮ ಬಂಡಾರಿ;ವಯಸ್ಸು೬೫;ಗುರಿಕಾರರು,ಬಸರೂರು

೩೬. ರಾಜು ಪೂಜಾರಿ;ವಯಸ್ಸು;೪೦;ಕೃಷಿಕ;ಗರಡಿಮನೆ,ಬಸರೂರು.

೩೭. ರಾಜೇಶ ಗುಡಿಗಾರ;ವಯಸ್ಸು೩೫;ಗುಡಿಗಾರರ ಮನೆ,ಬಸರೂರು.

೩೮. ರಾಜೇಂದ್ರ ಸೆಟ್ಟಿಗಾರ;ವಯಸ್ಸು೪೫;ಬ್ಯಾಂಕ್ಉದ್ಯೋಗಿ;ಬಸರೂರು

೩೯. ರಾಮಣ್ಣ ಶೆಟ್ಟಿ;ವಯಸ್ಸು೫೫;ಕೃಷಿಕ;ಮೇರ್ಡಿ,ಬಸರೂರು

೪೦. ಲಕ್ಷ್ಮೀನಾರಾಯಣ ಮಧ್ಯಸ್ಥ;ವಯಸ್ಸು೯೦;ನಿವೃತ್ತಶಿಕ್ಷಕರು;ಬಸರೂರು.

೪೧. ವಿಕಾಸ ಹೆಗ್ಡೆ;ವಯಸ್ಸು೩೦;ವಕೀಲರು;ಕೊಳ್ಕೆರೆಮನೆ,ಬಸರೂರು.

೪೨. ಶಂಕರಬಂಡಾರಿ;ವಯಸ್ಸು೭೫;ಕೃಷಿಕ;ನಾವೂಡರವೊಳಲು,ಬಸರೂರು.

೪೩. ಶೀನ ದೇವಾಡಿಗ; ವಯಸ್ಸು;೭೫; ದೇವಾಲಯದ ಚಾಕರಿ; ಶ್ರೀಅಮ್ಮನವರ ದೇವಸ್ಥಾನದ ಹತ್ತಿರ, ಬಸರೂರು.

೪೪. ಶ್ರೀಧರ ಗುಡಿಗಾರ; ವಯಸ್ಸು ೪೫;ಗುಡಿಗಾರರ ಮನೆ;ಮೂಡುಕೇರಿ, ಬಸರೂರು.

೪೫. ಶ್ರೀಧರ ಶಾಸ್ತ್ರಿ;ವಯಸ್ಸು೩೫;ಶಿಕ್ಷಕರು;ಗುಂಡ್ಮಿ.

೪೬. ಶ್ರೀನಿವಾಸ ಬಂಡಾರಿ;ವಯಸ್ಸು೭೫;ಕೃಷಿಕ;ನಾವೂಡರವೊಳಲು,ಬಸರೂರು.

೪೭. ಸದಾಶಿವ ಶೆಟ್ಟಿ,ವಯಸ್ಸು೭೦;ನಿವೃತ್ತಶಿಕ್ಷಕರು;ಕಲ್ಲುಗುಡಿಮನೆ;ಹೊಸಾಡು

೪೮. ಸುಬ್ರಾಯ ಭಟ್;ವಯಸ್ಸು೭೦;ನಿವೃತ್ತಶಿಕ್ಷಕರು;ಶ್ರೀರಾಮಚಂದ್ರ ದೇವಾಲಯ, ಬಸರೂರು.

೪೯. ಸಂಜೀವನಾಯ್ಕ್;ವಯಸ್ಸು೭೦;ಕೃಷಿಕ;ಕಲ್ಲುಂಜೆಕುಳ್ಳಂಬಳ್ಳಿ

★★★

## ೨. ಮಾದರಿ ಪ್ರಶ್ನಾವಳಿ

**(ಅ) ವೈಯಕ್ತಿಕ ಮಾಹಿತಿ**

೧. ಹೆಸರು :

೨. ವಿಳಾಸ :

೩. ಲಿಂಗ :

೪. ಜಾತಿ :

೫. ಉದ್ಯೋಗ :

೬. ಕುಟುಂಬದ ವಿವರ :

**(ಆ) ವಿಷಯವಾರು ಮಾಹಿತಿ**

೧. ಬಸರೂರಿನ ಹೆಸರಿಗೆ ಕಾರಣವೇನು?

೨. ಬಸರೂರಿನಲ್ಲಿರುವ ದೈವಸ್ಥಾನಗಳು ಎಷ್ಟು? ಯಾವುವು?

೩. ಬಸರೂರಿನ ದೇವಾಲಯ, ದೈವಸ್ಥಾನಗಳಲ್ಲಿ ಆಚರಿಸುವ ಆಚರಣೆಗಳು ಯಾವುವು?

೪. ಬಸರೂರಿನ ಕೇರಿಗಳು ಮತ್ತು ಕೆರೆಗಳು ಯಾವವು?

೫. ಬಸರೂರಿನಲ್ಲಿ ಯಾವ ಯಾವ ಜನಸಮುದಾಯದವರು ವಾಸವಾಗಿದ್ದಾರೆ?

೬. ಇಲ್ಲಿನ ಜನರ ಮೂಲ ಕಸುಬು ಯಾವುದು?

೭. ಬಸರೂರಿನಲ್ಲಿ ಈಗ ಇರುವ ಪ್ರದರ್ಶನ ಕಲೆಗಳು ಯಾವುವು?

೮. ಬಸರೂರಿನ ಮಾಗಣೆಗಳು ಧಾರ್ಮಿಕ ಚಟುವಟಿಕೆಯಲ್ಲಿ ಏಕತೆ ಇದೆಯೇ?

೯. ಬಸರೂರಿನಲ್ಲಿ ಯಾವ ಯಾವ ಬಗೆಯ ಕರಕುಶಲ ಇದೆ?

೧೦. ಕರಕುಶಲ ಕರ್ಮಿಗಳ ಬದುಕು ಹೇಗಿದೆ?

೧೧. ಬಸರೂರು ಮಾಗಣೆಯಲ್ಲಿರುವ ವಾಸದ ಮನೆಗಳ ವಿನ್ಯಾಸ ಹೇಗಿದೆ?

೧೨. ಬಸರೂರಿನಲ್ಲಿ ಮಾರಿಹಬ್ಬದ ಯಾವಾಗ ನಡೆದಿತ್ತು?

೧೩. ಬಸರೂರಿನ ಸ್ಥಳ ಪುರಾಣದ ಬಗೆಗೆ ಕತೆಗಳಿವೆಯೇ?

೧೪. ಬಸರೂರಿನ ಕುರಿತಾಗಿರುವ ಜನಪದ ಗೀತೆಗಳು ನಿಮಗೆ ಗೊತ್ತಿದೆಯೇ?

೧೫. ನಿಮ್ಮ ಜೀವನಾವರ್ತನ ಆಚರಣೆಗಳಲ್ಲಿ ವಿಶಿಷ್ಟವಾದುದು ಯಾವುದು?

೧೬. ನಿಮ್ಮ ಪ್ರದರ್ಶನ ಕಲೆಗಳು ಬಸರೂರಿಗೆ ಮಾತ್ರ ಸೀಮಿತವೇ?

೧೭. ಈಗ ಬಸರೂರಿನಲ್ಲಿ ಪ್ರದರ್ಶನ ಕಲೆಗೆ ಯಾವ ಬಗೆಯ ಮನ್ನಣೆಯಿದೆ?

೧೮. ಪ್ರದರ್ಶನ ಕಲೆಗಳು ಕೃಷಿ ಸಂಬಂಧಿಯಾಗಿದೆಯೇ?

೧೯. ಬಸರೂರಿನ ಕರೆಗಳ ಸ್ಥಿತಿ ಈಗ ಹೇಗಿದೆ?

೨೦. ಬಸರೂರಿನ ಇಂದಿನ ಸ್ಥಿತಿ ಹೇಗಿದೆ?

★★★

# ೩. ಪರಾಮರ್ಶನ ಸಾಹಿತ್ಯ

## (ಅ) ಗ್ರಂಥಗಳು


೧. ಅನಂತರಾಮ.ಕೆ; ೧೯೯೭; ದಕ್ಷಿಣದಸಿರಿನಾಡು; ಅನಂತಪ್ರಕಾಶನ, ಮೈಸೂರು.

೨. ಅಮೃತ ಸೋಮೇಶ್ವರ; ೨೦೦೭; **ತುಳುವಜಾನಪದ ಕೆಲವು ನೋಟಗಳು**; ಪ್ರಸಾರಾಂಗ ಕನ್ನಡ ವಿ.ವಿ, ಹಂಪಿ.

೩. ಉದಯ ಕುಮಾರ ಶೆಟ್ಟಿ; ೨೦೦೭; **ಉಡುಪಿ ಜಿಲ್ಲೆಯ ಗ್ರಾಮದೇವತೆಗಳು; ಮಂದಾರ್ತಿ ಒಂದು ವಿಶೇಷ ಅಧ್ಯಯನ**. ಅಖಿಲಭಾರತ ಸಾಹಿತ್ಯ ಸಮ್ಮೇಳನ, ಉಡುಪಿ.

೪. ಎಸ್.ಡಿ ಶೆಟ್ಟಿ; ೨೦೦೨; **ತುಳುನಾಡಿನ ಜೈನಧರ್ಮ**; ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

೫. ಓಂಕಾರ ನಾಯ್ಕ.ಎಚ್; ೧೯೮೭; **ಚಂದ್ರಗುತ್ತಿ ಕ್ಷೇತ್ರದ ಸಾಂಸ್ಕೃತಿಕ ಸಂಕಥನ**; ೨೦೦೭; ವಿಶ್ವಬಂಧುಪ್ರಕಾಶನ, ಶಿವಮೊಗ್ಗ.

೬. ಕಲುಬುರ್ಗಿ ಎಂ.ಎಂ(ಸಂ); ೧೯೯೪; **ಕರ್ನಾಟಕದ ಕೈಪಿಯತ್ತುಗಳು**; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೭. ಗಣಪತಿರಾವ್ ಐಗಳ; ೧೯೨೩; **ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ**; ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

೮. ಗಾಯತ್ರಿ ನಾವುಡ ಮತ್ತು ನಾವಡ.ಎ.ವಿ;(ಸಂ); ೨೦೦೭; **ಪಾಣಾರಾಟ**; ಅಖಿಲಭಾರತ ಸಾಹಿತ್ಯ ಸಮ್ಮೇಳನ, ಉಡುಪಿ.

೯. ಗುರುಪ್ರಸಾದ ಸಿ.ಟಿ; ೨೦೦೫; **ಏಳು ಊರಿನ ದೇವತೆಗಳು ಒಂದುಅಧ್ಯಯನ**; ಪ್ರಸಾರಾಂಗ ಕನ್ನಡವಿಶ್ವವಿದ್ಯಾಲಯ, ಹಂಪಿ.

೧೦. ಗುರುರಾಜ ಭಟ್ಟ ಪಾದೂರು; ೨೦೦೯ **ತುಳುನಾಡು**; ಗುರುರಾಜ ಭಟ್ ಮೆಮೋರಿಯಲ್ ಟ್ರಸ್ಟ್, ಉಡುಪಿ.

೧೧. ಗೋವಿಂದ ರಾಜು ಟಿ; ೧೯೯೩; **ಚನ್ನಾದೇವಿ ಅಗ್ರಹಾರ ಜಾನಪದೀಯ ಅಧ್ಯಯನ**; ಪುಸ್ತಕ ಜೇನು ಪ್ರಕಾಶನ, ದೊಡ್ಡಬಳ್ಳಾಪುರ.

೧೨. ಚಂದ್ರಶೇಖರ ಐತಾಳ ಗುಂಡ್ಮಿ; ೧೯೮೨; **ಚಿನ್ನದ ಕದರ್ಥಾಂಗೆ ಸಲಹೀನಿ**; ಕನ್ನಡ ಸಾಹಿತ್ಯಪರಿಷತ್ತ, ಬೆಂಗಳೂರು.

೧೩. ಚಂದ್ರಶೇಖರಐತಾಳ ಗುಂಡ್ಮಿ; ೧೯೭೩; **ಮದ್ದುಂಟೆ ಜನನ ಮರಣಕ್ಕೆ**; ಅನಸೂಯ ಪ್ರಕಾಶನ, ಕೋಣಾಜೆ.

೧೪. ಚಂದ್ರಶೇಖರ ಹೊಳ್ಳ ಉಪ್ಪುಂದ; ೨೦೦೧; **ಕುಂದನಾಡು ದೇವಾಲಯಗಳು ಹಾಗೂ ಶೃದ್ಧಾಕೇಂದ್ರಗಳು ಒಂದು ಸಾಂಸ್ಕೃತಿಕ ಪರಿಚಯ**; ಕುಂದ ಅಧ್ಯಯನಕೇಂದ್ರ, ಉಪ್ಪುಂದ.

೧೫. ಚಂದ್ರಶೇಖರ ಹೊಳ್ಳ ಉಪ್ಪುಂದ; ೨೦೦೯; **ಉಪ್ಪುಂದ ಶ್ರೀದುರ್ಗಾಪರಮೇಶ್ವರಿ ದೇವಸ್ಥಾನ ಒಂದು ಅಧ್ಯಯನ**; ಕುಂದ ಅಧ್ಯಯನ ಸಂಸ್ಥೆ, ಉಪ್ಪುಂದ

೧೬. ಚಿದಾನಂದ ಮೂರ್ತಿ.ಎಂ; ೨೦೦೮; **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**; ಸ್ವಪ್ನ ಬುಕ್ ಹೌಸ್, ಬೆಂಗಳೂರು.

೧೭. ಚಿದಾನಂದ ಮೂರ್ತಿ.ಎಂ; ೧೯೮೪; **ಪಗರಣ**; ಪುಸ್ತಕ ಚಿಲುಮೆ, ಮೈಸೂರು.

೧೮. ಜಯಪ್ರಕಾಶ ಶೆಟ್ಟಿ ಎಚ್ ಮತ್ತು ಚಿಕ್ಕಮಂಗಳೂರು ಗಣೇಶ; ೨೦೦೬; **ಬೀಜ ಮುಹೂರ್ತ**; ವಿಜಯಲಕ್ಷ್ಮೀ ಪ್ರಕಾಶನ, ಮೈಸೂರು.

೧೯. ಜಿ.ಎಸ್ ಭಟ್; ೧೯೯೨; **ಸಂಸ್ಕೃತಿ ಒಂದು ಅಧ್ಯಯನ**; ಲಕ್ಷ್ಮೀ ಪ್ರಿಂಟಿಂಗ್ ಆಂಡ್ ಪಬ್ಲಿಷಿಂಗ್, ಮೈಸೂರು.

೨೦. ತಿಪ್ಪೇರುದ್ರ ಸ್ವಾಮಿ ಎಚ್; ೨೦೧೦; **ಕರ್ನಾಟಕ ಸಂಸ್ಕೃತಿ ಸಮೀಕ್ಷೆ**; ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು.

೨೧. ಧ್ರುವರಾಜ.ನಾ.ಗದಗಕರ; ೧೯೯೯; **ದೇಗುಲರಥಶಿಲ್ಪ**; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೨. ನರಸಿಂಹ ಮೂರ್ತಿ.ಪಿ.ಎನ್; ೨೦೦೭; **ಕುಂದನಾಡಿನ ಶಾಸನಗಳು**; ಅಖಿಲ ಭಾರತ ಸಾಹಿತ್ಯ ಸಮ್ಮೇಳನ, ಉಡುಪಿ.

೨೩. ನರಸಿಂಹಮೂರ್ತಿ.ಪಿ.ಎ; ೨೦೦೫; **ಹಟ್ಟಿಯಂಗಡಿಶ್ರೀಸಿದ್ಧಿವಿನಾಯಕ**; ಧರ್ಮದರ್ಶಿ ಶ್ರೀ ಸಿದ್ಧಿವಿನಾಯಕ ದೇವಸ್ಥಾನ, ಹಟ್ಟಿಯಂಗಡಿ

೨೪. ನಾಗೇಗೌಡ.ಎಚ್.ಎಲ್; ೨೦೦೭; **ಪ್ರವಾಸಿ ಕಂಡ ಇಂಡಿಯಾ**; (ಸಂ೨)ಐಬಿಎಚ್‌ಪ್ರಕಾಶನ, ಬೆಂಗಳೂರು.

೨೫. ನಾವಡ.ಎ.ವಿ(ಸಂ); ೧೯೭೭; **ಕುಂದದರ್ಶನ**; ಭಂಡಾರ್ಕಾರ್ಸ್ ಕಾಲೇಜು, ಕುಂದಾಪುರ.

೨೬. ನಾವಡ.ಎ.ವಿ; ೨೦೦೭; **ಕರಾವಳಿ ಜಾನಪದ**; ೭೪ನೇ ಅಖಿಲಭಾರತ ಸಾಹಿತ್ಯ ಸಮ್ಮೇಳನ, ಉಡುಪಿ.

೨೭.ನಾವುಡ ಎ.ವಿ; ೧೯೯೯; **ಗಿಡಿಕೆರೆ ರಾಮಕ್ಕ ಮುಗ್ಗೇರ್ತಿ ಕಟ್ಟಿದ ಸಿರಿಪಾಡ್ದನ**; ಪ್ರಸಾರಾಂಗ ಕನ್ನಡವಿಶ್ವವಿದ್ಯಾಲಯ, ಹಂಪಿ.

೨೮. ಪಾ.ನ ಮಯ್ಯ; ೧೯೯೫; **ಕೋಟದವರು**; ಪಾರಂಪಳ್ಳಿ ಪ್ರಕಾಶನ, ಮಂಗಳೂರು.

೨೯. ಪೀಟರ್.ಜೆ.ಕ್ಲಾಸ್; ೧೯೮೭; **ತುಳುವದರ್ಶನ**; (ಕನ್ನಡಅನುವಾದ: ನಾವಡ ಎ.ವಿ ಮತ್ತು ಸುಭಾಶ್ಚಂದ್ರ)ಕುಂದಾಪುರ ಪ್ರಾದೇಶಿಕ ವ್ಯಾಸಂಗ, ಕುಂದಾಪುರ.

೩೦. ಪುಟ್ಟಯ್ಯ ಬಿ.ಎಂ; ೨೦೧೦; **ಸಂಶೋಧನೆ ತಾತ್ವಿಕ ಆಯಾಮಗಳು**; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೧. ಪುರುಷೋತ್ತಮ ಬಿಳಿಮಲೆ,ನಾವುಡ.ಎ.ವಿ,ರಾಮಚಂದ್ರ ಉಚ್ಚಿಲ(ಸಂ);೧೯೯೫;**ಸಿರಿ ಅಮೃತ ಸೋಮೇಶ್ವರ ಅಭಿನಂದನ ಸಂಪುಟ**;ಕಲಾ ಗಂಗೋತ್ರಿ ಅಮೃತ ಸೋಮೇಶ್ವರ ಅಭಿನಂದನ ಸಮಿತಿ,ಸೋಮೇಶ್ವರ.

೩೨. ಪೂವಪ್ಪಕಣಿಯೂರು; ೨೦೦೪; **ಪೂಕರೆ ಮತ್ತು ಇತರ ಜಾನಪದೀಯ ಲೇಖನಗಳು**; ರಾಜ್‌ಪ್ರಕಾಶನ, ಮೈಸೂರು.

೩೩. ಬಳೆಗಾರ ಬಿ.ಕೆ; ೧೯೯೨; **ತ್ರಿಯಂಬಕೇಶ್ವರದಿಂದ ಕದಲೀತನಕ**; ಬಸ್ರೂರು ಪ್ರಿಂಟರ್ಸ್, ಬಸರೂರು.

೩೪. ಬಾಬು ಬನ್ನಂಜೆ; ೨೦೦೭; **ನುಡಿಕಟ್ಟ್**; ಕೆಮ್ಮಲಜೆ ಜಾನಪದ ಪ್ರಕಾಶನ, ನಿಟ್ಟೂರು.

೩೫. ಬೈರೆಗೌಡ.ಎಂ; ಮೇರರು; **ಜಾನಪದೀಯ ಅಧ್ಯಯನ**; ಬ್ಯಾಲದಕೆರೆ ಪ್ರಕಾಶನ, ಮಂಡ್ಯ.

೩೬. ಭಟ್ಟಸೂರಿ.ಕೆ.ಜಿ; ೨೦೦೯; **ಕರ್ನಾಟಕ ಶಾಸನ ಸಂಶೋಧನೆ**; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೭. ಮಂಜಪ್ಪ ಶೆಟ್ಟಿ.ಎಂ.ಪಿ; ೨೦೦೦; **ಮಲೆನಾಡು ಜಾನಪದ**; ಮಸಗಲಿ ಪ್ರಕಾಶನ, ಮೈಸೂರು.

೩೮. ಮಾಲತಿ ಮೂರ್ತಿ ಕೆ ಮತ್ತು ನರಸಿಂಹಮೂರ್ತಿ ಎಚ್ ವಿ; ೧೯೯೪; **ಕುಂದಾಪುರ ತಾಲೂಕು ಒಂದು ಅಧ್ಯಯನ**; ಭಂಡಾಕಾರ್ಸ್ ಕಾಲೇಜು, ಕುಂದಾಪುರ

೩೯. ಮೋಹನ ಕೃಷ್ಣ ರೈ.ಕೆ; ಕೆ೧೯೯; **ತುಳು ಸಂಸ್ಕೃತಿ ಚತುರ್ಮುಖಿ ಅಧ್ಯಯನ**; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೦. ರಘುಪತಿ ಭಟ್ ಕೆಮ್ತೂರು; ೧೯೭೯; **ತುಳುನಾಡಿನ ಸ್ಥಳನಾಮಗಳ**; ಕನ್ನಡ ಸಾಹಿತ್ಯ ಪರಿಷತ್ತ, ಬೆಂಗಳೂರು.

೪೧. ರಮೇಶ ಕೆ.ವಿ; ೧೯೬೯; **ತುಳುನಾಡಿನ ಶಾಸನಗಳು**; ಗೀತಾ ಬುಕ್‌ಹೌಸ್, ಮೈಸೂರು.

೪೨. ರವೀಂದ್ರನಾಥ ಕೆ; ೨೦೧೧; **ಅಧ್ಯಯನದ ವಿಧಿ ವಿಧಾನಗಳು**; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೩. ರಹಮತ್ ತರೀಕೆರೆ; ೨೦೦೬; **ಕರ್ನಾಟಕದ ನಾಥಪಂಥ**; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೪. ರಾಮಕೃಷ್ಣ ಆಚಾರ್ ಪಾಲ್ತಾಡಿ(ಸಂ); ೨೦೦೨; **ಆಟಿ**; ಜಾನಪದ ಕೂಡುಕಟ್ಟು, ಸುಳ್ಯ.

೪೫. ವರಮಹಾಲಕ್ಷ್ಮೀಹೊಳ್ಳ ಯು; ೨೦೦೬; **ಹೊಸ್ತಿಲದೀಪ**; ಕುಂದಅಧ್ಯಯನ ಕೇಂದ್ರ, ಉಪ್ಪುಂದ.

೪೬. ವಸಂತ ಕುಮಾರ ತಾಳ್ತಜೆ; ೧೯೯೮; **ಸಾಂಸ್ಕೃತಿಕ ಸಂಶೋಧನೆ–ಒಂದು ಮುನ್ನೋಟ**; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೭. ವಸಂತ ಶೆಟ್ಟಿಬಿ; ೧೯೯೫; **ಐತಿಹಾಸಿಕ ಮಹತ್ವದ ಉಡುಪಿ ತಾಲೂಕಿನ ಶಾಸನಗಳು**; ಅನುಪಮ ಪ್ರಕಾಶನ, ಬ್ರಹ್ಮಾವರ.

೪೮. ವಸಂತ ಮಾಧವ ಕೆ.ಜಿ; ೨೦೦೧; **ಕರಾವಳಿ ಕರ್ನಾಟಕದ ಕನ್ನಡ ಶಾಸನಗಳ ಅಧ್ಯಯನ**; ನಾನಾ ಪ್ರಕಾಶನ, ಹಳೆಯಂಗಡಿ.

೪೯. ವಾದಿರಾಜ ಭಟ್ಟ ಕನರಾಡಿ; ೧೯೮೭; **ದೇವದಾಸಿಯರ ಹಾಡುಗಳು**; ಶ್ರೀಮಹಾಲಿಂಗೇಶ್ವರದೇವಸ್ಥಾನ, ಬಸರೂರು.

೫೦. ವಾದಿರಾಜ ಭಟ್ಟ ಕನರಾಡಿ(ಸಂ); ೧೯೯೭; **ಹೆಸರಾದ ಪಟ್ಟಣ ಬಸರೂರು ಒಂದು ಅಧ್ಯಯನ**; ಶ್ರೀಶಾರದ ಕಾಲೇಜು,ಬಸರೂರು.

೫೧. ವಾಮನ ನಂದಾವರ; ೨೦೦೬; **ಜನಪದಸಂಸ್ಕೃತಿ ರೂಪಿಸುವ ಬದುಕು**; ಹೇಮಾಂಶು ಪ್ರಕಾಶನ, ಮಂಗಳೂರು.

೫೨. ವಾಮನ ನಂದಾವರ; ೨೦೦೯; **ಕಲೆಂಬಿ**; ವಿಶ್ವ ತುಳುಸಮ್ಮೇಳನೊ, ಉಜಿರೆ.

೫೩. ವಿಶ್ವಂಭರ ಉಪಾಧ್ಯಾಯ; ೨೦೦೭; **ಕುಂದನಾಡಿನ ಪುರಾತನ ಬಂದರು ನಗರಗಳು ಬಾರ್ಕೂರು ಮತ್ತು ಬಸರೂರು**; ಆರಾಧನ ವೇದಿಕೆ, ಕುಂಭಾಶಿ.

೫೪. ವೀರೇಂದ್ರ ಶೀಲವಂತ; ೨೦೧೦ **ಕೃಷಿ ಆಚರಣೆಗಳು**; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೫. ವೆಂಕಟೇಶ ಜೋಯಿಸ್ ಕೆ.ಜಿ; ೧೯೮೬; **ಕೆಳದಿಶಾಸನಗಳ ಸಾಂಸ್ಕೃತಿಕ ಅಧ್ಯಯನ**; ಕನ್ನಡ ಸಾಹಿತ್ಯ ಪರಿಷತ್ತ, ಬೆಂಗಳೂರು.

೫೬. ಶಿವಕುಮಾರ ಸ್ವಾಮಿ; ೧೯೮೮; **ಕರ್ನಾಟಕದ ಜಾತ್ರೆಗಳು**; ಸ್ನಾತಕೋತ್ತರ ಕೇಂದ್ರ ಮೈಸೂರು.

೫೭. ಶಿವರಾಮ ಶೆಟ್ಟಿ ಶಿರೂರು; ೧೯೯೫; ಬಂಟರ ಮೂಲ ಒಂದು ಅಧ್ಯಯನ; ಬಂಟರ ಯಾನೆ ನಾಡವರ ಸಂಘ, ಮಂಗಳೂರು.

೫೮. ಶೈಲಾ. ಟಿ.ವರ್ಮಾ;೨೦೦೨;ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ;ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

೫೯. ಸುಬ್ಬಣ್ಣ ರೈ.ಎ; ೧೯೯೪; ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು; ಮುಂಬಯಿ ವಿಶ್ವವಿದ್ಯಾಲಯ.

೬೦. ಸುಬ್ಬಣ್ಣ ರೈ.ಎ; ೨೦೦೪; ದ್ರಾವಿಡ ಸಂಸ್ಕೃತಿ; ಸಿವಿಜಿ ಪಬ್ಲಿಕೇಷನ್, ಬೆಂಗಳೂರು.

೬೧. ಸುಬ್ಬಣ್ಣ ರೈ.ಎ; ೧೯೯೯; ಕದ್ರಿ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೨. ಹಿರೇಮಠ ಬಿ.ಆರ್; ೧೯೮೬; ಶಾಸನಗಳಲ್ಲಿ ಕರ್ನಾಟಕದ ವರ್ತಕರು; ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

(ಆ) ನಿಘಂಟುಗಳು

೧. ಸಂಕ್ಷಿಪ್ತ ಕನ್ನಡ ನಿಘಂಟು(ಪರಿಷ್ಕೃತ); ೨೦೦೧; ಕನ್ನಡ ಸಾಹಿತ್ಯ ಪರಿಷತ್ತ, ಬೆಂಗಳೂರು.

೨. ಸಿರಿಗನ್ನಡ ಅರ್ಥಕೋಶ; ೧೯೯೦; ಶಿವರಾಮ ಕಾರಂತ(ಸಂ); ಎಸ್‌ಬಿಎಸ್ ಪಬ್ಲಿಷರ್ಸ, ಬೆಂಗಳೂರು.

(ಇ) ನಿಯತಕಾಲಿಕಗಳು ಮತ್ತು ಸ್ಮರಣಸಂಚಿಕೆ

೧. ಅರ್ಪಣ ಮಾರಿಹಬ್ಬದ ಸ್ಮರಣ ಸಂಚಿಕೆ; ೧೯೮೪; ನಾವಡ.ಎ.ವಿ(ಸಂ); ಮಾರಿಜಾತ್ರೆ ಸಮಿತಿ, ಬಸರೂರು.

೨. ದರ್ಶನ ವಾರ್ಷಿಕ ವಿಶೇಷಾಂಕ; ಭಂಡಾರ್ಕಾರ್ಸ್ರ ಕಾಲೇಜು, ಕುಂದಾಪುರ.

೩. ಬೆಳ್ಳಿ ಮಿನುಗು; ೧೯೮೮; ಭಂಡಾರ್ಕಾರ್ಸ್ರ ಆರ್ಟ್ಸ್ ಮತ್ತು ಸಾಯನ್ಸ್ ಕಾಲೇಜು, ಕುಂದಾಪುರ.

೪. ಶ್ರೀ ಮಾರಿಕಾಂಬಾ ದೇವಿಯ ಚರಿತ್ರೆ, ಮಾರಿಕಾಂಬಾ ದೇವಸ್ಥಾನ, ಶಿರಸಿ.

೫. ಶಾರದಾವಾಣಿ ವಾರ್ಷಿಕಾ ವಿಶೇಷಾಂಕ; ಶ್ರೀಶಾರದಾ ಕಾಲೇಜು, ಬಸರೂರು.

ಪ್ರಜಾವಾಣಿ ಸಾಪ್ತಾಹಿಕ; ಜೂನ್೨೦, ೨೦೧೧.

೬. THE ILLUSTRATED WEEKLY OF INDIA ; September 10, 1978.

★★★

# (೪) ಮೌಖಿಕ ಸಾಹಿತ್ಯ- ಆಯ್ದ ಪಠ್ಯಗಳು

## ದೊಟ್ಟೆಕಾಲ್ ಚಿಕ್ಕು ಕತೆ

ಬಸ್ರೂರು ಮೂಡಕೇರಿ ಸ್ಥಳದೊಳಗೆ । ಜೈನ್ ವರ್ಗವು ಎಂಬ ಕುಲದೊಳಗೆ ॥
ದೊಟ್ಟೆಕಾಲಮ್ಮನು ಹುಟ್ಟಿ ಬಾಳುತಲಿದ್ಲು । ಷೋಡಶ ಪ್ರಾಯವು ತುಂಬಿ ಬರುತಲಿತ್ತು ॥
ಕೈದಾರೆ ವಿವ್ಹವಸ್ವವಾಗುತಲಿತ್ತು । ಪುಷ್ಪಾಳಿಕೆಯೊಳೊಪ್ಪಿ ಬಾಳುತಲಿದ್ದು ॥
ಶ್ರಾವಣಮಾಸವೊ ಎಂಬ ದಿನ ಬರಲು । ತೌರ್ಮನೆಗೆ ರಂಭೇನ ಕರ್ಸುತಲಿದ್ರು ॥

ಅಕ್ಕ ತಂಗಿಯರು ಮೂವರೊಂದುಗೂಡಿ । ಹೊನ್ನ ಗಿರಿಜೆಯ ಆಟ ಆಡಬೇಕೆಂದೂ ॥
ಮೇಲುಪ್ಪರ್ಗೆಗೆ ತೆರಳಿ ಹೋಗುತಲಿದ್ರು । ಬೆಳ್ಳಿ ಮೂಡಿ ಬೆಳಗಾಗುವ ಸಮಯದಲ್ಲಿ ॥
ಕೈಕಾಲು ಮುಖಪದ್ಮ ತೊಳೆದುಕೊಂಡು । ಮಣೆ ತುಂಬ ಹೊನ್ನನ್ನೆ ಹ್ಯೊಸಿಕೊಂಡು ॥
ಒಂದೊಂದಾಗಿ ಆಟ ಆಡುವಾಗ । ದೊಟ್ಟೆಕಾಲಮ್ಮಗೆ ಆಟ ಸೋಲುತಲಿತ್ತು ॥
ಆ ಆಟವು ಜಿಲ್ಲು ಆಯಿತು ಎಂದು । ಪ್ರತಿ ಆಟವನೆ ಹೂಡಿ ಆಡುತಲಿದ್ರು ॥
ಮರುಆಟದಲಿ ಸೋಲು ಬರುತಲಿತ್ತು । ಅತಿ ಕೋಪ ದೊಟ್ಕಾಲಮ್ಮ ತಾಳಿಕೊಂಡು ॥
ಗಿರಿಜಮಣೆಯ ಕವುಚಿ ಇಡುತಲಿದ್ಲು । ಕೈಹೊಡೆದು ಶಾಪವ ಕೊಡುತಲಿದ್ಲು ॥
ಏಳ್ ನೆಲೆಯಿಂದ ತಗ್ಗಿಗೆ ಹಾರುತಲಿದ್ಲು । ರಾಜಾಂಗಣ, ರಾಜಬೀದಿ ಕಳೆದೆ ಹೋಗಿ ॥
ಮೂಡುಕೆರೆಯನ್ನೆ ಹಾರಿ ಮೃತಪಟ್ಟಳೋ ॥
ಅಕ್ಕ ಮಾಡಿದಳೊ ಎಂಬ ದುಕ್ಕದಿಂದ । ತಂಗಿಯೆಂಬರು ಹಾರಿ ಮೃತಪಟ್ಟರು ॥
ಒತ್ತಿನಮ್ಮ ಬತ್ತಲೆಯನ್ನು ಎನಿಸಿಕೊಂಡು । ದೊಟ್ಟೆಕಲ್ಲಲಿ ಬಿದ್ದು ಕಾಡುತಲಿದ್ರಿ ।
ದಿನದಿನದಲಿ ಪೂಜೆ ನಡೆಸುವಾಗ । ಕಲೆ ಸಾನ್ನಿಧಿಯು ಏರಿ ಬರುತ್ತಲಿತ್ತು ॥
ಕೊಟ್ಟಲ್ಲಿಗೇ ಭೋಗ ಸಾಲದು ಎಂದು । ದೊಟ್ಟೆಕಲ್ಲಿಂದ ಸವಾರಿ ಹೊರ್ಡುತಲಿದ್ರಿ ॥
ಇದು ಸ್ಥಳವು ದೇವಿ ಗನವೀತೆಂದೂ । ಮಂಡ್ಲಭೋಗಕೆ ದೊಟ್ಕಾಲಮ್ಮ ಬಂದರ ಮೇಲೆ
ಇಷ್ಟಾರ್ಥವಾಯ್ತೆಂದು ನಲಿಯಬೇಕು ॥

## ಹೌಂದ್ರಾಯನ ವಾಲಗ

### ಗೋಯಿಂದನ ಸಂಧಿ

ಶ್ರೀ ಗಣಾಧಿಪನ ಪಾದಕ್ಕೆ ಗೋಯಿಂದಾನಿ ಗೋಯಿಂದೋ ಗೋಯಿಂದಾ
ಶ್ರೀ ರಾಮರಾಮ ಕಸ್ತೂರಿ ಚೆಲ್ವ ಶ್ರೀ ರಂಗನ ಪಾದಕ್ಕೆ
ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನ ಪಾದಕ್ಕೆ

ವೇದ ವೇದಾಂತ ಪುರಾಣಪುರುಷೋತ್ತುಮನ ಪಾದಕ್ಕೆ
ವೇದಗಳನ್ನೆ ಉದ್ಧರಿಸಿ ಭೂತಳಕ್ಕೆ ಚೆನ್ನಿಟ್ಟು
ಮೇದಿನಿಯಾಳಿದ ಪರಮಾತ್ಮನ ಪಾದಕ್ಕೆ
ಶಂಖಚಕ್ರ ಅನಂತಕೋಟಿ ಸೂರ್ಯಪ್ರಕಾಶನ ಪಾದಕ್ಕೆ
ಶಂಖಚಕ್ರ ಗದಾಪದ್ಮ ಧರಿಸಿ ಕ್ಷೀರನಾಮದಿಂದ
ಕಸ್ತೂರಿ ಚಂದನದ ತಿಲಕವನ್ನಿಟ್ಟ ದಶಾವತಾರನ ಪಾದಕ್ಕೆ
ಆದಿ ವರಾಹಮೂರ್ತಿಯ ಪಾದಕ್ಕೆ
ಹತ್ತವತಾರ ಹರಿಮಾಯಕ ನೀಲವರ್ಣನ ಪಾದಕ್ಕೆ
ಅವಿಗೆ ಹಾವಾದ ಗೋಪಿಗೆ ಕಂದನಾದ ಮಾವ ಕಂಸನ
ಕೊಂದ ಶ್ರೀ ಕೃಷ್ಣನ ಪಾದಕ್ಕೆ
ಅಯೋಧ್ಯಾ ಪುರವರಾಧೀಶನ ಪಾದಕ್ಕೆ
ಕೌಸಲ್ಯಾ ಗರ್ಭೋರತ್ನನ ಪಾದಕ್ಕೆ
ಅಣುರೇಣು ತೃಣಕಾಷ್ಠಗಳಲ್ಲಿ ವಾಸವಾಗಿರುವ
ಸೂಸಿರ ನಾಮಧೇಯನ ಪಾದಕ್ಕೆ
ಪುಂಡರೀಕಾಕ ಪುರಂದರ ವಿಠಲನ ಪಾದಕ್ಕೆ
ಭೈರಾವಚಲ ವೇದ ವಚನನ ಪಾದಕ್ಕೆ
ಕೂರ್ಮಾಚಲ ಶೇಷಾಚಲನ ಪಾದಕ್ಕೆ
ಗರುಡಾಚಲ ಖಚರಾಚಲನ ಪಾದಕ್ಕೆ
ಶೇಷಾಚಲ ವೆಂಕಟಾಚಲನ ಪಾದಕ್ಕೆ
ಶ್ರೀ ಸಚ್ಚಿದಾನಂದ ನಿತ್ಯಾನಂದನ ಪಾದಕ್ಕೆ

## ವಾಲಗ ಸಂಧಿ

ಲೀಲೇಗಳೇ ಲೀಲಿಗಲೇ ಎಂಕಟರಮಣನ ಲೀಲಿಗಳೇ
ಲೀಲಿಗಳೇ ಲೀಲಿಗಳೇ ಗೋಪಿಯ ಕಂದನ ಲೀಲಿಗಳೇ
ಒಳಗೇ ಇರ್ಪ್ವಂತ ಸ್ವಾಮಿಯ ಹರಗೆ ಕರತಂದು
ಸರಳ ಮಂಚನ ಮ್ಯಾಲೆ ಕೂಡಿಸಿ ದಳದಳಿಯೆಂಬ ಮಂಟಪ ಮಧ್ಯದಿ
ಚಿನುಮಯ ರೂಪನು ನೆಲಸಿದನು
ದಾಸರು ಸರಣರು ಮಡಿವಸ್ತ್ರವನ್ನುಟ್ಟು
ನರ್ತನದಿಂದಲ್ಲಿ ಕೊಣಯುತಲೀ

ಲೀಲಿಗಳೇ ಲೀಲಿಗಳೇ ಎಂಕಟರಮಣನ ಲೀಲಿಗಳೇ
ಸ್ವಾಮಿಗಿಂದ್ ವಾಲ್ಗುವಾ ಹೌಂದೇರಾಯ್ನ ವಾಲ್ಗುವಾ
ಭೂಮಿಗಿಂದ್ ವಾಲ್ಗುವಾ
ಮೇಲ್ಗಿರಗ್ ವಾಲ್ಗುವಾ
ಮಂದರಗಿರಿಗೆ ವಾಲ್ಗುವಾ
ಬಂಗಾರ್ ಗಿರಿಗೆ ವಾಲ್ಗುವಾ
ಹೊನ್ನ ಕಳ್ಸಕೆ ವಾಲ್ಗುವಾ
ಕಪಿಲ ತೀರ್ತಕೆ ವಾಲ್ಗುವಾ
ಸಕಲ ತೀರ್ತಕೆ ವಾಲ್ಗುವಾ
ತೀರ್ತ ಯಾತ್ರಿಗ್ ವಾಲ್ಗುವಾ
ಹತ್ತವತಾರಕೆ ವಾಲ್ಗುವಾ
ಮತ್ಸ್ಯವತಾರಕೆ ವಾಲ್ಗುವಾ
ಕೂರ್ಮಾವತಾರಕೆ ವಾಲ್ಗುವಾ
ವರಾವತಾರಕೆ ವಾಲ್ಗುವಾ
ಉಗ್ರಾವತಾರಕೆ ವಾಲ್ಗುವಾ
ನೀಲವತಾರಕೆ ವಾಲ್ಗುವಾ
ಸ್ವಾಮಿ ರುಂದಾವನಕೆ ವಾಲ್ಗುವಾ
ರಾಮವತಾರಕೆ ವಾಲ್ಗುವಾ
ರಾಮಚಂದ್ರ್ರಗೆ ವಾಲ್ಗುವಾ
ಲಕ್ಷ್ಮಣದೇವ್ರಿಗೆ ವಾಲ್ಗುವಾ
ಮುಕ್ಯಪಾರಣಗೆ ವಾಲ್ಗುವಾ
ಕಿಷ್ಣವತಾರಕೆ ವಾಲ್ಗುವಾ
ಉಡುಪಿ ಕಿಷ್ಣಗೆ ವಾಲ್ಗುವಾ
ಅಷ್ಟಮ ಸ್ತ್ರೀರಿಗೆ ವಾಲ್ಗುವಾ
ಅಷ್ಟ ಮಠಕ್ಕೆ ವಾಲ್ಗುವಾ
ಮುನಿಗಳಿಗೆಲ್ಲಾ ವಾಲ್ಗುವಾ
ಯಾವ ಮುನಿಗೆ ವಾಲ್ಗುವಾ
ನಾರದ ಮುನಿಗೆ ವಾಲ್ಗುವಾ
ಇಸ್ವಾಮಿತ್ರಗೆ ವಾಲ್ಗುವಾ
ಅಗಸ್ತ್ಯ ಮುನಿಗೆ ವಾಲ್ಗುವಾ

ಯೇದ ವ್ಯಾಸರಿಗೆ ವಾಲ್ಗುವಾ
ಸರುವ ಮುನಿಗಳಿಗೆ ವಾಲ್ಗುವಾ
ಅಮ್ನರಿಗೆಲ್ಲಾ ವಾಲ್ಗುವಾ
ಗಂಗೆಯಮ್ನರಿಗೆ ವಾಲ್ಗುವಾ
ಗೌರಮ್ನರಿಗೆ ವಾಲ್ಗುವಾ
ಲಕ್ಷ್ಮೀದೇವಿಗೆ ವಾಲ್ಗುವಾ
ಸೀತಾದೇವಿಗೆ ವಾಲ್ಗುವಾ
ಪಾರ್ವತಿದೇವಿಗೆ ವಾಲ್ಗುವಾ
ದಿಕ್‌ದಿಕ್ಕಿಗೆ ವಾಲ್ಗುವಾ
ದಸದಿಕ್ಕಿಗೆ ವಾಲ್ಗುವಾ
ಮೆಟ್ಟಿದ ಭೂಮಿಗೆ ವಾಲ್ಗುವಾ
ಜಾಗದ ಕರ್ತುಗೆ ವಾಲ್ಗುವಾ
ದೇವತೆಗಳಿಗೆ ವಾಲ್ಗುವಾ
ಇಂದ್ರ ದೇವರಿಗೆ ವಾಲ್ಗುವಾ
ಸೂರ್ಯದೇವರಿಗೆ ವಾಲ್ಗುವಾ
ಮಂಜುನಾಥಗೆ ವಾಲ್ಗುವಾ
ಸರುವ ದೇವರಿಗೆ ವಾಲ್ಗುವಾ

ಕಣ್ವಮುನಿಗೆ ವಾಲ್ಗುವಾ
ಗೌತಮ ಮುನಿಗೆ ವಾಲ್ಗುವಾ
ಪರಸುರಾಮನಿಗೆ ವಾಲ್ಗುವಾ
ಅಂಗೀರಸಗೆ ವಾಲ್ಗುವಾ
ಜಮದಗ್ನಿಗೆ ವಾಲ್ಗುವಾ

## ವಾಲಗ ಸಂಧಿ

## ಮನೆಯ ಯಜಮಾನನ ಹೊಗಳಿಕೆ

ಮಂಜಯ್ಯಣ್ಣನೆಂಬರು ಹೌಂದೇ ರಾಯ್ನ ವಾಲ್ಗುವಾ
ಭಕ್ತಿವಂತರ ಮಗನಾಲೇ
ಸ್ವಾಮಿ ಭಕ್ತಿನೆ ಮಾಡ್ವಂಗ್
ಹತ್ತವತಾರದ ಸ್ವಾಮಿಯು
ಮತ್ಸ್ಯವತಾರದ ಒಡಿಯನು
ಮಂದರಗಿರಿಯ ಮೇಲಾಲೆ
ಮನದಿ ಯೋಜ್ನಿ ಮಾಡೂರು
ಏನೆಂದ್ ಯೋಚ್ನಿ ಮಾಡೂರು
ಇಕ್ಕೇರಿಯ ಸೀಮೇಲಿ
ಪರಸುರಾಮನ ಸಿಸ್ವಿಯ
ನಮ್ಮ ಭಕ್ತನ ಮನೆಯಗೆ
ನಮ್ಮ ಹರಕೆ ಎಂಬುದೆ
ಹಿಂದ್ ಬಿದ್ದೆ ಹೋಯ್ತಲೇ
ಎಂದೇ ಯೋಚ್ನಿ ಮಾಡ್ಕಂಡು
ತಮ್ಮ ಬಂಟನ ಕರೆವರು
ಕರೆದೇ ಅಪ್ಪಣಿ ಕೊಡುವರು
ಏನೆಂದ ಅಪ್ಪಣಿ ಕೊಡುವರು
ಇಕ್ಕೇರಿ ಎಂಬ ಸೀಮೇಲೆ
ನಮ್ಮ ಭಕ್ತನ ಮನೆಯಲ್ಲಿ
ನಮ್ಮ ಹರಕೆ ಎಂಬುದೇ
ಹಿಂದ್ ಬಿದ್ದೇ ಹೋಯ್ತಲೇ
ಮನೀಗ್ ಹಾಳ್ ಹಕ್ಕಲೇ
ಮುಳ್ಳಿನ ಅವುಗೆ ಮೆಟ್ಗಂಡೇ
ಹುಲಿಚರ್ಮೊ ಹೊದ್ಕಂಡೇ
ಮಾಯ್ದಿಂದೇ ಬಪ್ಪರು
ಮಾಯ್ದಿಂದೇ ಬಂದೀಗ
ಮಂಜಯಣ್ಣಾ ಮನಿಯಲ್ಲಿ
ಸ್ವಾಮಿ ರುಂದನದ ಬುಡದಗೆ
ಹುಲಿಚರ್ಮೊ ಹಾಸೂರು
ಚವಕದಗೆ ಕೂತ್ಕಂಡೇ
ಒಂದ್ ಸಂಕೋ ಊದೂರು
ಭೂಮಿ ಬಾಯೇ ಬಿಡುವದು
ಎಯ್ಡ್ನಿ ಸಂಕೋ ಊದೂರು
ಕೂರ್ವನ ಎದಿ ಕೆಡುವದು
ಮೂರ್ನೇ ಸಂಕೋ ಊದೂರು
ಸರದಿ ಉಕ್ಕಿ ಹಾರೂದು
ಮಂಜಯ್ಯಣ್ಣನೆಂಬರು
ಅರ್ದದಾತ್ರಿ ಯೇಳೇಲಿ
ಮರ್ತೇ ನಿಂದ್ರಿ ಗೆಯ್ವಾಗೆ
ಕುಮ್ಬು ಹಾರಿ ಬೀಳೂರು
ನಿದ್ರಿ ಕಣ್ಣಗ ಏಳೂರು
ಪತಿ ಸಯನ ಪಟ್ಟ ಸತಿಯಲೇ

ಕೋಲು ಇಲ್ಲದ ಕೊಲಿಯಲೇ
ಹಗ್ಗೊ ಇಲ್ಲದ್ ಕಟ್ಟಲೇ
ಮುತ್ತಿಗೆ ಹಾಳ್ ಹಕ್ಕಲೇ
ಎಂದೇ ಅಪ್ಪಣಿ ಕೊಡುವಗೆ
ಸ್ವಾಮಿ ಬಂಟ ಎಂಬುವರು
ಕಾಲಬೈರವ ಸ್ವಾಮಿಯು
ಮಿಂದೇ ಮಡಿಯನುಡುವರು
ನಾಮಗಳನ್ನೇ ಧರಿಸೂರು
ಸಂಕ ಜಾಗಟೆ ಎಂಬುದೇ
ಹೊಗಲ ಮೇಲೆ ಇಟ್ಗಂಡೇ
ನಾಗರಬೆತ್ತ ಎಂಬುದೇ
ಬಲ್ದ ಕೈಲೇ ಹಿಡ್ಕಂಡೇ
ಹೊಕ್ಕಳ ಗಂಟಿಗೆ ಇಟ್ಗಂಡೇ
ತೆರಗೈಯಲ್ಲೆ ಎಬ್ಸೂರು
ನಿಂದ್ರಿ ಕಣ್ಣಗೇಳೂರು
ಯಾರ್ ಮುಕ್ಕೇ ಮನಿಯಂಗೇ
ದಾಸಯ್ನರ್ ಬಂದ್ರಲೇ
ದಾಸಯ್ಗ್ ಪಡಿನೇ ಕೊಡ್ಬನ್ನಿ
ಮಂಜಯಣ್ಣ ತಂಗಿಯು
ದಾಸಯ್ಗ್ ಪಡಿಯ ತರುವಳು
ಏನೆಲ್ಲಾ ಸಪ್ಪಳು
ಕೀರಚಣ್ಣ ಅಕ್ಕೈಲೇ
ಇಷ್ಟೊಂದ ಸಾಯ್ತಿ ಸರುವಂಗೆ
ಒಂದ್ ಚಂಪ್ತೀ ಹಣ್ಣಲೇ
ಸ್ವಾಮಿ ಬಂಟನೆಂಬರು
ಅಲ್ಲೇ ಮಾಯ್ಕವಾದರು

ಮಂದರಗಿರಿಗೇ ತೆರಳೂರು
ಮಂದರಗಿರಿಯ ಮೇಲಾಲೆ
ಮನದಿ ಯೋಚ್ನಿ ಮಾಡೂರು
ಏನೆಂದ್ ಯೋಚ್ನಿ ಮಾಡೂರು
ಭಕ್ತನ ಭಕ್ತಿ ಕಾಣ್ಕಲೇ
ಎಂದೇ ಯೋಚ್ನಿ ಮಾಡ್ಕಂಡೇ
ರೂಪು ಮರ್ಸಿ ಬರುವಾರು
ಯಾವ ರೂಪ್ಸಿ ಬರುವಾರು
ಬಸ್ವನ ರೂಪ ತಾಳೂರು
ಭಕ್ತನ ಮನೆಗೆ ಬರುವರು
ಭಕ್ತನ ಮನಿಗೆ ಬಂದೀಗ
ಬಾಗ್ಲಗೇ ನಿತ್ಗಂಡೇ
ಬಸವ ಸುಯ್ಲು ಹಾಕೂದು
ಬಸವಯ್ಯನ ಸುಯ್ಲೀಗೆ
ಅರ್ಧದಾತ್ರಿ ಯೇಳಲಿ
ಮರ್ತೇ ನಿದ್ರಿ ಗೆಯ್ವಾಗೆ
ಎನ್ ಬಂದೆ ಕೇಂಬರು
ಏನ್ ಬಂದೆ ಕೇಂಬಂಗೆ
ಏನೂ ನಾನು ಬರಲಿಲ್ಲೆ
ದಾತ್ರಿ ಒಂದ್ ಸಪನವು
ಕೆಟ್ಟ ಕೇಡಿನ ಸಪನವು
ಸೋಟದಗೆ ಕಾಣ್ಕಲೇ
ಎಂದೇ ಯೋಚ್ನಿ ಮಾಡ್ಕಂಡೆ
ತಾವಿದ್ದಲ್ಲೀಗ್ ಬಂದಿದಿ
ಜೋಯ್ಸ್ ಭಟ್ಟರೆಂಬರು
ತಮ್ಮ ಮಡದಿ ಕರವಾರು
ಗೆಜ್ಜಿಕಾಲ ಹೊನ್ನಮ್ಮ
ಕವಡೀ ಮಣಿಯ ತಾರಲೇ
ಕವಡೀ ಹರಲ ತಾರಲೇ
ಕವಡೀ ಮಣಿ ತಂದು
ಚಿಂತಾಮಣಿನೇ ಕಾಂಬರು
ಚಿಂತಾಮಣಿನೇ ಕಾಂಬಂಗೆ

ಕುಮ್ಬು ಹಾರಿ ಬೀಳೂರು
ನಿದ್ರೆ ಕಣ್ಣಿಗೆ ಏಳೂರು
ಬೆಳಗಿನ ಜಾಮ ಪರಿಯಂತ
ಮುಕ ಮಜ್ಜನ ಮಾಡ್ಕಂಡೇ
ತಮ್ಮ ತಮ್ಮನ ಕರ್ಕಂಡೇ
ಕರ್ದ್ ಮಾತೇ ಆಡೂರು
ಏನೆಂದೆ ಮಾತ ಆಡೂರು
ರಾತ್ರಿ ಒಂದ್ ಸಪನವೂ
ಕೆಟ್ಟ ಕೇಡಿನ ಸಪನವೂ
ಕುರವ ಮರ್ಲಿ ಕಟ್ಟಿದ್ದೊ
ಎಂದ್ ಆರೂ ಹೇಳ್ವಂಗೆ
ಜೋಯ್ಸ್ರ ಮನಗ್ಹೋಯ್ಕಲೇ
ನೋಟದೊಳಗೆ ಕಾಣ್ಕಲೇ
ಒದ್ದ್ ಸಂಗ್ತಿ ಕೇಣ್ಕಲೇ
ಎಂದೇ ಯೋಚ್ನಿ ಮಾಡ್ಕಂಡೇ
ಜೋಯ್ಸ್ರ ಮನಿಗೆ ಕೋಪರು
ಜೋಯ್ಸ್ರ ಮನಿಗೆ ಹೋಗ್ವಂಗೆ
ಜೋಯ್ಸ್ರ ಭಟ್ಟರೆಂಬುವರೇ
ಏನ್ ಬಂದೆ ಎಂದ್ರಲೇ
ಮಂಜಯಣ್ಣನೆಂಬರು
ಎರಗಿ ಕೈಯ ಮುಗುವರು
ಎರಗಿ ಕೈಯ ಮುಗುವಂಗೇ
ಏನೆಂದ್ ಮಾತೇ ಆಡೂರು
ನೋಟದೊಳಗೆ ನೋಡ್ವಂಗೆ
ದಡ್ಡ ದೇವ್ರು ಇರೋದ
ದಡ್ಡ ಕಣ್ ಕಟ್ಟಲೇ
ಎಂದೇ ತೋರಿ ಬಂದ್ವಲೇ
ಸ್ವಾಮಿ ಹಬ್ಬು ಮಾಡ್ಕಲೇ
ಜಾಗೋ ಕೊಟ್ಟ್ ದನಿಗಳು
ಅವ್ರ ಕೊಡೆ ಕೇಣ್ಕಲೇ

ಒಲ್ದ್ ಸಂಗ್ತಿಗೇಳ್ವಗೆ
ಏನಂದೇ ಹೇಳೂರು
ದಡ್ಡ ಕಣ್ ಕಟ್ಟಲೇ
ನಿನ್ನ ಹೆರಿಯರೆಂಬರು
ಹೇಳ್ಕಡ್ ಬಿಟ್ಟು ಹರ್ಕ್ಯಲೇ
ನೀರಾವರ ಆಯ್ಕಂದ್
ಸ್ವಾಮಿ ಹಾಳ ಹಾಕದ್ದ್

ಸ್ವಾಮಿ ಮಾಯ್ಕ ಎಂಬುದೇ
ಮಹಾ ಮಾಯ್ಕಯೆಂಬರು
ಕಟ್‌ದಲ್ಲೇ ಕರುಯಿಲ್ಲೆ
ಬಿತ್ತಿದಲ್ ಬೆಳಿಯಿಲ್ಲೆ
ಸ್ವಾಮಿ ಹಬ್ಬು ಮಾಡ್ಕಲೇ
ಎಂದೇ ತೋರಿ ಬಂದ್ವಲೇ
ಎಂದ್ ಆರೂ ಹೇಳುವಂಗೆ
ಮಂಜಯಣ್ಣನೆಂಬರು
ಅಪ್ಪಣಿಗಳನೇ ಕೇಳ್ಕಂಡೇ
ಮನೀಗ್ ತೆರುಳಿ ಬರುವರು
ಮನೀಗ್ ತೆರಳಿ ಬಂದೀಗ
ತಾಯಿ ಲಕ್ಷ್ಮಿಯ ಕರವಾರು
ತಮ್ಮ ತಮ್ಮನ ಕರವಾರು
ಕರ್ದ್ ಮಾತೆ ಆಡೂರು
ಒಕ್ಲಿಗ್ ಬಾಸಿ ಕೊಡುವರು
ಹೆದ್ರ್ ಬೇಡ್ ಒಕ್ಕಲೇ
ಮುಟ್ಟಿದ್ ಕರ್ಚ್ ಕೊಡ್ತೆನಾ
ಸ್ವಾಮಿ ಹಬ್ಬು ಮಾಡ್ಕಲೇ
ಎಂದೇ ಬಾಸಿ ಕೊಡ್ವಂಗೆ
ಮಂಜಯ್ಯಣ್ಣನೆಂಬರು
ಅಪ್ಪಣಿಗಳನೇ ಕೆಳ್ಕಂಡ್
ಮನೀಗ್ ತೆರುಳಿ ಬಪ್ಪರು

ಎಂದೇ ಯೋಚ್ನಿ ಮಾಡ್ಕಂಡೇ
ದನಿಗಳ್ ಮನಿಗೆ ಹೋಪಂಗೆ
ಏಳ್ ನೆಲೆಯ ಉಪ್ಪರ್ಗಿ
ಒರ್ಗ್ ಮಂಚದ ಮೇಲಾಲೇ
ಒರ್ಗ್ಗಿತ ಇಪ್ಪರು ಅವೇ
ಒಕ್ಕಲ ಬರುವಾ ಕಾಂಬರು
ಹೆರ್ಗ್ ಹರಟೇ ಬರುವರು
ಬಂಗಾರ್ ನಡು ಬಳ್ಕುತ್ತಾ
ಸರಿಗೀ ತೋಳೇ ಬೀಸುತ್ತಾ
ಉಂಗಿಲ್ ಬೆರಳೇ ಹೊಳ್ಸುತ್ತಾ
ವಂಟಿ ಕೆಮಿನೇ ಆಡ್ಸುತ್ತಾ
ಗತ್ತಿನ ರುಮಾಲಿ ಮೆರ್ಸುತ್ತಾ
ಹೆರ್ಗ್ ಹೆರಟೇ ಬಪ್ಪರು
ಮಂಜಯ್ಯಣ್ಣನೆಂಬರು
ಬಿದ್ದ್ಪಾದವ ಹಿಡಿದರು
ಎದ್ದೇ ಸರಣ ಮಾಡೂರು
ಎದ್ದೇ ಸರಣ ಮಾಡ್ವಂಗೆ
ಏನ್ ಬಂದೆ ಕೇಳ್ವಂಗೆ
ಏನ್ ಬಂದೆ ಕೇಂಬರು
ಏನೂ ನಾನ್ ಬರಲಿಲ್ಲೇ
ದಾತ್ರಿ ಒಂದ್ ಸಪನವು
ಕೆಟ್ಟ ಕೇಡಿನ ಸಪನವು
ಕೆಟ್ಟ ಕೇಡಿನ ಸಪನವು
ಕುರುವ ಮರ್ಸಿ ಕಟ್ಟಿದ್ದೋ
ಸೋಟದೊಳದ್ ಕಾಂಬಂಗೆ
ಒಲ್ದ್ ಸಂಗ್ತಿ ಕೇಂಬಂಗೆ
ದಡ್ಡ ದಡ್ಡ ದೇವ್ರ ಇರೋದ
ದಡ್ಡ ಕಣ್ ಕಟ್ಟಲೇ
ಸ್ವಾಮಿ ಹಬ್ಬು ಮಾಡ್ಕಲೇ
ಎಂದೇ ಕಂಡ್ ಬಂದ್ವಲೇ

ತಾಯಿ ಲಕ್ಷ್ಮಿಯ ಕರವಾರು
ತಮ್ಮ್ ತಮ್ಮನ ಕರವಾರು
ಕರ್ದ್ ಮಾತೇ ಆಡೂರು
ಏನೆಂದ್ ಮಾತೆ ಆಡೂರು
ಸ್ವಾಮಿ ಹಬ್ಬೊ ಮಾಡ್ಕಲೆ
ಎಂದ್ ಯೋಚ್ನಿ ಮಾಡ್ಕಂಡೆ
ಬುದ್‌ವೂಂತ್ರ್ನ ಕರಸೂರು
ಕರ್ದ್ ಮಾತೇ ಆಡೂರು
ಹಳಿ ಮಣ್ಣ್ ತಗಸೂರು
ಹೊಸ ಮಣ್ಣ್ ಇಡ್ಸೂರು
ಮಣ್ಣ್ ಮೂರ್ತೊ ಮಾಡ್ಕಂಡೇ
ಜೋಯ್ಸ್ರ ಮನೀಗ್ ಹೋಪರು
ಜೋಯ್ಸ್ ಭಟ್ಟರೆಂಬರು
ಏನ್ ಬಂದೆ ಕೇಂಬರು
ಏನೂ ನಾನ್ ಬರ್ಲಿಲ್ಲೆ
ಎಂತೂ ನಾನ್ ಬರ್ಲಿಲ್ಲೆ
ಸ್ವಾಮಿ ಹಬ್ಬೊ ಮಾಡ್ತಿ ನಾ
ದಿನುಗಳನ್ನೆ ಕೇಣ್ಕಲೇ
ಎಂದೇ ಯೋಚ್ನಿ ಮಾಡ್ಕಂಡ್
ತಾವಿದ್ದಲ್ಲೀಗ್ ಬಂದಿದಿ
ಎಂದ್ ಆರೂ ಹೇಳ್ವಂಗ್
ಜೋಯ್ಸ್ರ ಭಟ್ಟರೆಂಬರು
ಗಳ್ಗಿ ಯೋಚ್ನಿ ಮಾಡೂರು
ಗಣತೀ ಯೋಚ್ನಿ ಮಾಡ್ವಂಗೆ
ಬಪ್ಪ್ ಪುಣ್ಯ ತಿಂಗ್ಳಂಗೇ
ವಾರ್ದ್ ಒಳ್ಳಿ ದಿನದಂಗೇ
ಸ್ವಾಮಿ ಹಬ್ಬೊ ಮಾಡ್ಕಲೇ
ಎಂದೇ ತೋರಿ ಬಂದ್ವಲೇ
ಮಂಜಯ್ಯಣ್ಣನೆಂಬರು
ಅಪ್ಪಣಿಗಳನ್ನೇ ಕೇಳ್ಕಂಡ್

ಎಂದ್ ಆರೂ ಹೇಳ್ವಂಗೆ
ತಾಯಿ ಲಕ್ಷ್ಮಿಯು ಕರವಾರು
ತಮ್ಮ್ ತಮ್ಮನ ಕರವಾರು
ಬುದ್ದ್‌ವೊಂತ್ರ್ನ ಕರಸೂರು
ಗುರುಡಾಸ್ರನ್ನ ಕರಸೂರು
ಹೋಬ್ಳಿ ಮಾಗ್ಣಿ ಕರಸೂರು
ಕಂಚಿನ್ ಗಿಂಡ್ಗಿ ಹಿಡ್ಕಂಡೇ
ಬಾಗೀರತಿನೇ ತೆಕ್ಕಂಡೇ
ಸ್ವಾಮಿ ರುಂದನಕೆ ಬಪ್ಪರು
ನೀಲಿನಾಮೆ ತೇವರು
ಕಳ್ಸಕ್ ನಾವೋ ಇಡುವರು
ತಾವ್ ನಾಮೋ ಇಟ್ಕಂಡೇ
ಸ್ವಾಮಿ ಕಳ್ಸ ಇಡುವರು
ಕಳ್ಸಕ್ ಹೂಗ ಇಡುವರು
ಮ್ಯಾಲ್ ಹೂಗ ಇಡುವರು
ಮ್ಯಾಲ್ ಹೂಗ ಇಟ್ಕಂಡೇ
ಸ್ವಾಮಿ ಮುಡ್ಪ ಕಟ್ಟೂರು
ಎಪ್ಪಮುಡ್ಪ ಕ್ಟೂರು
ಇಕ್ಕೇರಿ ವರನಾಲೇ
ಅತಿಲೇಸು ಎರಿದ್ರಾಲೇ
ಮಡಹಾಂಗ್ಲ ಬಿಂಜವು
ಅತಿ ಪ್ರೀರ್ತಿಯಿಂದಲೇ
ಸ್ವಾಮಿ ಪೂಜೋ ಮಾಡ್ಕಂಡೇ
ಸ್ವಾಮಿ ಬರುವ ಕಾಂಬರು
ಅರುಸಿನ ಬರುವ ಕಂಡಾಂಗೆ
ಸ್ವಾಮಿ ಬರುವ ಕಂಡೀದಿ
ನೀರ್ ಬರುವ ಕಂಡಾಂಗೆ
ಸ್ವಾಮಿ ಬರುವ ಕಾಂಬಂಗ್
ದಿಸ್ಟಿವಂತ ಒಡಿಯನು
ಮಂದುರ ಗಿರಿಯ ಮೇಲಾಲೇ

ಮನೀಗ್ ತೆರುಳಿ ಬಪ್ಪರು
ಬಾಳಿ ಮಾಡಿಗೆ ಬಪ್ಪರು
ಬಾಳಿ ಮಾಡಿಗೆ ಬರುವಂಗೆ
ಮಂಜಯಣ್ಣನೆಂಬರು
ಸ್ವಾಮಿ ಬರುವ ಕಂಡ್ಕಂಡೇ
ಮಂಜಯ್ಯಣ್ಣ ತಂಗಿಯು
ನಾರೇರ್ನೆಲ್ಲ ಕೂಡ್ಕಂಡೇ
ಗಂಗಿ ಸಾನೋ ಮಾಡ್ಕಂಡೇ
ಮಿಂದ್ ಮಡಿನೇ ಉಂಟ್ಕಂಡೇ
ಕಣ್ಣಿಗ್ ಕಪ್ಪ ಹಚ್ಕಂಡೇ
ನೆಸಲೀಗ್ ತಿಲ್ಕೊ ಇಟ್ಕಂಡೇ
ಮುಡಿ ಬಾಜಿ ಕಟ್ಟಂಡೇ
ಮುಡೀಗ್ ಹೂಗ ಮುಡ್ಕಂಡೇ
ಚಿನ್ನದ್ ಕೊಡ್ಪಾನದಲ್ಲಾಲೇ
ಬೆಳ್ಳಿ ಕೊಡ್ಪಾನದಲ್ಲಾಲೇ
ಪಾದಕ್ ಪನ್ನೀರ್ ಬಿಡುವರು
ಪಾವಡ್ಡಗೆ ಗೆಡ್ಲೂರು
ಪಾದಕ್ ಸಣ ಮಾಡೂರು
ಮಂಜಯ್ಯಣ್ಣನೆಂಬರು
ಮಂಗುಲಾರ್ತಿ ಮಾಡೂರು
ದೀಪದ ಆರ್ತಿ ಮಾಡೂರು
ದೂಪದ ಆರ್ತಿ ಮಾಡೂರು
ಹಿಟ್ಟಿನ ಆರ್ತಿ ಮಾಡೂರು
ಪಂಚಾರ್ತಿ ಮಾಡೂರು
ಪಂಚಾರ್ತಿ ಮಾಡ್ಕಂಡೇ
ಪಾದಕ್ ಸರಣ ಮಾಡೂರು
ಒಂದು ತೆಳಿಯೆ ಎಂದು
ಒಂದೂ ಅರಿಯೆ ಎಂಬರು
ಒಂದು ಅರಿಯನೆಂಬಂಗೆ
ಹತ್ತವ್ತಾರ್ದ ಸ್ವಾಮಿಯು

ದಿಸ್ವಿ ಇಟ್ವೆ ಕಾಂಬಂಗೆ
ಇಕ್ಕೇರಿ ರಾಜ್ಯವು
ಮಾ ಬೆಳುಕಾಯಿತು
ಗೋಯಿಂದ್ರಾಜ ಸ್ವಾಮಿಯು
ಕೆಳಹಾದಿ ಕೆಸರಂದೇದ
ಮ್ಯಾಲ್ ಹಾದಿ ಬಿಸಲಂದೇ
ಗರ್ಡ್ವಾನೋ ಏರ್ಕಂಡೇ
ಅಂಬುರ ಮಾರ್ಗದಿ ಬಪ್ಪರು
ಹೊನ್ನ್ನ ಮನೀಯ ಬಿಡುವರು
ಕಟ್ಟದಲ್ಲೇ ಕರುವಾಯ್ತ್
ಬಿತ್ತದಲ್ಲೇ ಬೆಳಿಯಾಯ್ತ್
ಒಂದಕ ನೂರ್ ತೋರೀತು
ಗೋಯಿಂದ್ರಾಜ ಸ್ವಾಮಿಯು
ಹುಲ್ಲು ಮನಿಯ ಬಿಡುವರು
ಹೊನ್ನ ಮನಿಗೆ ತೆರಳೂರು
ಬಾಳ ಸಂತೋಷ ಪಡುವರು
ಶ್ರೀ ರಾಮ ರಾಮ ಗೋಯಿಂದಾನಿ ಗೋಯಿಂದೋ ಗೋಯಿಂದಾ

ಮತ್ಸ್ಯವತಾರದ ಒಡಿಯನು
ಭಕ್ತನು ಮಾಡೂ ಭಕ್ತಿಗೆ
ಬಾಳ ಸಂತೋಷ ಪಡುವರು
ಭಾಗ್ಯ ಲಕ್ಸ್ಮಿಯ ಕರವರು
ಬಾಗ್ಲಾಗೆ ನಿಲ್ಲೂರು
ಜಯ್ ಲಕ್ಸ್ಮಿಯ ಕರವರು
ನಡಿಸೊಳ್ಗೆ ನಿಲ್ಲೂರು
ಅಸ್ವಬಾಗ್ಯೊ ಕೊರ್ವರು
ವಾಲಿ ಬಾಗ್ಯೊ ಕೊರ್ವರು

## ಬ್ಯಾಂಟಿ ಸಂಧಿ

ಸ್ವಾಮಿಗಿಂದು ಬ್ಯಾಂಟಿಯಾ ಹೌಂದೇರಾಯ್ನ ಬ್ಯಾಂಟಿಯಾ
ಭೂಮಿಗಿಂದು ಬ್ಯಾಂಟಿಯಾ
ನಾವೂ ಮಾಡು ಬ್ಯಾಂಟಿಯಾ
ಸ್ವಾಮಿ ರುಂದನಕ್ ಬ್ಯಾಂಟಿಯಾ
ಮ್ಯಾಲ್ಗಿರಿಂಗ್ ಬ್ಯಾಂಟಿಯಾ
ಬಂಗಾರ್ಗಿರಿಂಗ್ ಬ್ಯಾಂಟಿಯಾ
ಮುಂದುರಗಿರಿಗ್ ಬ್ಯಾಂಟಿಯಾ
ಗಂಗ್ಯಮ್ನರಿಗ್ ಬ್ಯಾಂಟಿಯಾ
ಹರೂ ಜಲದಿಗೆ ಬ್ಯಾಂಟಿಯಾ
ಉರೂ ಜೋತೀಗೆ ಬ್ಯಾಂಟಿಯಾ
ಚಂದಣ ಮೂರ್ತಿಗೆ ಬ್ಯಾಂಟಿಯಾ

ಅಗ್ನ ದೇವ್ರಿಗೆ ಬ್ಯಾಂಟಿಯಾ
ನಕುಲ ದೇವ್ರಿಗೆ ಬ್ಯಾಂಟಿಯಾ
ಕಿಷ್ಣ ವ್ದಾರಕೆ ಬ್ಯಾಂಟಿಯಾ
ಉಡ್ವಿ ಕಿಷ್ಣಗೆ ಬ್ಯಾಂಟಿಯಾ
ನೀಲ ಕಿಷ್ಣಗೆ ಬ್ಯಾಂಟಿಯಾ
ಅಸ್ಟಮ ಸ್ತ್ರೀಯರಿಗೆ ಬ್ಯಾಂಟಿಯಾ
ಗೋಪಿಕಾ ಸ್ತ್ರೀಯರಿಗೆ ಬ್ಯಾಂಟಿಯಾ
ಅಸ್ಟಮಠಕೆ ಬ್ಯಾಂಟಿಯಾ
ಸರುವ ದೇವ್ರಿಗ್ ಬ್ಯಾಂಟಿಯಾ

ಚಲುವೆ ರಂಗಗೆ ಬ್ಯಾಂಟಿಯಾ
ರಾಮವತಾರಕೆ ಬ್ಯಾಂಟಿಯಾ
ರಾಮಚಂದ್ರಗೆ ಬ್ಯಾಂಟಿಯಾ
ಲಕ್ಷ್ಮಣ ದೇವ್ರಿಗೆ ಬ್ಯಾಂಟಿಯಾ
ಮುಕ್ಯಪ್ರಾಣಗೆ ಬ್ಯಾಂಟಿಯಾ
ಗಣ್ಪತೀಗೆ ಬ್ಯಾಂಟಿಯಾ
ಮಾಗಣ್ಣತಿಗೆ ಬ್ಯಾಂಟಿಯಾ
ಮಂಜುನಾತಗೆ ಬ್ಯಾಂಟಿಯಾ
ದಿಕ್ ದಿಕ್ಕಿಗೆ ಬ್ಯಾಂಟಿಯಾ
ದಸದಿಕ್ಕಿಗೆ ಬ್ಯಾಂಟಿಯಾ
ಮೆಟ್ಟಿದ ಭೂಮಿಗೆ ಬ್ಯಾಂಟಿಯಾ
ಜಾಗ್ದ್ ಕರ್ತುಗೆ ಬ್ಯಾಂಟಿಯಾ
ಮುನಿಗಳಿಗೆಲ್ಲ ಬ್ಯಾಂಟಿಯಾ
ಯಾವ್ ಮುನಿಗೆ ಬ್ಯಾಂಟಿಯಾ
ನಾರದ ಮುನಿಗೆ ಬ್ಯಾಂಟಿಯಾ
ಇಸ್ವಾಮಿತ್ರನಿಗೆ ಬ್ಯಾಂಟಿಯಾ
ಅಗಸ್ಯ ಮುನಿಗೆ ಬ್ಯಾಂಟಿಯಾ
ಗೌತುಮ ಮುನಿಗೆ ಬ್ಯಾಂಟಿಯಾ
ಕಣ್ಣು ಮುನಿಗೆ ಬ್ಯಾಂಟಿಯಾ
ಮನು ಮುನಿಗೆ ಬ್ಯಾಂಟಿಯಾ
ಜಮದಗ್ನೀಗ್ ಬ್ಯಾಂಟಿಯಾ
ಅಂಗೀರುಸಗೆ ಬ್ಯಾಂಟಿಯಾ
ಮುನಿಗಳಿಗೆಲ್ಲ ಬ್ಯಾಂಟಿಯಾ
ಸೂರ್ ದೇವ್ರಿಗ್ ಬ್ಯಾಂಟಿಯಾ
ಚಂದ್ರದೇವ್ರಿಗ್ ಬ್ಯಾಂಟಿಯಾ
ಇಂದ್ರ ದೇವ್ರಿಗ್ ಬ್ಯಾಂಟಿಯಾ
ಮೂರ್ಚ್ನೆ ಕಟ್ಟಿ ಬೀಳೂರು
ಮನೀಗ್ ತೆರುಳಿ ಬಪ್ಪರು
ಮನೀಗ್ ತೆರುಳಿ ಬಂದಾಗ
ತಾಯಿ ಲಕ್ಷ್ಮಿ ಕರವಾರು

ಮಂಜಯ್ಯಣ್ಣೆನೆಂಬರು
ಭಕ್ತಿವಂತ್ರ ಮಗ್ನಾಲೇ
ಸ್ವಾಮಿ ಭಕ್ತಿ ಮಾಡ್ಕಂಡೇ
ಮನಿಮುಂದಿನ ಮಗ್ಯೆದ್ದಿ
ಹೂಡಿ ದೂಳೀ ಮಾಡೂರು
ಹೂಡಿ ದೂಳೀ ಮಾಡ್ಕಂಡೇ
ಸ್ವಾಮಿ ದ್ಯಾನು ಮಾಡ್ಕಂಡೇ
ಭೂಮಿಗ ನೆಲ್ಲ ಬಿಕ್ಕೂರು
ಯಾವ್ ನೆಲ್ ಬಿಕ್ಕೂರು
ದೇವ್ ಸಾಲಿ ನೆಲ್ಲಲೇ
ಅದ್ರಿಂದೆಕ್ಕೆ ಬಿಕ್ಕೂರು
ಬೀರನ ಸಾಲಿ ಬೆಲ್ಲಲೇ
ಅದ್ರಿಂದೆಕ್ಕೆ ಬಿಕ್ಕೂರು
ಕುಂಕುಮ ಸಲಿ ಬೆಲ್ಲಲೇ
ಅದ್ರಿಂದೆಕ್ಕೆ ಬಿಕ್ಕೂರು
ಹಾಲುಹಳ್ಗ ನೆಲ್ಲಲೇ
ಬೀಂಜು ಮೂರ್ತೋ ಮಾಡ್ಕಂಡೇ
ಗ್ಯದ್ದಿ ನೀರ ಕಟ್ಟೂರು
ಮನೀಗ್ ತೆರುಳಿ ಬಪ್ಪರು
ಮನೀಗ್ ತೆರುಳಿ ಬಂದೀಗ
ಮೂರ ದಿನ್ದ ಮ್ಯಾಲಾಲೇ
ರನ್ನದ್ ಕೋಲ್ ಕೈಯಲ್ಲೇ
ಗ್ಯದ್ದೀದ್ದಲ್ಲೀಗ್ ಬಪ್ಪರು
ಪೈರುಗಳನೇ ಕಾಂಬಂಗೆ
ಕಾಡ ಮಿಗ ಎಂಬುದೇ
ಹೂಡಿ ದೂಳ್ ಮಾಡ್ದಂಗೆ
ಎಂದ್ ಆರೂ ಹೇಳ್ವಂಗೆ
ಜಾಗು ಕೊಟ್ಟ್ ದನಿಗಳು
ಬಕ್ಲೀಗ್ ಬಾಸಿ ಕೊಡುವರು
ಏನ್ ಬಾಸಿ ಕೊಡುವರು

ತಮ್ಮ ತಮ್ಮನ ಕರವಾರು
ಕರ್ದೇ ಮಾತ್ ಆಡೂರು
ಏನ್ ಮಾತ್ ಆಡೂರು
ನಾವ್ ಮಾಡ್ದ್ ಪೈರೆಲ್ಲಾ
ಕಾನ್ ಮಿಗ್ ಎಂಬುದೇ
ಹೂಡಿ ದೂಳೇ ಮಾಡ್ತ್ವಲೇ
ನಾವ್ ರಾಜ್ಯೋ ಬಿಡ್ಕಲೇ
ಎಂದ ಯೋಚ್ನಿ ಮಾಡ್ಕಂಡೇ
ದನಿಗಳ್ ಮನೀಗ್ ಹೋಪರು
ದನಿಗಳ್ ಮನೀಗ್ ಹೋಪಂಗೆ
ಜಾಗು ಕೊಟ್ಟ ದನಿಗಳು
ಏಳ್ ನೆಲಿಯ ಉಪ್ಪರ್ಗಿ
ಬರ್‍ಸ ಮಂಚದ್ ಮ್ಯಾಲಾಲೇ
ಒರ್‍ಸುತಪಿಪ್ಪ್ರ ಅವ್ರಲೇ
ಒಕ್ಲ್ ಬರುವ ಕಾಂಬರು
ಹೆರ್‍ಗ್ಗಿ ಹರಟೇ ಬಪ್ಪರು
ಬಂಗಾರ್ ನಡು ಬಳ್ಕಸ್ತಾ
ಸರಿಗಿ ತೋಳ ಬೀಳುತ್ತಾ
ಉಂಗಿಲ್ ಬೆರುಳೇ ಹೊಳ್ಸಿತಾ
ಪಂಟಿ ಕೆಮಿನೇ ಅಡ್ಸತಾ
ಗತ್ತೀನ್ ರುಮಾಲಿ ಮೆರ್‍ಸತಾ
ಹೆರ್‍ಗ್ಗಿ ಹೆರ್ಗೇ ಬಪ್ಪರು
ಹೆರ್‍ಗ್ಗಿ ಹರ್ಗೇ ಬಪ್ಪಂಗೇ
ಮಂಜಯ್ಯಣ್ಣನೆಂಬರು
ಬಿದ್ದ್ ಪಾದೋ ಹಿಡ್ವರು
ಎದ್ದೇ ಸರುಣ ಮಾಡೂರು
ಎದ್ದೇ ಸರುಣ ಮಾಡ್ವಂಗೆ
ಏನ್ ಬಂದೆ ಕೇಂಬರು
ಏನ್ ಬಂದೇ ಕೇಂಬಂಗೆ
ಏನುನಾನ್ ಬರ್‍ಲಿಲ್ಲೆ

ಈ ಕಾಲ್ದ್ ಬ್ಯಾಸಾಯ
ನಿಂಗ್ ಮಾಫಿ ಬಿಟ್ಟ್ ಬಡ್ತಿ
ಮಿಗ್ನ್ ಬ್ಯಾಂಟಿ ಮಾಡ್ಸಿ
ಎಂದೇ ಬಾಸಿ ಕೊಡುವರು
ಮನಿ ಶಾನ್‌ಬಾ ಕರ್‍ಸೂರು
ವಾಲಿ ಕಟ್ಟಣಿ ತರ್‍ಸೂರು
ಹೋಬ್ಳಿಗೆ ವಾಲಿ ಬರ್‍ಸೂರು
ಮಾಗ್ಣೀಗ್ ವಾಲಿ ಬರ್‍ಸೂರು
ಬಾರ್ಕೂರ್ ಮಾಗ್ಣೀಗ್ ಬರ್‍ಸೂರು
ಆದ್ ದಡ್ ಮಾಗ್ಣಿಯು
ನಿಮ್ಮ ರಾಜ್ಯೋದೊಳ್ಗೆಲ್ಲ
ಯಾಸೊ ಬಲ್ಲ ದಾಸರು
ತಿಂತಿ ಕೋವಿಯೇ
ತಿಂತಿ ಜನುವಾಲೇ
ಗುಜ್ಜ್ ಗೋಳಿ ಕಟ್ಟಿಗೆ
ಕೂಡಿ ಸಭಿಯ ಮಾಡ್ಕಲೇ
ಶೀಗ್ರವಾಗಿ ಬರುಮಾಡಿ
ಬಿಳುಗಿನ ಬೆಳ್ಳಿ ಮಾಡ್ವಂಗೆ
ಜಾಮ್ಮ್ ಕೋಳಿ ಕೂಗ್ವಂಗೆ
ನವೀಲ್ ಸರವ ಗೆಯ್ವಂಗೇ
ಜಾಜಿ ಮಿಟ್ಟಿ ಯರಳ್ವಂಗೇ
ಕೂಡಿ ಸಭಿಯ ಮಾಡ್ಕಲೇ
ಎಂದೇ ವಾಲಿ ಬರುವರು
ಮತ್ತೋಂದ್ವಾಲಿ ಬರುವರು
ಒಡಿಯರ ಹೋಬ್ಳಿಯಲೇ
ಅದ್ ದಡ್ಡ ಹೋಬ್ಳಿಯಲೇ
ನಿಮ್ಮ್ ರಾಜ್ಯೋದೊಳ್ಗೆಲ್ಲ
ಯಾಸೋ ಬಲ್ಲ ದಾಸರು
ತಿಂತಿ ಜನುವಾಲೇ
ತಿಂತಿ ನಾಯಲೇ

ಎಂತೂ ನಾನ್ ಬರ್ಲಿಲ್ಲೆ
ನಾವ್ ಮಾಡ್ದ್ ಪೈರ್ರೆಲ್ಲಾ
ಕಾನ್ ಮಿಗ್ ಎಂಬುದೇ
ಹೂಡಿ ದೂಳ್ ಮಾಡ್ತ್ವಲೇ
ನಾವ್ ರಾಜ್ಯೋ ಬಿಡ್ತ್ವಲೇ
ಪರಮಾಗ್ಣಿ ಸೇರ್ತ್ವಲೇ
ನಯೀಲ್ ಸರುವ ಗೆಯ್ವಂಗೆ
ಜಾಜಿ ಮಿಟ್ಟಿಯರಸ್ವಂಗೆ
ಕೂಡಿ ಸಭಿಯ ಮಾಡ್ಕಲೇ
ಎಂದೇ ವಾಲಿ ಬರ್ರೂರು
ವಾಲಿ ತಾಳೇ ಬರಕಂಡೆ
ಮನೀಗ್ ತೆರುಳಿ ಬಪ್ಪರು
ಮನೀಗ್ ತೆರುಳಿ ಬಂದೀಗ
ತಾಯಿ ಲಕ್ಷ್ಮೀಯ ಕರುವಾರು
ತಮ್ಮ್ ತಮ್ಮ್ ಕರುವಾರು
ಕರ್ದ್ ಮಾತೇ ಆಡೂರು
ಏನ್ ಮಾತೇ ಆಡೂರು
ಬದ್ಕ್ ಬಾಳ ಜ್ವಾಕ್ಯಾಲೇ
ಮಿಗ್ನ್ ಬ್ಯಾಂಟೀಗ್ ಹೋತಿ ನಾ
ಎಂದೇ ಆರೂ ಹೇಳ್ವಂಗೆ
ಮಡುದಿ ಸಿರಿದೇವಿಯು
ಕಣ್ಣಗ್ ನೀರೇ ಸುರುತ್ತಾ
ಬಾಳಯನ್ನವೇ ಪಡುವರು
ಮಂಜಯ್ಯಣ್ಣನೆಂಬರು
ಮುದ್ರಿಯುಂಗಿಲು ಒಯ್ವರು
ಮಡುದಿ ಕೈಲೆ ಕೊಡುವರು
ಜಾನ ಜಪ ಮಾಡ್ಬೇಡ
ಮಿಗ್ನ್ ಬ್ಯಾಂಟಿದ್ ಹೋತಿ ನಾ
ಎಂದೇ ಜಾಸ್ತಿ ಕೊಡ್ಗಂಡೇ
ರೊಟ್ಟಿ ಬುತ್ತಿತ್ತ ಕಟ್ಗಂಡೇ

ತಿಂತಿ ಕೋವಿಯಲೇ
ಗುಜ್ಜ್‌ಗೋಳಿ ಕಟ್ಟಿಗೆ
ಕೂಡಿ ಸಭಿಯ ಮಾಡ್ಕಲೇ
ಸೀಗ್ರವಾಗಿ ಬರುಮಾಡಿ
ಬೆಳುಗಿನ ಬೆಳ್ಳಿ ಮೂಡ್ವಂಗೆ
ಜಾಮ್ದ್ ಕೋಳಿ ಕೂಗ್ವಂಗೆ
ಚಿನ್ನ ತಿಂಬ್ ಬೆಳಿಯನ್
ನೆತ್ರ್ ಕುಡೂ ನೀಲನ
ಮಾಸು ತಿಂಬ್ ಬಂಡನ
ಕಾಲ್ ತಿಂಬ್ ಕರಿಯನ
ನೂರೊಂದ್ ನಾಯೇ ಕರ್ಕಂಡೇ
ನಾಯೀಗ್ ನೇಣ ಸರ್ಕಂಡೇ
ಒಂದ್ ಹೊಲ್ನ ಹೋಗ್ವಂಗ್
ಕೇಜಿ ಹೊಲ್ನ ನಿಲ್ಸ್ಗಂಡೇ
ಕಡೀಗ್ ಕಡೀಗ್ ನಿಲ್ಸ್ಗಂಡೇ
ತಾಂವ್ ಹೊಲ್ನ ಹೊಕ್ಕರು
ಹಂದಿ ಹುಲಿಯೇ ಎದ್ದವು
ಕರಡಿ ಕಟಾರಿ ಎದ್ದವು
ಸಿಂಗಿ ಸಾರ್ದುಲ ಏಳ್ವಂಗೆ
ಸ್ವಾಮಿ ದ್ಯಾನು ಮಾಡ್ಕಂಡೇ
ಮಿಗ್ನೀಗ್ ಬಾಸಿ ಕೊಡುವರು
ಏನೆಂದ್ ಬಾಸಿ ಕೊಡುವರು
ಗಂಡ್ ಜೀವಿಯಾದರೆ
ಎದೆರಾಯಿ ಬಾರಲೇ
ಹೆಣ್ ಜೀವಿಯಾದರೆ
ವಾರಿಯಾಯಿ ಹೋಗಲೇ
ಎಂದೇ ಬಾಸಿ ಕೊಡುವಂದೇ
ಗಂಡ್ ಜೀವಿಯೆಂಬುದೇ
ಎದೆರಾಯೇ ಬಪ್ಪುದು
ಸ್ವಾಮಿದ್ಯಾನು ಮಾಡ್ಕಂಡೇ

ಅಲ್ಲಿಂದ್ ತೆರುಳಿ ಹೋಪರು
ಗುಜ್ಜ್‌ಗೋಳಿ ಕಟ್ಟಿಗೆ
ಕೂಡಿ ಸಭಿಯ ಮಾಡ್ಕಂಡೇ
ನಾಯಿ ಗಣತೀ ಮಾಡೂರು
ಒಂಭೈನೂರ ಒಂಭತ್ತೇ
ಜನ್‌ಗಳ ಗಣತೀ ಮಾಡೂರು
ಒಂಭೈನೂರ ಒಂಭತ್ತೇ
ಕೋವಿ ಗಣತಿ ಮಾಡ್ಕಂಡೇ
ರೊಟ್ಟಿಗ್ ತುಪ್ಪ ಹಚ್ಚೂರು
ನಾಯ್ನೆಲ್ಲ ಕರುವರು
ಯಾವ ನಾಯ್ನ ಕರುವರು
ಕ್ವಾಂಟಿ ಹೊಕ್ಕೂ ಪೋಟಿನ
ಆಗ್ನ್ ಹಾಗೂ ವಿಗಳನ
ಮಂತಿ ತಿಂಬ್ ಪುಂಡನ
ಕೆಮೀನ್ ತಿಂಬ್ ಕೆಂದನ
ಕಣ್ಣೀತಿಂಬ್ ಕರಿಯನ
ಮತ್ತೊಂದ್ ಹಾರೊ ಎಂಬುದೇ
ಎಯ್ಡ್ನ ಈಡೀಗ್ ಕೊಡೂರು
ಬಿದ್ದ್ ಮಗ್ಲ್ ಎಂಬುದೇ
ಜಾಗ್ದ್ ದೀನಗ್ ಕೊಡೂರು
ಉಳ್ದ್ ಗ್ಯಂಡಿಯೆಂಬುದೇ
ಬಂಟ ಬೈರವನ ಪೂಜಿಗೆ

ರಂಜಕ ಬೆಂಕಿ ಹಚ್ಚೂರು
ಹಂದೀಗ್ ಗುಂಡ ಹೊಡುವರು
ಹಕ್ಕಿ ಹಿಡ್ದ್ ಬೀಳೂರು
ಮಿಗ್ನ್ ಹಕ್ಕೀ ಕಾಂಬರು
ಮಿಗ್ನ್ ಹಕ್ಕೀ ಕಾಂಬಂಗೆ
ಎಳೆ ಕೋಲ ಉದ್ದವು
ಏಳ್ ಕೋಲ್ ಗಾತವು
ಮಿಗ್ನ್ ಹಕ್ಕೀ ಕಂಡ್ಕಂಡೇ
ಮಿಗ್ನ್ ತೋಳ ಮುರ್ವರು
ಬಲ್ದ್ ಹಾರೊ ಎಂಬುದೇ
ಬಾರ್ಕೂರು ಮಾಗ್ಣೀಗ್ ಕೊಡುವರು
ಎಡ್ಮ್ ಹಾರೊ ಎಂಬುದೇ
ಒಡಿಯರ್ ಹೋಬ್ಳೀಗ್ ಕೊಡೂರು
ಹಿಂದೀನ್ ಹಾರೊ ಎಂಬುದೇ
ಮರ್ದೆ ಈಡೀಗ್ ಕೊಡರೂರು

ಶ್ರೀ ರಾಮ ರಾಮ ಗೋಯಿಂದಾನಿ ಗೋಯಿಂದೋ ಗೋಯಿಂದಾ

# ಕ್ವಾಡಂಗಿ ಸಂಧಿ

ಸ್ವಾಮಿಗಿಂದ್ ಕ್ವಾಡಂಗಿ ಹೌಂದೇರಾಯ್ನ ಕ್ವಾಡಂಗಿ
ಭೂಮಿಗಿಂದು ಕ್ವಾಡಂಗಿ
ರಾಮನ ಬಂಟ ಕ್ವಾಡಂಗಿ
ಮ್ಯಾಲ್ಗಿರಿಗೆ ಕ್ವಾಡಂಗಿ
ಮಂದರಗಿರಿಗೆ ಕ್ವಾಡಂಗಿ
ಬಂಗಾರಗಿರಿಗೆ ಕ್ವಾಡಂಗಿ
ಹೊನ್ನ ಕಳಸಕೆ ಕ್ವಾಡಂಗಿ
ಅಪಿಲ ತೀರ್ಥಿಕೆ ಕ್ವಾಡಂಗಿ
ಸಕುಲ ತೀರ್ಥಕೆ ಕ್ವಾಡಂಗಿ
ಕೋಗಿ ತೀರ್ಥಕೆ ಕ್ವಾಡಂಗಿ
ತೀರ್ಥ ಯಾತ್ರೆಗೆ ಕ್ವಾಡಂಗಿ
ಅಮ್ನರಿಗೆ ಕ್ವಾಡಂಗಿ
ಗಂಗಮ್ನರಿಗೆ ಕ್ವಾಡಂಗಿ
ಗೌರಮ್ನರಿಗೆ ಕ್ವಾಡಂಗಿ
ದ್ರುಪತಾ ದೇಯಿಗೆ ಕ್ವಾಡಂಗಿ
ಲಕ್ಸ್ಮಿದೇಯಿಗೆ ಕ್ವಾಡಂಗಿ
ಸೀತಾ ದೇಯಿಗೆ ಕ್ವಾಡಂಗಿ
ದರುಮರಾಯ್ರಿಗೆ ಕ್ವಾಡಂಗಿ
ಅರ್ದುನ ದೇವ್ರಿಗೆ ಕ್ವಾಡಂಗಿ
ಮುನಿಗಳಿಗೆಲ್ಲ ಕ್ವಾಡಂಗಿ
ಯಾವ್ ಮುನಿಗೆ ಕ್ವಾಡಂಗಿ
ನಾರ್ದ ಮುನಿಗೆ ಕ್ವಾಡಂಗಿ
ವಿಶ್ವಾಮಿತ್ರಗೆ ಕ್ವಾಡಂಗಿ
ಅಗಸ್ಯ ಮುನಿಗೆ ಕ್ವಾಡಂಗಿ
ಕಣ್ಣು ಮುನಿಗೆ ಕ್ವಾಡಂಗಿ
ಮನು ಮುನಿಗೆ ಕ್ವಾಡಂಗಿ
ಜಮದಗ್ನಿಗೆ ಕ್ವಾಡಂಗಿ
ಅಂಗೀರಸಗೆ ಕ್ವಾಡಂಗಿ

ಅಗ್ನಿ ದೇವ್ರಿಗೆ ಕ್ವಾಡಂಗಿ
ಕಿಷ್ಣ ಮಾರಕೆ ಕ್ವಾಡಂಗಿ
ಉಡ್ಪಿ ಕಿಷ್ಣಗೆ ಕ್ವಾಡಂಗಿ
ನೀಲ ಕಿಷ್ಣಗೆ ಕ್ವಾಡಂಗಿ
ಅಸ್ಟಮ ಸ್ತ್ರೀಯರಿಗೆ ಕ್ವಾಡಂಗಿ
ಗೋಪಿಕಾ ಸ್ತ್ರೀಯರಿಗೆ ಕ್ವಾಡಂಗಿ
ಅಸ್ಟ್ ಮಟ್ಕೆ ಕ್ವಾಡಂಗಿ
ಸರು ದೇವ್ರಿಗೆ ಕ್ವಾಡಂಗಿ
ಕ್ವಾಡಂಗಿ ರಾಯನೆಂಬಾನೇ
ಎಲ್ಲೂ ಇಪ್ಪೆ ಕ್ವಾಡಂಗಿ
ಯಾರ್ ಬಲ್ದಲಿರುತ್ತಿದ್ದೇ
ಯಾರ್ ಮಗ್ ಕ್ವಾಡಂಗಿ
ವಾಯುತನಯ ಕ್ವಾಡಂಗಿ
ಅಂಜನಿದೇಯಿಯ ಮಗ್ನಾಲೇ
ಎಪ್ಪತ್ತೇಳ್ ಕೋಟಿ ಕಪಿಗಳಿಗೆ
ಅತಿಧೀರ ಬಂಟ್ನಾಯಿ
ರಾಮ ಬಲ್ದಗಿರುತಿದ್ದೇ
ರಾಮ ಬಲ್ದಗಿರುವಂದೇ
ಏನ್ ಯೋಚ್ನೆ ಮಾಡ್ತಿದ್ದೆ
ಇಕ್ಕೇರಿಯ ಸೀಮ್ಯಂಗ್
ಸ್ವಾಮಿ ಬಕುತರ ಮನ್ಯಂಗೆ
ಸ್ವಾಮಿ ಹಬ್ಬು ಮಾಡೂರು
ಅಲ್ಲಿಗಾಯಿ ಹೋಯ್ಕಲೇ
ನಮ್ಗ್ ತಿಂಡಿ ಕೊಡ್ತ್ರಲೇ
ಎಂದೇ ಯೋಚ್ನೆ ಮಾಡ್ಕಂಡೇ
ಗಿರಿಯ ಪುರವ ಬಿಟ್ಟೀಗ

ಪರ್ಸುರಾಮ್‌ಗೆ ಕ್ವಾಡಂಗಿ
ಸರು ಮುನಿಗಳಿಗೆ ಕ್ವಾಡಂಗಿ
ಗಣಪತಿಗೆ ಕ್ವಾಡಂಗಿ
ಮಾಗಣಪತಿಗೆ ಕ್ವಾಡಂಗಿ
ದಸದಿಕ್ಕಿಗೆ ಕ್ವಾಡಂಗಿ
ಮೆಟ್ಟಿದ ಭೂಮಿಗೆ ಕ್ವಾಡಂಗಿ
ಜಾಗ್ದ್ ಕರ್ತುಗೆ ಕ್ವಾಡಂಗಿ
ದೇವತಿಗಳಿಗೆ ಕ್ವಾಡಂಗಿ
ಇಂದ್ರ ದೇವ್ರಿಗೆ ಕ್ವಾಡಂಗಿ
ಸೂರ್ದೇವ್ರಿಗೆ ಕ್ವಾಡಂಗಿ
ಆಳಿ ಬಾರಲೇ ಕ್ವಾಡಂಗಿ
ನಲ್ದ್ ಬಾರಲೆ ಕ್ವಾಡಂಗಿ
ಒಲ್ದ್ ಬಾರಲೆ ಕ್ವಾಡಂಗಿ
ನಿನ್ನ ರೂಪೊ ತೋರಲೇ
ಹಿಂದ್ ಹೋಗಲೇ ಕ್ವಾಡಂಗಿ
ಬಾಳಿ ಹಣ್ದಲೆ ಕ್ವಾಡಂಗಿ
ಕೂತ ಕೋಣಿಯಲ್ ಕ್ವಾಡಂಗಿ
ನಿತ್ತ್ ಕೋಣಿಯಲ್ ಕ್ವಾಡಂಗಿ
ತಿರ್ಗಾ ಮುರ್ಗಾ ಕೋಣಿಯಲ್ ಕ್ವಾಡಂಗಿ
ಹಿಂದ್ಕ್ ಹೋಗಲೆ ಕ್ವಾಡಂಗಿ
ಮರ್ದ್ ಮರ್ಕೆ ಹಾರ್ದ್ಯಲೇ ಕ್ವಾಡಂಗಿ
ಸೊಂಟ ಬಚ್ಚ್ ಕ್ವಾಡಂಗಿ
ಕೈ ಚೊಂಟ್ ಕ್ವಾಡಂಗಿ
ಹೊಳ ಮಗ್ಲ್ ಕ್ವಾಡಂಗಿ
ಕ್ವಾರಿ ಮೀಸಿ ಕ್ವಾಡಂಗಿ
ಕ್ವಾರಿಗಣ್ಣು ಕ್ವಾಡಂಗಿ
ಬಾಳೆ ಹಣ್ಣಾಲೆ ಕ್ವಾಡಂಗಿ
ಗುಬ್ಬಿ ಕೊಣ್ತು ಕೋಣಿಯಲೇ
ನಯಿಲ್ ಕೊಣ್ತು ಕೋಣಿಯಲೇ
ನೀನ್ ಕಳ್ಳ ಕ್ವಾಡಂಗಿ
ಪರ್ಸಿ ಬೆನ್ನ ಹಿಡ್ದ್ಯಲೇ
ಭಕ್ತರ ನಿನನೇ ಹೊಗಳ್ವಂಗೇ
ನಿನ್ ರೂಪೇ ತೋರ್ಲ್ಸಲೇ
ಮಾಯ್ದ್ ರೂಪೋ ತೋರ್ಸ್ಲಲೇ
ಮತ್ಸಮಾರೊ ತೋರ್ಸಲೇ
ಕೂರ್ಮವತಾರೋ ತೋರ್ಸಲೇ
ಭಕ್ತರು ನಿನನೇ ಹೊಗಳ್ವಂಗೆ
ಚಂದದಿಂದೇ ಬರ್ಕಲೇ
ಆನಂದದಿಂದಲೇ ಬರ್ಕಲೇ

ಸಪ್ಪ್ ತಿಂಬ್ ಕ್ವಾಡಂಗಿ
ಕದ್ದ ತಿಂಬ್ ಕ್ವಾಡಂಗಿ
ಎಂಕಟ್ರ ಮಣನ್ ಗಂಟಾಲೇ
ಮುರ್ದ್ದ ತಿಂಬ್ ಕ್ವಾಡಂಗಿ
ನೀತಿವಂತೆ ಕ್ವಾಡಂಗಿ
ಹಲ್ಲ್ ಮನಿಯ ಬಿಡುವನು
ಹೊಸ್ ಮನಿಗೆ ತೆರಳುವನು
ಶ್ರೀ ರಾಮರಾಮ ಗೋಯಿಂದಾನಿ ಗೋಯಿಂದೋ ಗೋಯಿಂದಾ.

## ಶಿವರಾಮ ಸಂಧಿ

ಶಿವರಾಮ ಸಂಧಿ
ಶಿವಶಿವರಾಮ ಶಿವನೇ ರಾಮ
ಶಿವಶಿವರಾಮ ಸದಾಶಿವರಾಮ ॥ ॥
ವೀಣೆ ಒಂದಿಗೆ ತಾಳೆ ಪಾವದ ಸರ್ವೇಣಿ
ಜಾಣೆ ಸಾರದೆ ಕೊಡು ಶರ ಕಲ್ಯಾಣಿ ॥ ॥
ಎನ್ನದೇವ ಏಳು ಏನಗೊಲಿವ ಬಾಲೆ
ಬಿನ್ನ ವದನದ ಮುದ್ದು ಮೊಗದ ಸುಶೀಲೇ ॥ ॥
ಗಂಗಿಯ ಜಡೆಮುಡಿಯಲಿ ಹೊತ್ತ ಶಿವನೇ
ತುಂಗವಿಕ್ರಮ ರಮವಂಶ ಸಂಭವನೇ ॥ ॥
ಬೇಡಿದ ಖಳಗೆ ಕಾಮಿನಿಯ ಪಾಲಿಸಿದೆ
ಕೊಡಲು ಬಂದವರಿಗೆ ತ್ರಿಶೂಲ ಹಿಡಿದೆ ॥ ॥
ವೇದದ ಅನಂತವತಾರ ಚಿನ್ಮಯನೇ
ಭೂದೇವಿತನಯನೇ ಮಹನ್ನಾಪ್ರಿಯನೇ ॥ ॥
ಅಂಬ ತ್ರಿಮೋಕರ ಐಕ್ಯವ ಪಡೆದೆ
ಅಂಬೊಂದರಿವು ತಾಳಿ ಮರವೇಳು ತಂದೆ ॥ ॥
ಚಂದ್ರ ಸುರೇಶ್ವರ ಜಯ ಸೋಮನಾಥಗೆ
ಇಂದ್ರವಂದಿತ ರಾಮ ಜಯ ಪುಣ್ಯವಂತನೆ ॥ ॥
ಕವಿಜನ ಬುಧ ಜನರಡಿಗೆರಗುವೆನು
ತನ್ನಯವರನುತಿಸ ಶ್ರೀ ರಾಮನವನು ॥ ॥

ಹಾವಿನ ಹೆಡೆಯ ಬೆಟ್ಟಿಗೆ ಸುತ್ತಿದವನೇ
ದೇವತೆಗಳಿಗಾಗಿ ಧರೆ ಗಿಳಿದವನೇ ॥ ॥
ಬಿನುಗು ಜ್ಯೋತಿಯು ಉರಿವ ಸೊಗಸು ನೀನೊಡೆ
ಕನಕ ಕುಂಡಲವಿಟ್ಟ ಕವಿಯ ನೀ ಕಂಡೇ ॥ ॥
ಶಯ್ಯ ಧರ್ಮವನರುಹಿದೆ ರಘುಪತಿಗೆ
ಕಯ್ಯ ಉಂಗುರವಿತ್ತುಸ ಕಳುಹಿದೆ ಸತಿಗೆದ ॥ ॥
ಮೂರು ಲೋಕವೆ ನಿನ್ನ ಉದರದೊಳ್ತಾಳಿದೆ
ನೀರೆ ಕಾಲ್ಲಗಿರೆ ಶಾಪವ ಕಳೆದೆ ॥ ॥
ಅಂಧಕಾಸುರನ ಕೆಳಹಿಮ್ಮೆಟ್ಟಿ ತುಳಿದೆ
ಅಂಗದಗೆರಡು ಕೋಡ್ಗಳನೊಂದಿಸಿದೆ ॥ ॥
ಶ್ರೀ ಪರಮೇಶ್ವರ ಜಯ ಪಂಚವದನೇ
ಶ್ರೀ ಪತಿರಾಮನೆ ಮಹಾಪುಣ್ಯಸದನೇ ॥ ॥
ದೇವಗಣೇಶಾಸ್ತ್ರಯಂಬಕ ಸುತನೆ
ಈವುದು ಇದು ದಿವ್ಯಮತಿಗುಣಯುತನೇ ॥ ॥
ಶ್ರೀ ರಾಮ ರಾಮ ಗೋಯಿಂದಾನಿ ಗೋಯಿಂದಾನಿ ಗೋಯಿಂದಾ ॥ ॥

## ಕೋಲು ಸಂಧಿ

ಕೋಲು ಕೋಲೆನ್ನಿರಾ ರನ್ನದಾ ಕೋಲು ಕೋಲೆನ್ನಿರಾ
ಕೋಲು ಕೋಲೆನ್ನಾ ಕೋಲು ಕೋಲು ಚಿನ್ನದ ಕೋಲು
ಕೋಟಿ ಶ್ರೀಹರಿಯ ಬಲಗೊಂಟಿ ರನ್ನದಾ
ಮೊಡವಿಗೆ ಅಧಿಕವಾದ ಉಡುಪಿಗೆ ನಮ್ಮ ಕೃಷ್ಣ
ಹದಗೇರಿ ಬಂದು ನೆಲೆಸಿದ ರನ್ನದಾ
ಹದಗೇರಿ ಬಂದು ನೆಲೆಸಿದ ನಮ್ಮ ಕೃಷ್ಣ
ದೃಢ ಮಧ್ವ ಮುನಿರಾಯಗೊಲಿದನು ರನ್ನದಾ ॥ ॥
ಅಷ್ಟಮ ಸ್ತ್ರೀಯರಿಗೆ ಶ್ರೇಷ್ಠಾಂಕನೆನಿಸಲು ]
ಅಷ್ಟ ಮಠಗಳುಳ್ಳ ಯತಿಗಳು ರನ್ನದಾ ॥ ॥
ಅಷ್ಟ ಮಠಗಳುಳ್ಳ ಯತಿಗಳು ನಮ್ಮ ಕೃಷ್ಣನ
ಮುಟ್ಟಿ ಪೂಜೆಯ ಮಾಳ್ಪ ಶ್ರೇಷ್ಠರುಸ ರನ್ನದಾ ॥ ॥

ನಂದಗೋಕುಲ ಉಡುಪಿಯೆಂದು ಸಜ್ಜನರೆಲ್ಲ
ಬಂದು ಸೇವೆಯ ಮಾಳ್ಪರು ಚೆಂದದಿ ರನ್ನದಾ ॥ ॥
ಬಂದು ಸೇವೆಯ ಮಾಳ್ಪರು ಚೆಂದದಿ ನಮ್ಮ ಕೃಷ್ಣನ
ಹೊಂದಿದ ಸುಖದಿಂದ ಬಾಳ್ವರುದ ರನ್ನದಾ ॥ ॥
ದೇವಕಿ ಸುತನಾಗಿ ಮಾವ ಕಂಸನ ಕೊಂದ
ಗೋವಕಾವರ ಕುಲದೇವನು ರನ್ನದಾ ॥ ॥
ಗೋವ ಕಾವರ ಪುಲದೇವನು ನಮ್ಮ ಕೃಷ್ಣ
ದೇವೇಂದ್ರದ ಸುತನಿಗೆ ಭಾವನು ರನ್ನದಾ ॥ ॥
ಕುಲದೋಷಗಳನ್ನು ಕಳೆಯಲ್ಕೆ ತೇಬಿಯ
ಒಲಿದು ಏರಿಬಂದ ಕಲ್ಕ್ಯನು ರನ್ನದಾ ॥ ॥
ಒಲಿದು ಏರಿಬಂದ ಕಲ್ಕ್ಯನು ನಮ್ಮ ಕೃಷ್ಣ
ಹಲವು ರೂಪಗಳಂತೆ ಹೊಳೆವನು ರನ್ನದಾ ॥ ॥
ಪರಶು ಹಿಡಿದು ಕತ್ರಿಯ ಕುಲವ ಸಂಹರಿಸಿದ
ಸುರಪಕವನ್ನು ತಂದು ಮೆರೆದನು ರನ್ನದಾ ॥ ॥
ಸರಪಕವನ್ನು ತಂದು ಮೆರೆದನು ನಮ್ಮ ಕೃಷ್ನ
ಮೆರೆಯುವ ಜಮದಗ್ನಿ ವರಪುತ್ರ ರನ್ನದಾ ॥ ॥
ನೀ ತೆಗೋಸುಗ ಕಪಿಸೇನೆಯ ಕೂಡಿಕೊಂಡು
ಸೇತು ಕಟ್ಟಿದ ರಘುನಾಥನು ರನ್ನದಾ ॥ ॥
ಸೇತು ಕಟ್ಟಿದ ರಘುನಾಥನು ನಮ್ಮ ಕೃಷ್ಣ
ಭೂತಳದಧಿಪತಿ ಪ್ರೀತನು ರನ್ನದಾ ॥ ॥
ಶ್ರೀ ರಾಮ ರಾಮ ಗೋಯಿಂದಾನಿ ಗೋಯಿಂದೋ ಗೋಯಿಂದಾ ॥ ॥

## ಹೊಗಳಿಕೆ ಸಂಧಿ

ಒಡಿಯರ್ಲೋಬ್ಭಿಯಲ್ಲಿಪ್ಪಂತ
ಪುಟ್ಟಯ್ ಮಯ್ಯರೆಂಬರು
ಮಾ ದಡ್ಡ ದನಿಗಳು
ಮಾ ದಡ್ಡ ದೊರ್ಗಳು
ಆರ್ಗದ್ ಗಟ್ಟದ್
ಆರ್ಗದ್ ಗಟ್ಟದ್ ಕೆಳ್ಗಾಲೇ
ಮಾಗ್ಣಿಗ್ ಒಪ್ದ್ ದೊರಿಗಳು

ಬೆಂಗ್ಳೂರಿಗೆ ಹ್ವಾಪರು
ಬೆಂಗ್ಳೂರಿಗೆ ಹ್ವಾಪಂಗೆ
ಅಲ್ಲೆ ಅಪ್ಪಂತ ಜನಗಳು
ಏನ್ ಎಂದೇ ಹೇಳೂರು
ಯಾವೂರರ್ಸಿನ ದಳವಯ್ಯಾ ?
ಯಾವೂರರ್ಸಿನ್ ದಂಡಯ್ಯಾ ?
ಯದುಬಲು ಹೊಯ್ಯಾಂಗೆ

ಹೋಬ್ಳಿಗ್ ಒಪ್ದ್ ದೊರಿಗಳು
ಒಂದಾನೊಂದು ದಿನ್ದೊಳ್ಗೆ
ಮನ್ಸಿಗ್ ಯೋಚ್ನಿ ಮಾಡೂರುದ
ತೀರ್ಶ್ ಯಾರ್ತಿ ಮಾಡ್ಕಲೇ
ಎಂದೇ ಯೋಚ್ನಿ ಮಾಡ್ಕಂಡೇ
ಮಂಚ್ಲ್ ಯೋಯರ್ ಕರ್‍ಸೂರು
ಒಕ್ಲ ಮಕ್ಳ ಕರ್‍ಸೂರು
ನೂರೊಂದ್ ವಿಕ್ಲ ಕರ್‍ಸೂರು
ಉಪ್ಪರ್‍ಗಿ ಮ್ಯಾಲ್ ತೆರ್‍ಳೂರು
ಕಪಾಟ್ ಬಾಗ್ಲ್ ತೆಗ್ವರು
ಪಟ್ಟಿ ಪೀತಾಂಬ್ರ ಉಡೂರು
ದಾಂಬ್ ಸರ್ಪಳಿ ಹಾಕೂರು
ಗತ್ತಿನ ರುಮಾಲಿ ಕಟ್ಟೂರು
ಗತ್ತಿನ್ ರುಮಾಲಿ ಕಟ್ಗಂಡೇ
ಹೆರ್‍ಗ್ ಹೆರ್‍ಟ್ ಬಪ್ಪರು
ತಾವ್ ಮಂಚ್ಲ್ ಹತ್ಗಂಡೇ
ಒಕ್ಲ್ ಮಕ್ಕಳ ಕರ್‍ಕಂಡೇ
ಇಲ್ಲಿಂದ್ ತೆರುಳಿ ಹೋಪರು
ಎಲ್ಲಿಗಾಯಿ ಹೋಪರು
ಮೈಸೂರ್ ಬಿಲ್ಲೀಗ್ ಹೋಪರು
ಮೈಸೂರ್ ಬಿಲ್ಲೀಗ್ ಹೋಪಂಗೆ
ಅಲ್ಲೆ ಇಪ್ಪ್ ಜನಗಳು
ಏನ್ ಅಂದೇ ಹೇಳೂರು
ಯಾವೂರರ್‍ಸಿನ ದಂಡಯ್ಯ ?
ಕಪಿ ಸೈನ್ಯೋ ಹೊಯ್ದಾಂಗೆ
ಅದ್ರೋಳ್ಗೊಬ್ಬ ಬುದ್ವಂತ
ಏನ್ ಅಂದೇ ಹೇಳೂನು
ಒಡೀರೋಬ್ಳಿಯಲ್ಲಿಪ್ಪ
ಎಯ್ದ್ನಿ ಆರ್ತಿ ಮಾಡ್ಸೂದು
ಕಿಸ್ಣ್ ಚಕ್ರೋ ಹಿಡ್ದಾಂಗೆ

ಅದ್ರೊಳ್ಗೊಬ್ಬ ಬುದ್ದ್‌ವಂತ
ಎನ್ ಅಂದೇ ಹೇಳೂನು
ಒಡೀರೊಬ್ಳಿಲಿಪ್ಪಂತ
ಪುಟ್ಟಯ್ ಮೈರ ದಂಡಾಲೇ
ಪುಟ್ಟಯ್ ಮೈರ ದಳ್ವಾಲೇ
ಎಂದ್ ಆರೂ ಹೇಳ್ವಂಗೆ
ಅಲ್ಲಿಂದ್ ತೆರುಳಿ ಹ್ವಾಪರು
ಇಲ್ಲಿಗಾಯಿ ಹ್ವಾಪರು
ಗೋಯಿಂದ್ರಾಜ್ನ ಪುರ್‍ವಾಲೇ
ಅಲ್ಲಿಗಾಯಿ ಹೋಪಂಗೆ
ಅಲ್ಲೇ ಅಪ್ಪಂತ್ ಗೋಸಾಯಿ
ಏನ್ ಅಂದೇ ಹೇಳೂನು
ಯಾವೂರರ್‍ಸಿನ್ ದಂಡಯ್ಯಾ ?
ಯಾವೂರರ್‍ಸಿನ್ ದಳವಯ್ಯಾ ?
ಕಾಲ್ನ್ ಪಾಳ್ಯ ಹೊಟ್ಟಾಂಗೆ
ಅದ್ರೋಳ್ಗೊಬ್ಬ ಬುದ್ಧವಂತ
ಎನ್ ಅಂದೇ ಹೇಳೂನು
ಒಡೀರೋಬ್ಳಿಲಿಪ್ಪಂತ
ಪುಟ್ಟಯ್ ಮೈರ ದಂಡಾಲೇ
ಪುಟ್ಟಯ್ ಮೈರ ದಳ್ವಾಲೇ
ಎಂದೇ ಆರೂ ಹೇಳ್ವಂಗೆ
ಅಲ್ಲಿಂದ್ ತೆರುಳು ಹ್ವಾಪರು
ಎಲ್ಲಿಗಾಯಿ ಹ್ವಾಪರು
ಮಂದ್ರ್‍ಗಿರಿಗೆ ತೆರ್‍ಳೂರು
ಎಂಕಟ್ರಮಣ ಸ್ವಾಮಿಯ
ದೇವ್ರ್ ಮುಂದ್ ನಿಗಂಡೇ
ಒಂದ್ ಆರ್ತಿ ಮಾಡ್ಸೂರು
ರಾಮ್ ಬಾಣೊ ಹೊಡ್ದಾಂಗೆ

ಮೂರ್ನೆ ಆರ್ತಿ ಮಾಡ್ಸೂರು
ಈಸ್ವರ್ ತ್ರಿಶೂಲ ಹಿಡ್ದಾಂಗೆ
ಪುಟ್ಟಯ್ ಮ್ಯೆರ ದಂಡಾಲೇ
ಪುಟ್ಟಯ್ ಮ್ಯೆರ ದಳ್ವಾಲೇ
ಎಂದ್ದ ಆರೂ ಹೇಳ್ವಂಗೆ
ಅಲ್ಲಿಂದ್ ತೆರುಳಿ ಹ್ವಾಪರು
ಎಲ್ಲಿಗಾಯಿ ಹ್ವಾಪರು
ಹತ್ತವತಾರ್ದ ಸ್ವಾಮಿಯು
ಮತ್ಸವತಾರ್ದ ಒಡಿಯನು
ಬಾಳ ಸಂತೋಷ ಪಡುವರು
ಅಸ್ಟ್ ಬಾಗ್ಯೋ ಕೊಡೂರು
ವಾಲಿ ಬಾಗ್ಯೋ ಕೊಡೂರು
ಬಾಳ ಸಂತೋಷ ಪಡುವರು
ಪುಟ್ಟಯ ಮ್ಯೆಯರೆಂಬರು
ಹೊನ್ನ್ ಮನಿನೇ ಬಿಡುವರು
ಅಲ್ಲೇ ಮಳ್ಗೀಗ್ ಹೋಗೂರು
ನೂರೊಂದುಡ್ಗಿರಿ ಕರ್ಸೂರು
ಜನ್ಕೊಂದುಡ್ಗಿರಿ ಕೊಡೂರು
ಮನೀಗ್ ತೆರುಳಿ ಬಪ್ಪರು
ಶ್ರೀ ರಾಮ ರಾಮ ಗೋಯಿಂದಾನಿ ಗೋಯಿಂದೋ ಗೊಯಿಂದಾ.

***

# ಅನುಬಂಧ

೧. ವಕ್ತೃ ಮಾಹಿತಿ

೨. ಪ್ರಶ್ನಾವಳಿ

೩. ಪರಾಮರ್ಶನ ಸಾಹಿತ್ಯ

೪. ಮೌಖಿಕ ಸಾಹಿತ್ಯ – ಆಯ್ದ ಪಠ್ಯಗಳು

೫. ಛಾಯಾಚಿತ್ರಗಳು

ಚಿತ್ರ ೨. ಬತ್ತಲೆ ಪರಮೇಶ್ವರಿ



ಚಿತ್ರ ೪. ಚಷ್ಟೆಕಾರ ನಾಯ್ಕರ ಹೋಳಿ ಕುಣಿತ



ಚಿತ್ರ ೫. ಚುಣ್ಣನ ಕುಣಿತ

# ಚಿತ್ರ ೬. ಕರಕುಶಲ ಕಲೆ ಮತ್ತು ಗುಡಿಗಾರಿಕೆ









ಚಿತ್ರ ೬. ಕರಕುಶಲ ಕಲೆ ಮತ್ತು ಗುಡಿಗಾರಿಕೆ



# ಚಿತ್ರ ೧೨. ಕದಿರು ಹಬ್ಬ



ಚಿತ್ರ ೧೪. ಹಾರ್ಗೋಳಿ ಅಥವಾ ಹರಿವಾಣ ನೈವೇದ್ಯ



ಚಿತ್ರ ೧೫. ನಾಗಬಂಧದಿಂದ ಕೂಡಿದ ಮಾರಿ ಮುಖವಾಡ



ಚಿತ್ರ ೧೭. ಗೌರಿಯ ರುಂಡದ ಮೆರವಣಿಗೆ



ಚಿತ್ರ ೧೭. ಗೌರಿ ಮುಂಡದ ಪೂಜೆ



ಚಿತ್ರ ೧೭. ಕೇದಾರನಾಥ ವ್ರತ

ಚಿತ್ರ ೧೮. ದೀಪೋತ್ಸವ





ಚಿತ್ರ ೧೮. ದೀಪೋತ್ಸವದ ದಿನ ಪರ್ಕಳಿ ಸುಡುವುದು

ಚಿತ್ರ ೨೦. ಒಕುಳಿ ಮೆರವಣಿಗೆಗೆ ಹೋಗುತ್ತಿರುವ ಪಟ್ಟದ ಶೆಟ್ರು



ಚಿತ್ರ ೨೦. ನೀರು ತುಂಬಿದ ಒಕುಳಿ ಹೊಂಡ

ಗತವೈಭವ ಸಾರುವ ದೇವರ ಕೆರೆ



ಗತವೈಭವವನ್ನು ನೆನಪಿಸುವ ನಗಾರಿ

ಮೂಡುಕೇರಿಯ ಭೈರವ ಶಿಲ್ಪ

ಸ್ತೂಪ ಮಾದರಿಯ ಭೈರವನ ದೇವಸ್ಥಾನ

## ಭವ್ಯವಾಗಿ ಪುನರ್‌ನಿರ್ಮಾಣಗೊಂಡ ಪಡುವಕೇರಿಯ
## ಶ್ರೀ ಮಹತೋಭಾರ ಮಹಾಲಿಂಗೇಶ್ವರ ದೇವಾಲಯ



